ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.

,, ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ

,, ವಿ. ಕೃ. ಗೋಕಾಕ, ಎಂ. ಎ.



ಮುದ್ರಕರು :
ಶೇಷಗಿರಿರಾವ ಗೋವಿಂದರಾವ
ಕುಲಕರ್ಣಿ
ಸಾಧನ ಪ್ರೆಸ್, ಧಾರವಾಡ
೩೦—೩೮

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ



ಸಂಪಾದಕರು :

ಜಿ. ಬಿ. ಜೋಶಿ

# ನಮ್ಮ ಮಾತು

ಈ ಗ್ರಂಥವು ನಾವು ಅಪೇಕ್ಷಿಸಿದಕ್ಕಿಂತ ತೀರ ದೊಡ್ಡದಾಯಿತು. ಕನ್ನಡ ವಾಙ್ಮಯವು ಒಳಿಯಬೇಕು, 'ಬೆಳಕಿಗೆ ಬರಬೇಕೆಂಬ ಒಂದು ಉದ್ದೇಶದಿಂದಲೇ ಈ ಗ್ರಂಥಮಾಲೆಯ ಕಾರ್ಯವನ್ನು ಕಷ್ಟನಷ್ಟಗಳನ್ನು ಲೆಕ್ಕಿಸದೆ ಮುಂದುವರಿಸುತ್ತಿದ್ದೇವೆ. ಸತತವಾಗಿ ಐದು ವರ್ಷಗಳಲ್ಲಿ ೩೦–೩೩ ಒಳ್ಳೇ ಪುಸ್ತಕಗಳನ್ನು ಪ್ರಕಟಿಸಿ ಕನ್ನಡಿಗರ ವಿಶ್ವಾಸಕ್ಕೆ ಈ ಮಾಲೆಯು ಪಾತ್ರವಾಗಿದೆ ಎಂದು ನಾವು ನಂಬಿದ್ದೇವೆ. ಹೆಚ್ಚು ಸತ್ವ ಪರೀಕ್ಷೆ ಮಾಡದೆ ನಮ್ಮ ಚಂದಾದಾರ ಮಿತ್ರರು ಇನ್ನೂ ಹೆಚ್ಚು ಚಂದಾದಾರರನ್ನು ದೊರಕಿಸಿ ಕೊಡಲು ನಮಗೆ ನೆರವಾಗಬೇಕೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.'

ಈ ಲೇಖನಗಳನ್ನು ಸಂಗ್ರಹರೂಪವಾಗಿ ನಮ್ಮ ಮಾಲೆಯಿಂದ ಪ್ರಕಟಿಸಲು ಅಪ್ಪಣೆ ಕೊಟ್ಟದ್ದಕ್ಕಾಗಿ ಶ್ರೀಮಾನ್ ಪ. ರಮಾನಂದರಾಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಅದರಂತೆಯೆ ಉತ್ತಮವಾದ ಚಿತ್ರಗಳನ್ನು ಬರೆದುಕೊಟ್ಟ ಶ್ರೀ. ರಮಾನಂದರಾಯರ ಆಪ್ತಮಿತ್ರರಾದ ಶ್ರೀಮಾನ್ ಟಿ. ಮುಕುಂದರಾಯರಿಗೆ ನಾವು ಋಣಿಯಾಗಿರುವೆವು, ಎನ್ನುವುದು ತೀರ ಉಪಚಾರವಾದರೂ ಅವರ ಉಪಕಾರವನ್ನು ಸ್ಮರಿಸಲು ನಮಗೆ ಬೇರೆ ಶಕ್ತಿಯಿಲ್ಲ. ಹಾಗೆಯೆ ಈ ಸಂಗ್ರಹಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟ ಶ್ರೀಮಾನ್ ದ. ರಾ. ಬೇಂದ್ರೆಯವರಿಗೂ ನಾವು ತುಂಬಾ ಉಪಕೃತರಾಗಿದ್ದೇವೆ.

—**ಸಂಪಾದಕ**

# ತಪ್ಪು ಒಪ್ಪು

ಪತ್ರಿಕಾಕರ್ತರಾದ ಅನೇಕ ಗೆಳೆಯರ ಒತ್ತಾಸೆಗೆ ಬಲಿಬಿದ್ದು ಕ್ಷಣಿಕ ಮನೋರಂಜನೆಗಾಗಿ ಬರೆಯುವ ಹುಚ್ಚು ಸಾಮಾನ್ಯವಾಗಿ ಎಲ್ಲ ಯುವಕರಿಗೂ ಇರುವಂತೆ ನನಗೂ ಕೆಲವು ವರ್ಷಗಳ ಹಿಂದೆ ಬಹಳ ವಿತ್ತು. ಆದರೆ ಅಂದಿನಿಂದ ನಾನು ಪ್ರಾಯದಲ್ಲಿಯಾದರೂ ಬೆಳೆದಿದ್ದೇನೆ. ಇದರಿಂದ ಆ ಹುಚ್ಚು ಎಂದೋ ಮಾಯವಾಗಿದೆ. ಆದರೂ ನನ್ನಿಂದ ಸರಿದುಹೋದ ಆ ಹುಚ್ಚಾಟದ ಫಲವಾಗಿ ಎಲ್ಲೆಲ್ಲಿಯೋ ಹಳೆ ಪತ್ರಿಕೆಗಳ ಹಾಳೆಗಳಲ್ಲಿ ಅವಿತುಕೊಂಡಿದ್ದ ಈ ಅಲ್ಪ ಬರಹಗಳನ್ನೆಲ್ಲ ಈಗ—ಅನೇಕ ವರ್ಷಗಳ ಅನಂತರ—ಪುನಃ ಬೆಳಕಿಗೆ ತಂದು, ಒಟ್ಟುಗೂಡಿಸಿ ಕನ್ನಡಿಗರ ಮುಂದಿಡಲು ಪ್ರಯತ್ನಿಸುವ ನನ್ನ ಗೆಳೆಯರಾದ ಶ್ರೀಯುತ ಜಿ. ಬಿ. ಜೋಶಿಯವರ ಎದೆಗಾರಿಕೆಯನ್ನು ನೋಡಿ ನಾನೇ ದಿಗಿಲುಪಟ್ಟಿದ್ದೇನೆ. ಒಂದು ವೇಳೆ ಹೀಗೆ ಮಾಡಲು ಬರೇ ಗೆಳೆತನದ ವಾತ್ಸಲ್ಯವು ಅವರನ್ನು ಪ್ರೇರೇಪಿಸಿರಬಹುದೇ ?– ಎಂಬುದೊಂದು ಶಂಕೆಯೂ ನನಗೆ ಬಲವಾಗಿದೆ.

ಅದು ಹೇಗೂ ಇರಲಿ. ಈ ಹುಚ್ಚು ಬೆಳದಿಂಗಳಿನ ಬರೆಹಗಳು ತಮ್ಮ ಕೈಯಲ್ಲಿವೆಯಷ್ಟೇ. ಅವುಗಳನ್ನು ಓದುವ ಮೊದಲು ನಾನು ಸ್ವಲ್ಪ ಎಚ್ಚರಿಕೆಯನ್ನು ಕೊಡಬೇಕಾಗಿದೆ. ಇವುಗಳನ್ನೆಲ್ಲ ಬರೆಹಗಳೆಂದು ಕರೆಯುವ ಬದಲಾಗಿ ಕೇವಲ ಪ್ರಯೋಗಗಳೆಂದು ಕರೆಯುವುದು ಒಳಿತು. ಇಂಗ್ಲಿಷು ಸಾಹಿತ್ಯದ—ಮುಖ್ಯವಾಗಿ ಇಂಗ್ಲಿಷು ವಿನೋದ ಸಾಹಿತ್ಯದ ವರ್ಚಸ್ಸನ್ನು ವಿನೋದಶೂನ್ಯವಾದ ಕನ್ನಡ ಸಾಹಿತ್ಯದಲ್ಲಿ ಎಷ್ಟರಮಟ್ಟಿಗೆ ತರಲು ಸಾಧ್ಯವಿದೆ ಎಂಬುದೇ ಈ ಪ್ರಯೋಗಗಳ ಗುರಿಯು. ಇದಕ್ಕಿಂತ ಹಿರಿದಾದ ಗುರಿಯು ಈ ಪ್ರಯೋಗಗಳಿಗೆ, ಅವುಗಳನ್ನು ಮಾಡುವಾಗಲೂ

ಇದ್ದಿಲ್ಲ, ಈಗಲೂ ಇಲ್ಲ. ಈ ಪ್ರಯೋಗಗಳೆಲ್ಲ ಬರೇ ಪ್ರಯೋಗಗಳಾಗಿಯೇ ಉಳಿದಿವೆ ಅಲ್ಲದೆ ಸಾಹಿತ್ಯದ ಹೊರಗಿನ ಅಂಚನ್ನು ಕೂಡ ಮುಟ್ಟಿಲ್ಲವೆಂದು ನಾನೇ ಚೆನ್ನಾಗಿ ಅರಿತಿದ್ದೇನೆ. ಬರೇ ಪ್ರಯೋಗಗಳಾಗಿರುವುದರಿಂದ ಇವುಗಳನ್ನು ಓದುವಾಗ್ಗೆ ಬಲ್ಲವರು 'Mark Twain, P. G Wodehouse, W. W. Jacobs, F. W. Thomas, O' Henry ಮೊದಲಾದವರ ಕೈಚಳಕನ್ನೇ ಇವುಗಳಲ್ಲಿ ಸ್ಥೂಲಮಟ್ಟಿಗಾದರೂ ಕಾಣುವರು. ಇತರರಾದರೋ, ನಮ್ಮದೊಂದು ಹಿರಿಯ ಮಾಸಪತ್ರಿಕೆಯ ವಿಮರ್ಶಕರು ಈ ಸಂಗ್ರಹದಲ್ಲಿರುವ ಒಂದು ಹರಟೆಯನ್ನು ಕುರಿತು ಒಮ್ಮೆ ತಿಳಿದುಕೊಂಡಂತೆ, ಇದೊಂದು ವಿಕಟ ರೀತಿಯ ಬರೆವಣಿಗೆ ಎಂತಲೇ ತಿಳಿದುಕೊಳ್ಳುವುದು ನಿಶ್ಚಯವು.

ಎರಡನೆಯ ಎಚ್ಚರಿಕೆಯೇನೆಂದರೆ, ಈ ಹುಚ್ಚು ಬೆಳದಿಂಗಳಿನ ಬರೆಹಗಳಲ್ಲಿ ಬರುವ ಒಂದು ವ್ಯಕ್ತಿಯಲ್ಲದೆ ಇತರ ಎಲ್ಲ ವ್ಯಕ್ತಿಗಳೂ, ಸನ್ನಿವೇಶಗಳೂ ಕೇವಲ ಕಾಲ್ಪನಿಕವು. ಕಾಲ್ಪನಿಕವಲ್ಲದ ಆ ಒಂದು ವ್ಯಕ್ತಿ ಯಾವುದೆಂದರೆ—ನಾನೇ! ಆದರೂ 'ನಾನು' ಬರುವ ಸನ್ನಿವೇಶಗಳು ಕೂಡ ಕೇವಲ ಕಾಲ್ಪನಿಕವು. ಇದನ್ನು ಹೇಳುವ ಅವಶ್ಯಕತೆಯಿದೆ. ಏಕೆಂದರೆ ನನಗೆ ನೆನಪಿದೆ, ನನ್ನ 'ಅಂಕು ಡೊಂಕು ಸಂಕಪಾಲ' ಎಂಬುದೊಂದು ಹರಟೆಯು ಮೊದಲು ಮಂಗಳೂರಿನ 'ರಾಷ್ಟ್ರಬಂಧು' ವಿನಲ್ಲಿ ಪ್ರಕಟವಾದೊಡನೆ ನನಗೆ ಪರಿಚಿತರಾದವರೊಬ್ಬರು–ಆಪ್ತ ಗೆಳೆಯರಲ್ಲ–ನನ್ನ ಬಳಿಗೆ ಓಡಿಬಂದು, 'ನಿಮ್ಮ ಆ ಅಪೂರ್ವ ಬೇನೆಯ ವಿಷಯ ನನಗೆ ಗೊತ್ತೇ ಇರಲಿಲ್ಲವಲ್ಲ! ಈಗಲಾದರೂ ಸೌಖ್ಯದಲ್ಲಿರುವಿರಷ್ಟೇ?' ಎಂದು ಅತ್ಯಂತ ವ್ಯಾಕುಲತೆಯಿಂದ ಕೇಳಿದುದು! (ಆ ಹರಟೆಯ ಲಕ್ಷಣವು ಏನೂ ಇರಲಿ; ಈ ಮಹನೀಯರು ತಮಗೆ ತಿಳಿಯದೇನೇ ಒಂದು ಸ್ತುತಿಪೂರ್ವಕ ನುಡಿಯನ್ನು ಅದರ ವಿಷಯವಾಗಿ ಆಡಿದರೆಂಬುದೇ ನನಗೆ ಹೆಮ್ಮೆ!)

ಮೂರನೆಯ ಎಚ್ಚರಿಕೆಯೇನೆಂದರೆ, ಈ ಹರಟೆಗಳು ವಿಡಂಬನಗಳಲ್ಲ. ಅವುಗಳನ್ನು ಬರೆಯುವಾಗ್ಗೆ ಯಾವ ವ್ಯಕ್ತಿ, ಜಾತಿ, ಮತವನ್ನಾದರೂ ಹಳಿಯಬೇಕೆಂಬ ಉದ್ದೇಶವು ನನಗೆ ಕನಸಿನಲ್ಲಿಯೂ ಇರಲಿಲ್ಲ.

ಸಾಮಾನ್ಯ ಜೀವನದ ಕೆಲವು ಸನ್ನಿವೇಶಗಳನ್ನು ಬರೀ ವಿನೋದದೃಷ್ಟಿಯಿಂದ ನೋಡಿ, ಅವುಗಳನ್ನು ತೊದಲುನುಡಿಗಳಿಂದಾದರೂ ಚಿತ್ರಿಸಲು ಯತ್ನಿಸಿರುವೆನಲ್ಲದೆ, ಕಲುಷಿತ ಹೃದಯದಿಂದಲ್ಲ. ಇವುಗಳಲ್ಲಿರುವ ಹಾಸ್ಯವು ಒಂದು ವೇಳೆ ವಿಕಟವಾಗಿ ಕಾಣಬಹುದೆಂದು ಒಪ್ಪುತ್ತೇನೆ; ಆದರೆ ಕಟುವಾಗಿ ಎಂದೂ ಕಾಣಲಿಕ್ಕಿಲ್ಲವೆಂದು ನೆನಸುತ್ತೇನೆ. ಈ ಸಂಗ್ರಹದಲ್ಲಿರುವ ಒಂದು ಬರೆಹವು ಮಾತ್ರ ವಿಡಂಬನವೆಂದು ಹೇಳಬಹುದು. ಅದು ಯಾವುದೆಂದರೆ 'ಪತ್ತೇದಾರನಾದ ಸೂಕ್ಷ್ಮಬುದ್ಧಿಯು.' ಆದರೆ ಇದು ಕೂಡ ನಮ್ಮಲ್ಲಿ ಪ್ರಸಿದ್ಧಿಗೆ ಬಂದಿರುವ ಒಂದು ಮಾದರಿಯ ಪತ್ತೇದಾರಿ ಕತೆಯ ವಿಡಂಬನವಾಗಿರುವುದಲ್ಲದೆ ಯಾವುದಾದರೊಂದು ವ್ಯಕ್ತಿ ಅಥವಾ ಜಾತಿಯ ವಿಡಂಬನವಲ್ಲವೆಂದು ನಾನು ಬೇರೆ ಹೇಳಬೇಕಾಗಿಲ್ಲವಷ್ಟೆ?

ವಿನೋದಕರವಲ್ಲದ ಬರೆಹಗಳ ವಿಷಯ ಹೇಳಲು ಸಂಕೋಚಪಡುತ್ತೇನೆ. 'ನಾಗಣ್ಣ'ನು ದಿವಂಗತ ಶ್ರೀಮಾನ್ ಪಂಜೆ ಮಂಗೇಶರಾಯರ 'ನಾಗಣ್ಣನ ಕನ್ನಡಕ'ದಿಂದ ಉದ್ಭವಿಸಿದವನು. 'ನಾಗಣ್ಣ' 'ಕೇಸರಿ' 'ಅರವಿಂದ'—ಈ ಮೂರು ವ್ಯಕ್ತಿಗಳನ್ನು ಕುರಿತು ಅನೇಕ ಚಿಕ್ಕ ಕಥೆಗಳನ್ನು ಹೆಣೆಯಬೇಕೆಂದಿದ್ದೆನು. ಅವುಗಳಲ್ಲಿ ಹಿರಿದಾದ ಕಥೆಯೇ 'ನಾಗಣ್ಣನ ಕನ್ನಡಕ'ವೆಂದಾಗಬೇಕಿತ್ತು. ಆದರೆ 'ನಾಗಣ್ಣನ ಕನ್ನಡಕ'ವು ಇನ್ನೂ ಗರ್ಭಾವಸ್ಥೆಯಲ್ಲಿಯೇ ಇದೆ! ಉಳಿದ ಕಥೆಗಳೂ ಹಾಗೆಯೇ ಇವೆ! ಹೇಗಿದ್ದರೂ, ಈ ಸಂಗ್ರಹದಲ್ಲಿರುವ ವಿನೋದಕರವಲ್ಲದ ಕಥೆಗಳನ್ನು ಓದುವಾಗ್ಗೆ ಓದುಗರು ಒಂದು ಸಂಗತಿಯನ್ನು ಮಾತ್ರ ನೆನಪಿನಲ್ಲಿಡಬೇಕಾಗಿ ಪ್ರಾರ್ಥಿಸುತ್ತೇನೆ. ಅದೇನೆಂದರೆ ಅವುಗಳನ್ನೆಲ್ಲ ಬರೆದು ಇಂದಿಗೆ ಅನೇಕ ವರ್ಷಗಳು ಸಂದಿವೆ. ಉದಾಹರಣೆಗಾಗಿ, 'ಚಿನ್ನದ ತೊಟ್ಟಿಲ'ನ್ನು ಬರೆಯುವಾಗ್ಗೆ 'The Hindu Religious Endowments Act' ಕೂಡ ಆಚರಣೆಗೆ ಬಂದಿರಲಿಲ್ಲ.

ಈ ಎಲ್ಲ ಬರೆಹಗಳನ್ನು ಮೊಟ್ಟಮೊದಲು ತಮ್ಮ ತಮ್ಮ ಪತ್ರಿಕೆಗಳಲ್ಲಿ ಅಚ್ಚು ಹಾಕಿದ ಎಲ್ಲ ಪತ್ರಿಕಾಕರ್ತರಿಗೆ ನಾನು ತುಂಬ ಋಣಿ

ಯಾಗಿದ್ದೇನೆ. ಅಲ್ಲದೆ ಇವುಗಳಲ್ಲಿ ಕೆಲವನ್ನು ಆಯ್ದು, ವಿವಿಧ ಲೇಖಕರ ಕಥೆಗಳ ಸಂಗ್ರಹಗಳಲ್ಲಿ ಪ್ರಕಟಿಸಿರುವ ಗ್ರಂಥಕರ್ತರಿಗೂ ಪ್ರಕಾಶಕರಿಗೂ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸಬೇಕಾಗಿದೆ. ಎಲ್ಲಕ್ಕೂ ಮಿಗಿಲಾಗಿ, ಈ ಬರೆಹಗಳನ್ನೆಲ್ಲ ಸಂಗ್ರಹಿಸಿ ಕನ್ನಡಿಗರ ಮುಂದಿಡಲು ಸಾಹಸಪಟ್ಟ ನನ್ನ ಗೆಳೆಯರಾದ ಶ್ರೀಯುತ ಜಿ. ಬಿ. ಜೋಶಿಯವರಿಗೆ ನಾನು ತುಂಬ ಆಭಾರಿಯಾಗಿದ್ದೇನೆ. ಒಂದು ವೇಳೆ ಈ ಹುಚ್ಚುಬೆಳದಿಂಗಳಿನ ಬರೆಹ ಗಳು! ಅನೇಕರಿಗೆ ರುಚಿಸದಿರಬಹುದು. ಆದರೆ ಅವುಗಳಿಗೆ ವಿಶೇಷವಾದ ಕಳೆಯನ್ನು ಕೊಟ್ಟ ಶ್ರೀಯುತ ಟಿ. ಮುಕುಂದರಾಯರ ಚಿತ್ರಗಳಾದರೂ ರುಚಿಸಬಹುದಷ್ಟೇ? ಈ ಮಹನೀಯರ ಮಹದುಪಕಾರವನ್ನೂ, ಈ ಅಲ್ಪಕೃತಿಗಳಿಗೆ ಮುನ್ನುಡಿಯನ್ನು ಬರೆಯಲೊಪ್ಪಿದ ಶ್ರೀಯುತ ಬೇಂದ್ರೆ ಯವರ ಪ್ರೀತಿವಾತ್ಸಲ್ಯವನ್ನೂ ನಾನು ಎಂದೂ ಮರೆಯುವಂತಿಲ್ಲ.

ಶ್ರೀಯುತ ಜೋಶಿಯವರು ಈ ಸಂಗ್ರಹವನ್ನು ತಮ್ಮ ಮನೋ ಹರ ಗ್ರಂಥಮಾಲೆಯ ಒಂದು ಕುಸುಮವನ್ನಾಗಿ ಮಾಡಬೇಕೆಂದು ನಿಶ್ಚಯಮಾಡಿದಂದಿನಿಂದ ನನ್ನಲ್ಲಿ ಒಂದು ಮಹತ್ವಾಕಾಂಕ್ಷೆಯಿತ್ತು. ಅದೇನೆಂದರೆ, ಈ ಸಂಗ್ರಹದ ಮೊದಲು ಪ್ರತಿಯನ್ನು (ದಿವಂಗತ) **ಶ್ರೀಮಾನ್, ಪಂಜೆ ಮಂಗೇಶರಾಯರ** ದಿವ್ಯ ಹಸ್ತಗಳಲ್ಲಿರಿಸಿ ಅವರ ಆಶೀರ್ವಾದವನ್ನು ಪಡೆದು ಕೃತಾರ್ಥನಾಗಬೇಕೆಂದು. ಆದರೆ ವಿಧಿಯದೆಸೆಯಿಂದ ನನಗೆ ಆ ಭಾಗ್ಯವು ದೊರಕದೆ ಹೋಯಿತು.

**ಪ. ರಮಾನಂದ**

# ಮುನ್ನುಡಿ

ಕನ್ನಡದಲ್ಲಿ ವಿನೋದಕರವಾದ ಬರವಣಿಗೆಯು ತೀರ ಕಡಮೆ. ಇತ್ತೀಚೆ ಅದು ಪತ್ರಿಕೆಗಳಲ್ಲಿ ವಿವಿಧವಾಗಿ ತಲೆದೋರುತ್ತಿದೆ. ಆದರೆ ಅವರ ಉಪಯಾಪ್ತ್ಯಗಳು ಪತ್ರಿಕೆಗಳ ಆಕಾಶದಲ್ಲಿಯೆ ಉಳಿದುಕೊಂಡಿವೆ. ಕ್ಷಣಿಕ ರಂಜನೆಗೆ ಹುಟ್ಟಿದ ಬರೆಹಗಳು ಒಮ್ಮೆ ಸೀಪಿ ಒಗೆದ ಕಿತ್ತಳೆಯ ತೊಳೆಯಂತೆ ಒಮ್ಮೆ ಓದಿದ ಮೇಲೆ ನಿಃಸಾರವೆಂದು ಬಗೆಯಲಾಗುವದು. ನಗೆಬರೆಹಗಳಲ್ಲಿ ಚಂದ್ರನಂಥ ಒಂದು ಗುಣವಿದೆ. ದೇವತೆಗಳು ರಸ ಕುಡಿದು ಬಿಡುವ ಕೃಷ್ಣಪಕ್ಷವಿದೆ; ಆದರೆ ಮತ್ತೆ ರಸದುಂಬಿಕೊಳ್ಳುವ ಶುಕ್ಲಪಕ್ಷವೂ ಅದಕ್ಕಿದೆ. ವಿನೋದಸಾಹಿತ್ಯವು ದಿನಬಳಕೆಯಿಂದ ಸಾರಹೀನವಾದರೂ ಕೆಲದಿನಗಳನಂತರದಲ್ಲಿ ಮತ್ತೆ ರಸವತ್ತಾಗುವದು. ಇಂಥ ಬರೆವಣಿಗೆಗಳು ಪುಸ್ತಕರೂಪದಲ್ಲಿ ಬಂದರೆ ವಿರಾಮಕಾಲವನ್ನು ಉಲ್ಲಾಸದಲ್ಲಿ ಕಳೆಯಲು ಅನುಕೂಲವಾಗುವದು. ಶ್ರೀ. ಪ. ರಮಾನಂದರಾಯರ ಲೇಖನಗಳು ಸಂಗ್ರಹಣೀಯವಾಗಿರುವದಾಗಿ ಅವುಗಳನ್ನೋದಿದವರು ಯಾರೂ ಒಪ್ಪಬಹುದು.

ಅನೇಕ ಇಂಗ್ಲಿಷ, ಅಮೇರಿಕನ್ ಗ್ರಂಥಕರ್ತರ ಛಾಯೆಯು ತಮ್ಮ ಕೃತಿಗಳಲ್ಲಿ ಕಾಣಬಹುದಾಗಿ ಗ್ರಂಥಕರ್ತರೆ ಸೂಚಿಸಿದ್ದಾರೆ. ಆ ಮೂಲಗಳ ಬದಿಬದಿಗೆ ಈ ಕೃತಿಗಳು ಅಷ್ಟು ಪ್ರಭಾವಶಾಲಿಗಳಾಗಿ ತೋರಲಿಕ್ಕಿಲ್ಲ. ಆದರೆ ಪ್ರತಿಕೃತಿಗಳೆಂದು ಭಾವಿಸದೆ ಇವುಗಳನ್ನು ಕೃತಿಗಳೆಂದೆ ಭಾವಿಸಿದರೆ ಮೆಚ್ಚುಗೆಗೆ ಇವುಗಳಲ್ಲಿಯೂ ಅವಕಾಶ ಉಂಟು. 'ಶ್ರೀನಿವಾಸನ ಅಕೃತ್ಯ'ವು ಸುಕೃತ್ಯವಾಗಿ ತೋರಲಿಕ್ಕಿಲ್ಲ; 'ವಿಮೋಚನೆ'ಯ ಪ್ರಾರಂಭ ಭಾಗವು ವಿಮೋಚನೆಗೆ ಯೋಗ್ಯವಾಗಿ ತೋರಬಹುದು; 'ಪತ್ತೇದಾರನಾದ ಸೂಕ್ಷ್ಮಬುದ್ಧಿಯು' ಪತ್ತೇದಾರನ ಸೂಕ್ಷ್ಮಬುದ್ಧಿಯಂತೆಯೆ ಕಿರುಕುಳ ಕಾಟವಾಗಿ ಎನಿಸೀತು; 'ಚಿಕ್ಕರಾಮುವು ಅಜ್ಜಿಗೆ ಹೇಳಿದ ಕಥೆಯು' ಕೆಲವರಿಗೆ ತೀರ ಹುಡುಗಬುದ್ಧಿಯ ಹುಡುಗಾಟಿಕೆಯಾಗಿ ಕಂಡೀತು; ಆದರೆ ನೋಡಬೇಕಾದ ರೀತಿಯಲ್ಲಿ ನೋಡಿದರೆ ಅಲ್ಲಿಯೂ ಸ್ವಾರಸ್ಯವು ತೋರದಿರಲಾರದು. ಏನಿದ್ದರೂ ಶ್ರೀ. ಪ. ರಮಾನಂದರಾಯರ, ಪರಮಾನಂದಕರವಾದ ಈ ಬರೆಹಗಳು

ಕೇವಲ ಪ್ರಯೋಗಗಳು ಎಂದು ಯಾರೂ ಒಪ್ಪಲಾರರು. ಅಲ್ಲಿಯ ನಗೆಯಲ್ಲಿ ಹೊಸತನವಿದೆ; ನವೀನ ದೃಷ್ಟಿಯಿದೆ, ಶೈಲಿಯಲ್ಲಿ ಹಿಡಿತವಿದೆ.

' ನಗೆಯು ಬೆಳದಿಂಗಳಿನಂತೆ ಸೌಮ್ಯವೂ ಆಲ್ಹಾದಕರವೂ ಇದ್ದರೂ ತಲೆಗೇರಿದರೆ ಹುಚ್ಚು ಹಿಡಿಸಿಬಿಡುವದು. ಆ ನಗೆಯ ಹುಚ್ಚು ಬೆಳದಿಂಗಳನ್ನು ಶ್ರೀ. ಪ. ರಮಾನಂದರಾಯರು ಚೆನ್ನಾಗಿ ಅನುಭವಿಸಿದ್ದಾರೆ. ಅಂಥ ಹುಚ್ಚಿನಲ್ಲಿ ಹೊಳೆಯುವ ಹಾಸ್ಯೋಕ್ತಿಗಳು ಬಾಣಗಳಂತೆ ಎದೆಯಲ್ಲಿ ನಾಟಿ ನಿಂತರೂ ಹೂವಿನಂತೆ ಮೃದುಸ್ಪರ್ಶದಿಂದ ಮರುಳುಗೊಳಿಸುವವು. ಅಂಥ ಹೂಬಾಣಗಳನ್ನು ಅವರು ಅನೇಕಾನೇಕವಾಗಿ ಎಸೆದಿದ್ದಾರೆ. ಅವರ ಬತ್ತಳಿಕೆಯಲ್ಲಿ ಹತ್ತು ದಿಕ್ಕಿನ ಅಸ್ತ್ರಗಳಿವೆ. ಒಂದೊಂದರಲ್ಲಿಯೂ ಒಂದೊಂದು ಒಗೆಯ ಮೋದಕ, ಮಾದಕ, ಲ್ಹಾದಕ, ಚೋದಕ ಶಕ್ತಿಯಿದೆ. ಕೇವಲ ಪತ್ರಿಕೆಗಳಲ್ಲಿಯೇ ಬರೆದು ಬೀಸಾಡಿಬಿಡಬಹುದೆಂದು ಅವರು ತಿಳಿದಿದ್ದ ಈ ಬರಹಗಳನ್ನು ಸಂಗ್ರಹಿಸುವ ಮೂಲಕ 'ಮನೋಹರ ಗ್ರಂಥಮಾಲೆ'ಯವರು 'ಶ್ರೀಯುತರು ಉತ್ತಮ ವಿನೋದ ಲೇಖನಗಳನ್ನು ಬರೆಯಲು ಅರ್ಹತೆಯುಳ್ಳ ಮತ್ತೆ ಬರೆಯದೆ ಇಷ್ಟು ದಿವಸ ಸುಮ್ಮನಿದ್ದದ್ದು ತಪ್ಪೆಂದು' ಜಾಹೀರು ಮಾಡಿದ್ದಾರೆಂದು ನಾನು ತಿಳಿಯುತ್ತೇನೆ. ಈ ನೋಟೀಸಿನ ಮೂಲಕ ಎಚ್ಚರಾಗಿ ಅವರು ಹೊಸ ವಿನೋದ ಲೇಖನಗಳನ್ನು ಬರೆಯದಿದ್ದರೂ, ತಮ್ಮ ವಿನೋದದ ಮರ್ಮವನ್ನು ಬೆಳಗುವ ಶ್ರೀ. ಮುಕಂದರಾಯರ ಚಿತ್ರಕೃತಿಗಳ ಜೊತೆದೊರೆಯಬೇಕೆಂದಾದರೂ ಅವರು ಲೇಖನವ್ಯವಸಾಯವನ್ನು ಮುಂದುವರಿಸುವರೆಂದು ನಾನು ನಂಬಿದ್ದೇನೆ.

ಈ ಬರೆಹಗಳಲ್ಲಿ ನವರಸಪ್ರೌಢಿಯಿದೆ. ಎಲ್ಲ ರುಚಿಗಳಿಗೂ ಅಲ್ಪಸ್ವಲ್ಪ ಆಹಾರವಿದೆ. ಯಾವ ಭಾವವನ್ನೂ ಉನ್ಮಾದಕರವಾಗಿ ಬೆಳೆಸಿಕೊಂಡು ಹೋಗುವ ಹಿಡಿತವು ಇಲ್ಲಿಯ ಶೈಲಿಯಲ್ಲಿದೆ. ಕನ್ನಡ ವಾಚಕರಿಗೆ ಇಲ್ಲಿಯ ವಿನೋದದಿಂದಾದರು ಕೆಲಕಾಲವನ್ನು ಸುಖವಾಗಿ ನಗೆಯಲ್ಲಿ ಕಳೆಯಲು ಅನುಕೂಲವಾದರೆ ಬರೆಹಗಳಿಗೆ ಕೃತಾರ್ಥತೆ ಬಂತು.

**ದ. ರಾ. ಬೇಂದ್ರೆ**

**ಮುಂದಿನ ಕುಸುಮ**

ಮನೋಹರ ಗ್ರಂಥಮಾಲೆಯ ೩೦ನೇ ಕುಸುಮ

# ಮಹಾಪೂರ

(ಮನೋರಂಜಕವಾದ ಸಾಮಾಜಿಕ ಸ್ವತಂತ್ರ ಕಾದಂಬರಿ)

ಬರೆದವರು :

**ಕುಲಕರ್ಣಿ ಶೇಷಗಿರಿರಾಯರು**

ದಿವಂಗತ

ಶ್ರೀಮಾನ್

**ಪಂಜೆ ಮಂಗೇಶರಾಯರಿಗೆ**

# ಪರಿವಿಡಿ

# ಕೊಡೆಯ ವಿಚಾರ

ಬೇಸಗೆಯ ಕಾಲ ಕಳೆಯಿತು. ಮಳೆಯು ಪ್ರಾರಂಭಿಸಿತು. ಪ್ರಣಯಿಗಳಿಗೆ ಮನೋಲ್ಲಾಸದ ಕಾಲವು ಒದಗಿತು. ವಿರಹಿಗಳಿಗೆ ಟಪ್ಪಾಲು ಪೇದೆಗಳು ಸಾಕಾಗದೆ ಮೇಘಗಳನ್ನೂ ದೂತರನ್ನಾಗಿ ಮಾಡುವ ಕಾಲ ಒದಗಿತು. ಮೊದಲ ಮಳೆಯ ಸ್ಪರ್ಶವೂ ಆಯಿತು. ಬೆಳೆದ ಯೌವನ ಚಂದ, ಮೊದಲ ಮಳೆಯು ಚಂದ. ನನಗೆ ಹಳೆಯ ಹಾಡುಗಳು ಚಂದ.

ಮಳೆಗಾಲಕ್ಕೆ ಬೇಕಾದ ಅಕ್ಕಿಮುಡಿಗಳನ್ನೊ, ಕಟ್ಟಿಗೆ ಸೌದೆಯನ್ನೊ, ಹಪ್ಪಳ ಸೆಂಡಿಗೆಗಳನ್ನೊ, ಉಪ್ಪಿನಕಾಯಿಗಳನ್ನೊ ಎಲ್ಲವನ್ನೂ ಶೇಖರಿಸಿದಂತಾಯಿತು. ಎಲ್ಲವನ್ನೂ ಅಲ್ಲ; ಒಂದನ್ನು ಮರೆತಿರುವೆನು. ಮಳೆಗಾಲಕ್ಕೆ ಅತಿ ಆಗತ್ಯವಾಗಿ ಬೇಕಾದ ಒಂದು ಮುಖ್ಯ ವಸ್ತುವನ್ನು. ಹಕ್ಕಿಗೆ ಗೂಡಾಸೆ, ಕರುವಿಗೆ ದನದಾಸೆ, ಕೂಸಿಗೆ ತಾಯಾಸೆ, ನನಗೀಗ ಒಂದು ಕೊಡೆಯ ಆಸೆ. ( ಹಳೆಯ ಹಾಡು )

ಆದರೆ ಮಾಡುವುದೇನು? ನನಗೂ ಕೊಡೆಗೂ ದೀರ್ಘಕಾಲದ ದಾಂಪತ್ಯಸುಖವನ್ನು ವಿಧಾತನು ಬರೆಯಲೇ ಇಲ್ಲ. ನಾನು ಯಾವ ಕೊಡೆಯನ್ನು ಎಷ್ಟು ಶ್ರದ್ಧೆಯಿಂದ ಹುಡುಕಿ ಇಟ್ಟುಕೊಂಡರೂ ನನ್ನ ಜಾತಕದಲ್ಲಿ ಮೇಳಾಮೇಳಿಯೇ ಬರುವುದಿಲ್ಲ. ಕಳೆದ ಮಳೆಗಾಲದಲ್ಲಿ ನಾಲ್ಕು ಪೀಲಾಂಗನೆಗಳಾದ ಕೊಡೆಗಳು ನನ್ನ ಕೈಯನ್ನು ಹಿಡಿದು ನನ್ನನ್ನು ಗೌರವಿಸಿದ್ದುವು. ನಾನು ನಾಲ್ಕು ಛತ್ರಿಗಳ ಅಧಿಪತಿಯಾಗಿ ಮೆರೆದೆನು.

ಪ್ರಥಮದ ಕೊಡೆಯನ್ನು ನಾನೇ ಬಹಳ ಶ್ರದ್ಧೆಯಿಂದ ಹುಡುಕಿ ನನ್ನದಾಗಿ ಮಾಡಿಕೊಂಡಿದ್ದೆನು. ಆದರ ನುಣುಪಾದ ಥಳಥಳಿಸುವ ಮೈ,

ಸಂಪಿಗೆ ಹೂವಿಗಿಂತ ಅಂದವಾದ ಅದರ ಮೂಗುತಿ, ಹಂಸಪಕ್ಷಿಯ ಕತ್ತಿನಂತಿರುವ ಅದರ ಕೊರಳು, ಲತೆಯಂತಿರುವ ಅದರ ಮೈಕಟ್ಟು, ಇವೆಲ್ಲವೂ ನನ್ನನ್ನು ಬಹಳವಾಗಿ ಮೋಹಗೊಳಿಸಿದ್ದುವು. ಅದು ನನ್ನ ಮೊದಲಿನ ಕೊಡೆಯಾಗಿದ್ದರೂ ಎರಡನೆಯ ಹೆಂಡತಿಯಂತೆ ನನಗದು ಬಲು ಮುದ್ದಾಗಿದ್ದಿತು.

ಅದನ್ನು ಪಡಕೊಂಡ ಮೂರು ದಿನಗಳ ವರೆಗೆ ಅದನ್ನು ಅತ್ಯಧಿಕ ಪ್ರೇಮದಿಂದ ಜೋಪಾನ ಮಾಡಿದೆನು. ಅದಕ್ಕೊಂದು ಚಲೋದಾದ ಪಂಚರಂಗಿ ಸೀರೆಯನ್ನುಡಿಸಿ ಸಾಧಾರಣ ಮಳೆಗೆಲ್ಲ ಅದನ್ನು ಕಂಕುಳ ಲ್ಲಿಯೇ ಹಿಡಿದುಕೊಂಡು ಬೀದಿಬೀದಿಯಲ್ಲಿ ಮೆರೆದೆನು. ಎರಡನೆಯ ದಿನ ನಾನು ಹಾಗೆ ಮೆರೆಯುತ್ತಿದ್ದಾಗ ನನ್ನ ಸ್ನೇಹಿತ ಹರಿಕವುತನು ನನ ಗೊಮ್ಮೆ ದಾರಿಯಲ್ಲಿ ಸಿಕ್ಕಿದನು. 'ಏನು ರಮಾನಂದ, ಮಳೆ ಬರುತ್ತಿ ದ್ದರೂ ನೀನು ಕೊಡೆಯನ್ನು ಬಿಡಿಸದೆ ನಡೆಯುತ್ತೀಯಲ್ಲ!' ಎಂದು ಅವನು ನಗುತ್ತಾ ಕೇಳಿಯೇ ಬಿಟ್ಟನು. ನನ್ನ ಕಂಕುಳಲ್ಲಿ, ನನ್ನನ್ನು ಪ್ರೇಮದಿಂದ ಆಲಿಂಗಿಸಿಕೊಂಡಿದ್ದ ನನ್ನ ಕೊಡೆಯನ್ನು ಒಮ್ಮೆ ಮುದ್ದಾಗಿ ನೋಡಿದೆನು. ನನ್ನ ಮುಂದೆ ಹಲ್ಲುಕಿರಿದು ನಿಂತಿದ್ದ ಹರಿಕವುತನನ್ನು ಬಿರುಸಾಗಿ ನೋಡಿದೆನು. 'ಬೆಳೆದ ಯೌವನ ಚಂದ, ಮೊದಲ ಮಳೆಯು ಚಂದ, ಎಂದು ನಿನಗೆ ಗೊತ್ತಿಲ್ಲವೇ?' ಎಂದು ಹೇಳಿ ನನ್ನ ಕೊಡೆಯನ್ನು ಬಿಡಿಸದೆ ಮಳೆಯಲ್ಲಿ ನೆನೆಯುತ್ತಾ ನನ್ನ ದಾರಿಯನ್ನು ಹಿಡಿದೆನು.

ಮೂರನೆಯ ದಿನ ನನ್ನ ಅಚ್ಚುಮೆಚ್ಚಿನ ಕೊಡೆಗೆ ನವವರ್ಷಾ ಕಾಲದ ಪ್ರಥಮಸ್ನಾನವು ಆಯಿತು. ಅದರೊಂದಿಗೆ ನನಗೂ ವಿಶೇಷ ಮಂಗಳಸ್ನಾನವಾಯಿತೆಂದು ನಾನು ಬೇರೆ ಹೇಳಬೇಕಾದ್ದಿಲ್ಲ. ಅಂದು ರಾತ್ರಿ ನಾನು ನನ್ನ ಕೊಡೆಗಾಗಿ ಪಟ್ಟ ವ್ಯಥೆಯು ಹೇಳಿತೀರದು. ಕಣ್ಣಿ ನಲ್ಲಿ ಗಾಢನಿದ್ರೆಯಿದ್ದರೂ ನಾನು ಮೂರು ಸಲ ಎಚ್ಚತ್ತು ಅದರ ಮೈಯನ್ನು ಚೆನ್ನಾಗಿ ಒರಸಿ ನೋಡಿದೆನು. ಏಕೆಂದರೆ ಇಂತಹ ಕೋಮಲವಾದ ಕೊಡೆಗಳಿಗೆ ಶೀತವೂ, ಕೆಮ್ಮೂ, ಉಬ್ಬಸರೋಗವೂ, ಎಲುಬುಗಳ ಕ್ಷಯವೂ ಹಿಡಿಯುವುದು ಬಹು ಬೇಗ.

ನಾಲ್ಕನೆಯ ದಿನ ನಾನು ಒಂದು ಮೀಟಿಂಗಿನಲ್ಲಿ ಕುಳಿತಿದ್ದಾಗ ಒಂದು ಗಳಿಗೆ ಮಾತ್ರಕ್ಕೆ ನನ್ನ ಮುದ್ದುಕೊಡೆಯಿಂದ ಅಗಲಿರಬೇಕಾಯಿತು. ಮೀಟಿಂಗು ಆದಮೇಲೆ ನೋಡಿದೆನು. ನನ್ನ ಪ್ರೇಮದ ಕೊಡೆಯು ಯಾರ ಸಂಗಡವೋ ಪಲಾಯನ ಮಾಡಿತ್ತು!

ನನ್ನ ಪ್ರಿಯ ಪತ್ನಿ ಸುಶಿಗೆ ಅನೇಕ ಸದ್ಗುಣಗಳುಂಟು. ಅವುಗಳಲ್ಲಿ ಅತಿ ಮುಖ್ಯವಾದುದು ಯಾವುದೆಂದರೆ ಅವಳಿಗೆ ಸವತಿಮತ್ಸರವಿಲ್ಲದಿರುವುದೇ ಎಂದು ನನ್ನ ಅಭಿಪ್ರಾಯ. ಏಕೆಂದರೆ ನನ್ನ ಕೈ ಬಿಟ್ಟು ಹೋದ ಕೊಡೆಗಾಗಿ ಅವಳು ನನಗಿಂತಲೂ ಹೆಚ್ಚಾಗಿ ಮರುಗಿದಳು. ನಾನು ಊಟಮಾಡುವಾಗ, ಆಟವಾಡುವಾಗ, ಮಲಗುವಾಗ, ಏಳುವಾಗ ಮೈ ಮುರಿದುಕೊಳ್ಳುವಾಗ, ಆಕಳಿಸುವಾಗ–ಇನ್ನು ಯಾವಾಗಲಾಗಲಿ, ಅವಳು ನಾನು ಕಳಕೊಂಡ ಕೊಡೆಯ ಧ್ಯಾನವನ್ನೇ ಮಾಡಲಾರಂಭಿಸಿದಳು. ಅದರಲ್ಲೂ ಮೌನವಾದ ಧ್ಯಾನವಲ್ಲ. ನನ್ನ ಕೊಡೆಯ ಸಕಲ ಗುಣಗಳ ಬಣ್ಣನೆಯಿಂದ ಕೂಡಿದ ಒಂದು ಅಮೋಘವಾದ ಸ್ತೋತ್ರ! ಮೊದಲೇ ನನ್ನ ಹೃದಯವು ನನ್ನ ಕೊಡೆಯ ವಿರಹದಿಂದ ಕಾದ ಹೃದಯವಾಗಿತ್ತು. ಈಗ ಅದರ ಮೇಲೆ ನೀರು ಹೊಯ್ದಂತೆ ಆಯಿತು.

ನನ್ನ ಮುದ್ದಾದ ಕೊಡೆಯು ಯಾವಾಗಲೂ ನನ್ನ ಕಂಕುಳಲ್ಲಿಯೇ ಇತ್ತೆಂಬುದಕ್ಕೆ ಹರಿಕಮತನೇ ಸಾಕ್ಷಿ ಎಂದು ನಿಮಗೆ ಗೊತ್ತುಂಟು. ಆದರೆ ನಾನು ಎಷ್ಟುಪರಿ ಹೇಳಿದರೂ ನನ್ನ ಸುಶಿಯು ಇದನ್ನು ನಂಬುವುದಿಲ್ಲ. ಆಗಲೂ ನನ್ನ ಕಂಕುಳಲ್ಲಿದ್ದುದು ಮತ್ತು ಈಗಲೂ ನನ್ನ ಕಂಕುಳಲ್ಲಿ ಯಾವಾಗಲೂ ಇರುವುದು ನನ್ನ ತಲೆಯೇ ಎಂದು ಅವಳ ವಾದ. ಇರಲಿ, ಬಿನ್ನಹಕೆ ಬಾಯಿಲ್ಲವಯ್ಯಾ!

ಮುಂದಿನ ನಾಲ್ಕು ತಿಂಗಳಲ್ಲಿ ಮೂರು ಕೊಡೆಗಳು ಒಂದರ ನಂತರ ಇನ್ನೊಂದಾಗಿ ನನ್ನೊಡನೆ ಸೇರಿ ನನ್ನ ಕೈಯನ್ನೂ ಕಂಕುಳನ್ನೂ ಗೌರವಿಸಿದುವು. ನಾಲ್ಕನೆಯ ಕೊಡೆಯು ನನ್ನ ಕೈಯನ್ನು ಬಿಟ್ಟು ಹೋದ ಮೇಲೆ ನನ್ನ ಸುಶಿಯು ಕೊಡೆಯ ವಿಷಯ ನನ್ನೊಡನೆ ಮಾತಾಡುವುದನ್ನು ನಿಲ್ಲಿಸಿಬಿಟ್ಟಳು. ಇದರಿಂದ ನನಗೆ ಸ್ವಲ್ಪ ಸುಖವಾಯಿತು. ಆದರೆ

ನನ್ನ ದೇಹದಲ್ಲಿ ನನ್ನ ತಲೆಯಿರುವ ಸ್ಥಾನದ ವಿಷಯವಾಗಿ ಅವಳಿಗಿದ್ದ ತಪ್ಪು ಅಭಿಪ್ರಾಯವು ಇನ್ನೂ ಬದಲಾಗಲಿಲ್ಲವೆಂದು ತಿಳಿಸಲು ವಿಷಾದ ಪಡುತ್ತೇನೆ.

ಕೊಡೆಗಳಿಗೆ ಸ್ವಲ್ಪವಾದರೂ ಹೃದಯವುಂಟೆಂದು ನನಗೆ ತಿಳಿದು ಬಂದುದು ನನ್ನ ನಾಲ್ಕನೆಯ ಕೊಡೆಯು ನನ್ನನ್ನು ಬಿಟ್ಟು ಪರಕೀಯ ನೊಬ್ಬನೊಡನೆ ಪಲಾಯನಮಾಡಿದಾಗ. ನನ್ನ ಕೊಡೆಗೆಂದು ನಾನು ಕೈಚಾಚಿದೆನು. ಒಂದು ಅಪರಿಚಿತವಾದ ಕೊಡೆಯು ನನಗೆ ಹಸ್ತಲಾಘ ವನ್ನು ಕೊಟ್ಟಿತು. ನನಗೆ ಅರ್ಥವಾಯಿತು. ನನ್ನ ಕೊಡೆಯು ತನ್ನ ಬದಲು ಬೇರೊಂದು ಜನವನ್ನು ಮಾಡಿಯೇ ಪಲಾಯನ ಮಾಡಿತ್ತು. ಹೀಗಿರುವಾಗ ಕೊಡೆಗಳಿಗೆ ಸ್ವಲ್ಪವಾದರೂ ಹೃದಯವಿಲ್ಲೆಂದು ಹೇಳ ಬಹುದೇ ? ಆ ಅಪರಿಚಿತವಾದ ಕೊಡೆಯನ್ನು ಕೈಯೆತ್ತಿ ಹಿಡಿದೆನು. ಬಿಡಿಸಿ ನೋಡಿದೆನು. ಅಷ್ಟು ವರ್ಷ ಬಾಳಿದ ಕೊಡೆಯು ಎಷ್ಟು ಮಾತ್ರಕ್ಕೂ ಸುಮಂಗಲೆಯಾಗಿರಲಿಕ್ಕಿಲ್ಲವೆಂದು ತಿಳಿದು ಅದಕ್ಕೊಂದು ಬಿಳೀ ಸೀರೆಯನ್ನುಡಿಸಿದೆನು.

ಮರುದಿನವೇ ಅದಕ್ಕೆ ಶೀತವೂ ಕೆಮ್ಮೂ ಆಗಿ ಬಹಳ ಕಷ್ಟ ಪಟ್ಟಿತು. ಮೂರನೆಯ ದಿನವೇ ಒಂದು ಚಿಕ್ಕಬಿರುಗಾಳಿಗೆ ಪ್ರಾಣಬಿಟ್ಟಿತು. ನನ್ನ ಮಗು ಪ್ರಭಾಶಂಕರನು ಧೀರನು. ಸ್ವಲ್ಪವಾದರೂ ಆ ಹೆಣಕ್ಕೆ ಹೆದ ರದೆ ಅವನು ಕೂಡಲೆ ಅದರ ಎಲುಬುಗಳಿಂದ ಬಿಲ್ಲುಬಾಣಗಳನ್ನು ಮಾಡಿ ಆಡಲಿಕ್ಕೆ ಪ್ರಾರಂಭಿಸಿದನು.

ಅಂದಿನಿಂದ ಈತನಕ ನನ್ನ ಕೈಗಳು ಮತ್ತು ಕಂಕುಳು ವಿಧುರತ್ವ ವನ್ನು ಹೊಂದಿವೆ.

ಈಗ ಪುನಃ ಮಳೆಗಾಲದ ಪ್ರಾರಂಭ. ಬಿಲ್ಲು ಮಗನಿಗೆ ಬೇಕು, ಹಲ್ವ ಶಿವನಿಗೆ ಬೇಕು, ನನಗೀಗ ಒಂದು ಕೊಡೆಯು ಬೇಕು. ( ಹೊಸ ಹಾಡು. )

ಆದರೆ ನನ್ನ ಮೂವತ್ತು ವರ್ಷಗಳ ಅನುಭವವನ್ನೂ ಸುಮ್ಮನೆ ನೀರಿನಲ್ಲಿ ಮಾಡಿದ ಹೋಮವೆಂದು ಎಣಿಸಲು ನನಗೆ ಇಷ್ಟವಿಲ್ಲ. ಕಳೆದ



“ಮೂರನೆಯ ದಿನವೇ ಒಂದು ಚಿಕ್ಕ ಬಿರುಗಾಳಿಗೆ ಪ್ರಾಣಬಿಟ್ಟಿತು.”

ವರ್ಷದಂತೆ ನಾಲ್ಕು ಛತ್ರಿಗಳ ಅಧಿಪತಿಯಾಗಿ ಮೆರೆಯುವುದೂ ನನಗೆ ಇಷ್ಟವಿಲ್ಲ. ಏಕಛತ್ರಾಧಿಪತಿ ಎಂಬ ಬಿರುದಿಗೇನೇ ಹಂಬಲಿಸುತ್ತಿದ್ದೇನೆ. ಆದರೆ ನನಗೆ ಆ ಬಿರುದು ಸಿಕ್ಕಬೇಕಾದರೆ ಮೊದಲು ನಮ್ಮ ಕೊಡೆಗಳಲ್ಲಿ ಹಲವು ಬದಲಾವಣೆಗಳಾಗಬೇಕು, ಹಲವು ಸುಧಾರಣೆಗಳಾಗಬೇಕು.

ನಾವು ಸ್ವಲ್ಪ ಆಲೋಚಿಸೋಣ. ಕೊಡೆ ಎಂದರೇನು ? ಬಿಸಿಲಿನಲ್ಲಿಯೂ ಮಳೆಯಲ್ಲಿಯೂ ನಮ್ಮ ಕೈಹಿಡಿದು, ನಮ್ಮನ್ನು ರಕ್ಷಿಸಿ, ನಮ್ಮನ್ನು ಸುಖಿಗಳಾಗಿ ಮಾಡುವ ಈ 'ಕೊಡೆ' ಎಂದರೇನು ?

ಹರಿಕಮತನು ಕ್ಲಬ್ಬಿನಲ್ಲಿ ಬಿಝಿಕ್ ಆಡುವಾಗ ರಭಸದಿಂದ ಹಾಡುವ ಒಂದು ಹಾಡಿನ ತುಂಡು ಈ ಸಂದರ್ಭದಲ್ಲಿ ನನ್ನ ಕಿವಿಯೊಳಗೆ ಝೇಂಕರಿಸುತ್ತಾ ಇದ್ದು ನನ್ನ ಲೇಖನಿಯನ್ನು ಮುಂದರಿಸಲಿಕ್ಕೆ ಬಿಡುವುದಿಲ್ಲ. ನನ್ನ ಲೇಖನಿಯು ಮುಂದೆ ಸಾಗಿಹೋಗಬೇಕಾದರೆ ಆ ಹಾಡಿನ ತುಂಡನ್ನು ಇಲ್ಲಿ ಬರೆಯಲೇಬೇಕು :—

ಮಗ್ಗಿಗೆ ಎನ್ನಾರೆ ಪುತ್ರಿ
ಕತ್ರಿಗೆ ಎನ್ನಾರೆ ಕತ್ರಿ
ಕೊಡೆಗೆ ಎನ್ನಾರೆ ಛತ್ರಿ
ನಂಗೆ ಕನ್ನಡಿ ಬರೋದಿಲ್ಲ !

ಬರೆದು ಆಯಿತು. ಇನ್ನು ನನ್ನ ಲೇಖನಿಗೆ ಮುಂದೆ ಸಾಗಿಹೋಗಲು ಯಾವ ಆತಂಕವೂ ಇಲ್ಲ. ಕ್ಲಬ್ಬಿನಲ್ಲಿ ಹರಿಕಮತನು ಈ ಹಾಡನ್ನು ಹಾಡಲಿಕ್ಕೆ ಮೊದಲುಮಾಡಿದ ಕೂಡಲೇ ಅವನ ಬಾಯಲ್ಲಿ ಒಂದೊಂದು ಬಿಸ್ಕೂಟು ಅಂಬೊಡೆಯನ್ನು ತುರುಕಿಸುವುದು ನನ್ನದೊಂದು ಅಭ್ಯಾಸವಾಗಿದೆ. ಇದರಿಂದ ನನಗೆ ದಿನಕ್ಕೆ ಎರಡಾಣೆಯಂತೆ ನಷ್ಟವಾದರೂ ಒಂದು ದಿನ ಅಥವಾ ಇನ್ನೊಂದು ದಿನ ನನ್ನ ಬಿಸ್ಕೂಟು ಅಂಬೊಡೆಯು ಅವನ ಗಂಟಲೊಳಗೆ ಸಿಲುಕಿ ಅವನಿಗೆ ಉಸುರುಕಟ್ಟಿಹೋಗಬಹುದೆಂಬ ಆಸೆಯು ನನ್ನನ್ನು ಇನ್ನೂ ಬಿಟ್ಟುಹೋಗಿಲ್ಲ.

ನಾನು ಹೇಳಲಿಕ್ಕೆ ಹೋದುದಾದರೂ ಏನು ? ನೆನಪಾಯಿತು. ಕೊಡೆಯ ವಿಚಾರ.

"ಕೊಡೆ ರಾಮಗೆ ಸೀತೆಯಸು......"

ರಾಮದೇವರ ಕಾಲದಲ್ಲಿಯೂ ಕೊಡೆಗಳಿದ್ದುವು ಎಂಬುದೇನೋ ನಿರ್ವಿವಾದದ ಸಂಗತಿಯು. ಆದರೆ ಈ ಒಂದು ಸಂಗತಿಯ ವಿಷಯವಾಗಿ ನೀವು ಎಂದಾದರೂ ಆಲೋಚಿಸಿದ್ದೀರಾ? ರಾಮದೇವರ ಕಾಲ ಆಗಿ ಹೋಗಿ ಇಂದಿಗೆ ಎಷ್ಟೋ ಸಹಸ್ರ ವರ್ಷಗಳಾದುವು. ಇಷ್ಟು ಸಹಸ್ರ ವರ್ಷಗಳಾಗಿದ್ದರೂ ಕೂಡ ರಾಮದೇವರ ಕಾಲದಲ್ಲಿ ನಾನು ಹಿಡಿಯ ಬಹುದಾಗಿದ್ದ ಕೊಡೆಗೂ ಈ ೨೦ನೆಯ ಶತಮಾನದಲ್ಲಿ ನಾನು ಹಿಡಿಯುವ ಕೊಡೆಗೂ ವ್ಯತ್ಯಾಸವೇನಾದರೂ ಉಂಟೇ? ಇದು ಗಹನವಾದ ವಿಷಯ. ನೀವೇ ಆಲೋಚಿಸಿರಿ.

ಇಲ್ಲ! ರವೆಯಷ್ಟಾದರೂ ವ್ಯತ್ಯಾಸವಿಲ್ಲ!

ಇದು ನಿಜವಾಗಿಯೂ ಆಶ್ಚರ್ಯಕರವು. ಸುಧಾರಣೆಯ ಕಾಲವೇ ಇದು ಆದಾಗ ನಮ್ಮ ಕೈಹಿಡಿಯುವ ಕೊಡೆಗಳಲ್ಲಿ ಮಾತ್ರ ಯಾವತರದ ಸುಧಾರಣೆಯೂ ಇಲ್ಲದಿರುವದು ನಿಜವಾಗಿಯೂ ಶೋಚನೀಯವು. ಹಲವು ವಿಷಯಗಳಲ್ಲಿ ನಮ್ಮಲ್ಲಿ ಅನೇಕರು ೨೦ನೆಯ ಶತಮಾನದಲ್ಲಿದ್ದರೂ ಉಳಿದವರು ೨೧ನೆಯ ಶತಮಾನದಲ್ಲಿದ್ದರೂ, ಕೊಡೆಗಳ ವಿಷಯದಲ್ಲಿ ಮಾತ್ರ ನಾವು ಇನ್ನೂ ಕ್ರಿಸ್ತ ಪೂರ್ವ ೫,೦೦೦ ವರ್ಷದಲ್ಲಿದ್ದೇವೆಂದು ಎಲ್ಲರೂ ಒಪ್ಪತಕ್ಕ ಮಾತು. ಇನ್ನಾದರೂ ನಾವು ಕೊಡೆಗಳ ಸುಧಾರಣೆಯ ಕಡೆಗೆ ದೃಷ್ಟಿ ತಿರುಗಿಸಬಾರದೆ?

ನನ್ನ ಮಟ್ಟಿಗೆ ಹೇಳುವುದಾದರೆ ಕೊಡೆಗಳಲ್ಲಿ ಆದಷ್ಟು ಬೇಗ ಕೆಳಗೆ ಹೇಳಿದ ಕೆಲವು ಸುಧಾರಣೆಗಳು ಆಗಲೇಬೇಕು. ಕೊಡೆಗಳ ಕರ್ತೃಗಳು ಇತ್ತಕಡೆ ಸ್ವಲ್ಪ ಗಮನಿಸಲಿ!—

ಮೊದಲಾಗಿ, ಒಬ್ಬನ ಕೈಯನ್ನೇ ಶಾಶ್ವತವಾಗಿ ಹಿಡಿದು, ಅವನನ್ನೇ ಕಡೆಯವರೆಗೆ ನಂಬಿಕೊಂಡು ಇರುವಂತಹ ಕೊಡೆಗಳೇ ನಮಗೆ ಬೇಕಾದುವು. ಈಗಿರುವಂತೆ ಸಿಕ್ಕಿಸಿಕ್ಕಿದವರ ಕೈಯನ್ನು ಹಿಡಿದುಕೊಂಡು ಹೋಗುವ ಸೂಳೆಗಾರಿಕೆಯ ಕೊಡೆಗಳು ನಮಗೆ ಬೇಡವೇ ಬೇಡ.

ಎರಡನೆಯದಾಗಿ ಕೊಡೆಗಳು ಈಗಿರುವಂತೆ ಆಡಂಬರದ ವಸ್ತುಗಳಾಗಬಾರದು; ಎಲ್ಲಿ ಹೋದರೂ ಎಲ್ಲಿ ಕೂತರೂ ಯಾರಿಗೂ ತಿಳಿಯುದಂತೆ ನಮ್ಮ ಹತ್ತಿರವೇ ಇಟ್ಟುಕೊಳ್ಳಬಹುದಾದ ವಸ್ತುಗಳಾಗಿರಬೇಕು. ಗಡ್ಡತೆಗೆಯುವ ಸಾಮಗ್ರಿಗಳನ್ನು ಕೂಡ ಈ ದಿವಸದಲ್ಲಿ ಒಂದು ನಸ್ಯದ ಡಬ್ಬಿಯಲ್ಲಿ ಹಾಕಿ ಅಂಗಿಯ ಜೇಬಿನಲ್ಲಿಟ್ಟುಕೊಳ್ಳುತ್ತಾರೆ. ನಮ್ಮ ಕೊಡೆಗಳನ್ನು ಕೂಡ ನಾವು ಹಾಗೆಯೇ ನಮ್ಮ ಜೇಬಿನಲ್ಲಿಟ್ಟುಕೊಳ್ಳುವಂತಾಗಬಾರದೇಕೆ?

ಮೂರನೆಯದಾಗಿ, ನಾವು ಬಿಸಿಲಿಗಾಗಲಿ ಮಳೆಗಾಗಲಿ ಕೊಡೆಯನ್ನು ಹಿಡಿದಾಗ ನಮ್ಮ ಈ ಎರಡೂ ಕೈಗಳಿಗೂ ತುಂಬಾ ಬಿಡುವು ಇರಬೇಕು. ಈ ಸುಧಾರಣೆಯ ಮಹತ್ವವು ತನ್ನಾಕೆಯ ಆಜ್ಞೆಯ ಮೇರೆಗೆ ತನ್ನೆರಡು ಮಕ್ಕಳನ್ನೂ ಈ ಮಳೆಗಾಲದಲ್ಲಿ ತಿರುಗಾಡಿಸಲಿಕ್ಕೆಂದು ಕರಕೊಂಡು ಹೋಗುವ ಯಾವ ತಂದೆಗಾದರೂ ವಿದಿತವಾಗದೆ ಇರಲಾರದು.

ನಾಲ್ಕನೆಯದಾಗಿ—ಇದು ಅತಿ ಪ್ರಾಮುಖ್ಯವಾದ ಸುಧಾರಣೆಯು—ನಮ್ಮ ಈಗಿನ ಕೊಡೆಗಳೆಲ್ಲ ನಮ್ಮ ಭುಜದ ಮೇಲಿರುವ ಭಾಗವನ್ನು ಮಾತ್ರ ಮಳೆಯಲ್ಲಿ ನೆನೆಯದಂತೆ ನೋಡುತ್ತವೆ. ನಮ್ಮ ಕಾಲುಗಳಿಗೆ ಅವುಗಳು ಯಾವ ರಕ್ಷಣೆಯನ್ನೂ ಕೊಡುವುದಿಲ್ಲ. ಇನ್ನು ಸುಧಾರಣೆ ಹೊಂದುವ ಕೊಡೆಗಳು ನಮ್ಮ ತಲೆಯು ಮಾತ್ರವಲ್ಲ, ನಮ್ಮ ಕಾಲುಗಳೂ ಮಳೆಯಲ್ಲಿ ನೆನೆಯದಂತೆ ನೋಡಬೇಕಾಗುವುದು.

ನಮ್ಮ ಕೊಡೆಗಳಲ್ಲಿ ನಾನು ತಕ್ಕಮಟ್ಟಿಗೆ ಮೇಲೆ ಸೂಚಿಸಿದ ಸುಧಾರಣೆಗಳಾಗುವ ವರೆಗೆ ನಾನು ಈ ವರ್ಷದ ಮಳೆಗಾಲಕ್ಕೆ ಕೊಡೆಯನ್ನು ತೆಗೆದುಕೊಳ್ಳುವುದಿಲ್ಲವೆಂದು ನಿರ್ಧರಿಸಿದ್ದೇನೆ.

ಅಷ್ಟರವರೆಗೆ?

ಅಷ್ಟರವರೆಗೆ ಒಂದು ಅಥವಾ ಇನ್ನೊಂದು ಕೊಡೆಯು ನನ್ನ ಹತ್ತಿರ ಯಾವಾಗಲೂ ಇರುವಂತೆ ಈ ಒಂದು ಉಪಾಯವನ್ನು ಹೂಡ

ಬೇಕೆಂದು ಆಲೋಚಿಸಿದ್ದೇನೆ. ಇದನ್ನು ಬೇರೆ ಯಾರಿಗೂ ಹೇಳಿ ಕೊಡಬೇಡಿ !—

ನನ್ನ ಮುಂದೆ ಒಬ್ಬ ಟೊಣಪನು ಒಂದು ಚಲೋದಾದ ಕೊಡೆಯನ್ನು ಬಿಡಿಸಿಕೊಂಡು ಹೋಗುತ್ತಾನೆಂದು ತಿಳಿದುಕೊಳ್ಳೋಣ. ನಾನು ಕೂಡಲೇ ಅವನ ಹತ್ತಿರ ಹೋಗಿ, 'ಏನಯ್ಯಾ, ನನ್ನ ಕೊಡೆಯನ್ನು ನೀನೆಲ್ಲಿಗೆ ತೆಗೆದುಕೊಂಡು ಹೋಗುತ್ತೀರಿ ? ಇದರ ಅರ್ಥವೇನು ?' ಎಂದು ಕಣ್ಣು ದೊಡ್ಡದು ಮಾಡಿ ಕೇಳುತ್ತೇನೆ.

ಅವನು ಕೂಡಲೇ ದೀನಭಾವವನ್ನು ತಾಳಿ 'ಕ್ಷಮಿಸಿ, ಸ್ವಾಮಿ; ಈ ಕೊಡೆಯು ತಮ್ಮದೆಂದು ನನಗೆ ಗೊತ್ತಿರಲಿಲ್ಲ. ಅದಕ್ಕೆ ಯಾರೂ ಗಿರಾಕಿ ಇಲ್ಲವೆಂದು ತಿಳಿದುಕೊಂಡು ನಾನು ತೆಗೆದಿದ್ದೆನು. ನಿಮ್ಮದಾದರೆ ಬೇಗನೇ ತೆಗೆದುಕೊಳ್ಳಿ' ಎಂದು ನಡುಗುತ್ತಾ ಹೇಳಿ, ಕೊಡೆಯನ್ನು ನನ್ನ ಸ್ವಾಧೀನ ಪಡಿಸುವನು.

ನಾನು ಆ ಟೊಣಪನನ್ನು ಪ್ರಶ್ನಿಸಿದಂತೆಯೇ ಇನ್ನೊಬ್ಬನು ನನ್ನನ್ನು ಪ್ರಶ್ನಿಸುವವರೆಗೆ ಕೊಡೆಯು ನನ್ನದಾಗುವುದು



## ಬಾಳ್ವೆಯ ಮಸಾಲೆ

ಸಂಜೆ ೪॥ ಗಂಟೆಯಾಗುತ್ತಲೇ ಶಾಲೆಯಿಂದ ಬಿಡುಗಡೆಹೊಂದಿ ಹೊರಗೆ ಬರುವ ಮಕ್ಕಳ ಗುಂಪಿನ ದೃಶ್ಯವು ನಿಮ್ಮೆಲ್ಲರ ಮನಸ್ಸಿನಲ್ಲಿ ಚೆನ್ನಾಗಿ ನಾಟಿಕೊಂಡಿರಬೇಕು. ಆದರೆ ಸಂಜೆ ೬ ಗಂಟೆಯಾಗುತ್ತಲೇ ಮಂಗಳೂರ ಹಜೂರಿನಿಂದ ಗುಮಾಸ್ತರೆಲ್ಲರೂ ಬಂಧವಿಮುಕ್ತರಾಗಿ ಹೊರಗೆ ಬರುವ ದೃಶ್ಯದ ಪರಿಚಯವು ನಿಮಗೆ ವಿಶೇಷವಾಗಿರಲಾರದು. ಪರಂತು, ಈ ಎರಡು ದೃಶ್ಯಗಳಿಗೂ, ವಿಶೇಷ ತಾರತಮ್ಯವಿಲ್ಲವೆಂದು ನೀವು ತಿಳಿದುಕೊಂಡರೆ ಅದನ್ನು ವರ್ಣಿಸುವ ಒಂದು ದೊಡ್ಡ ಕೆಲಸವು ನನಗೆ ಉಳಿಯಿತು.

ಇಂದು ಈ ಎರಡನೆಯ ದೃಶ್ಯದಲ್ಲಿ ತನ್ನ ಮನೆಗೆಂದು ಮೆಲ್ಲಮೆಲ್ಲನೆ ಸರಿದುಹೋಗುತ್ತಿರುವ ೫೬ ವರ್ಷ ಪ್ರಾಯದ ವ್ಯಕ್ತಿಯ ಮೇಲೆ ಚೆನ್ನಾಗಿ ನಿಮ್ಮ ದೃಷ್ಟಿಯಿಡಿರಿ. ಅವನೇ ಹರಿಕಮತನು. 'ಅವನು ತನ್ನ ಮನೆಗೆ ಮೆಲ್ಲಮೆಲ್ಲನೆ ಸರಿದುಹೋಗುವುದೇಕೆ?' ಎಂದು ನೀವು ಕೇಳುವಿರಿ. ಹಾಗೆ ನೀವು ಕೇಳುವುದು ವಿಹಿತವು. ಮಾತ್ರವಲ್ಲ, ನೀವು ಆ ಪ್ರಶ್ನೆಯಿಂದ ನಿಮ್ಮ ವಿಚಾರತೀಕ್ಷ್ಣತೆಯನ್ನು ಅಭ್ರಮತೆಯಿಂದ ಪ್ರಚುರಗೊಳಿಸುವುದು ಯೋಗ್ಯವೇ ಸರಿ. ಆದರೆ ಹರಿಕಮತನು, ಪಾಪ! ಮತ್ತೇನು ಮಾಡುವನು? ಅವನ ಹೆಂಡತಿ ರುಕ್ಮಿಣಿಯು ಸಂಸಾರ ಮಾಡುವುದಕ್ಕೆ ನೆರವಾದ ಮೇಲೆ ಅವನು ಡೊಂಗರಕೇರಿಯಲ್ಲಿ ಬಿಡಾರ ಮಾಡಿ ಇಂದಿಗೆ ಆರುವರ್ಷಗಳಾಗಿದ್ದುವು. ಬರೇ ಒಂದು ಅಥವಾ ಎರಡು ವರ್ಷಗಳಾಗಿದ್ದರೆ ಅವನು ಮೆಲ್ಲಮೆಲ್ಲನೆ ಅಲ್ಲ, ಓಡಿ, ಓಡಿ ಹೋಗುತ್ತಿದ್ದನೋ ಏನೋ. ಆದರೆ ಆರು ವರ್ಷ!—ಹೋಗಲಿ; ನೀವು ಅವನ ಸ್ಥಿತಿಯಲ್ಲಿದ್ದರೆ

ನೀವೂ ಅವನಂತೆ ಮೆಲ್ಲಮೆಲ್ಲನೆ ಹೋಗುತ್ತಿದ್ದೀರಿ. . . . ಕೋಪ ಮಾಡಬೇಡಿ. . ನಾನಾದರೆ ನನ್ನ ಬಿಡಾರವನ್ನೇ ಸೇರುತ್ತಿದ್ದೆನಲ್ಲ!

ಆದರಲ್ಲಿಯೂ ರುಕ್ಮಿಣಿಯು ಪತಿಗೆ ಶತ್ರುವಾಗುವಷ್ಟು ರೂಪವತಿಯಾದ ಭಾರ್ಯೆಯಲ್ಲ. ಹರಿಕಮತನು ಶೀಲವೇ ಸೌಂದರ್ಯವೆಂದು ತಿಳಿಯುವುದಕ್ಕೆ ಆರುವರ್ಷಗಳಿಂದ ಯತ್ನಿಸುತ್ತಿದ್ದರೂ ಅವನ ಮನಸ್ಸಿನಲ್ಲಿ ಅವಳ ಕುರೂಪದ ಭಾವನೆಯೇ ಬಲವಾಗುತ್ತಿತ್ತು. ಕಚೇರಿಯಲ್ಲಿ ಕೆಲಸಮಾಡಿ ಬೇಸರಹತ್ತಿದಾಗ, ತನ್ನ ಅಂಗಿಯ ಜೇಬಿನಲ್ಲಿ ಸಾಹುಕಾರ ಪುತ್ತುಸೆಟ್ಟಿಯ ಬೀಡಿ ಕಟ್ಟು ಒಂದಿದ್ದರೂ ಆದರಿಂದ ಬೀಡಿಯನ್ನು ತೆಗೆಯದೆ ತನ್ನ ಹತ್ತಿರ ಕೆಲಸಮಾಡುತ್ತಿದ್ದ ರಾಮನಾಯಕನೊಡನೆ ಒಂದು ಬೀಡಿಯನ್ನು ಬೇಡುವ ಸಂಪ್ರದಾಯವನ್ನು ಅವನು ಇಟ್ಟುಕೊಂಡಿದ್ದನು. ರಾಮನಾಯಕನು ಬೀಡಿಯನ್ನು ಕೊಡುತ್ತಿದ್ದನಾದರೂ, 'ಪುತ್ತುಸೆಟ್ಟಿಯ ಬೀಡಿ ಸೇದುವವನಿಗೆ ಈ ಹಾಳು ದೂಮ ಮೂಲ್ಯನ ಬೀಡಿ ಹಿಡಿದೀತೇ?' ಎಂದು ಪ್ರತಿಯೊಂದು ಸಾರಿ ಕೇಳುತ್ತಿದ್ದನು. 'ಹಿಡಿಯದೇನು? ತನ್ನ ಹೆಂಡತಿ ಕುರೂಪಿ, ಪರರ ಹೆಂಡತಿ ಸುರೂಪಿ ಎಂಬ ನಾಣ್ನುಡಿ ನಿನಗೆ ಗೊತ್ತಿಲ್ಲವೆ?' ಎಂದು ಹರಿಕಮತನು ಯಾವಾಗಲೂ ಉತ್ತರ ಕೊಡುತ್ತಿದ್ದನು.

ಎಂತಹ ಹುಚ್ಚುತನವು!—ಬೀಡಿ ಸೇದುವುದಲ್ಲ, ತನ್ನ ಹೆಂಡತಿ ಕುರೂಪಿ, ಪರರ ಹೆಂಡತಿ ಸುರೂಪಿ ಎಂದು ತಿಳಿದುಕೊಳ್ಳುವುದು! ನಾನು ಎಷ್ಟೋ ಜನರ ಹೆಂಡಿರನ್ನು ನೋಡಿದ್ದೇನೆ. ಹಾಗೆ ನೋಡಿದಾಗಲೆಲ್ಲ ನನ್ನ ಹೃದಯವು ಎಷ್ಟೋ ಸಾರಿ ಅವರ ಗಂಡಂದಿರಿಗಾಗಿ ಕರಗಿ ನೀರಾಗಿ ಧಾರೆಯಾಗಿ ಹರಿದು ಹೋಗಿಬಿಟ್ಟಿದೆ. ಅಂತಹವರಲ್ಲಿ ಹರಿಕಮತನ ಹೆಂಡತಿ ಅಗ್ರಗಣ್ಯಳು. ಅವಳು ನನ್ನ ಹೆಂಡತಿಯಂತಿಲ್ಲ; ನನಗೆ ಪರಕೀಯನಾದ ಹರಿಕಮತನ ಹೆಂಡತಿಯು. ಆದರೆ ನನ್ನ ಕಥೆಯ ನಾಯಕಿಯಾದುದರಿಂದ ಅವಳು ಕುರೂಪಿಯಲ್ಲ; ಸುರೂಪಿಯೆಂದು ಹೇಳಬೇಕಾಗಿ ನಿಮ್ಮ ಬಲಾತ್ಕಾರವಿದ್ದರೆ, ನಾನು—ನಾನು—ಹೋಗಲಿ, ನಾನು ಈ ಕಥೆಯನ್ನು ಇಲ್ಲಿಯೇ ನಿಲ್ಲಿಸಬೇಕಾಗುವುದು.

ಹರಿಕವುತನಿಗೆ ಒಂದಾದರೂ ಕೂಸಿದ್ದಿದ್ದರೆ ಈ ಕಥೆಯೇ ಬೇರೆಯಾಗಿ ಹೋಗುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. ಆಗ್ಗೆ ರುಕ್ಮಿಣಿಯು ಕುರೂಪಿಯಾಗಿದ್ದಳೆಂದು ಹೇಳುವುದಕ್ಕೆ ಸಂದರ್ಭವೇ ಇರುತ್ತಿದ್ದಿಲ್ಲ. ಹರಿಕವುತನು ಕೂಡ ತನ್ನ ಹೆಂಡತಿಯಷ್ಟು ಸುಂದರಿ ಮತ್ತಾರೂ ಇಲ್ಲವೆಂದು ತಿಳಿದುಕೊಳ್ಳುತ್ತಿದ್ದನೋ ಏನೋ. ಏಕೆಂದರೆ, ತಂದೆಯಂತೆ ಮಗುವಾದರೆ, ಮಗುವಿನಂತೆ ತಾಯಿಯಲ್ಲವೇ? ಆದರೆ ಈ ವಿಷಯದಲ್ಲಿಯೂ ಹರಿಕವುತನು ನಿರ್ಭಾಗ್ಯನು. ಅವನ ಆರು ವರ್ಷಗಳ ಸಂಸಾರದಲ್ಲಿಯೂ ಸರ್ವಶಕ್ತನಾದ ಜಗದೀಶ್ವರನು ಅವನಿಗೆ ಈ ಒಂದು ಭಾಗ್ಯವನ್ನು ದಯಪಾಲಿಸಲಿಕ್ಕೆ ಅಶಕ್ತನಾದನು. ಹೀಗಿರುವಾಗ್ಗೆ ಅವನು ಯಾರಿಗಾಗಿ ಬೇಗಬೇಗನೆ ತನ್ನ ಬಿಡಾರಕ್ಕೆ ಹೋಗುವುದು?

ಒಂದು ವೇಳೆ ಅವನ ಹೆಂಡತಿಯು ಕುರೂಪಿಯಾದರೆ, ಸಾಯು— ಹೋಗಲಿ. ಒಂದು ವೇಳೆ ಅವನಿಗೆ ಮಕ್ಕಳಿಲ್ಲದಿದ್ದರೂ ಚಿಂತೆ ಇದ್ದಿಲ್ಲ. ಮಕ್ಕಳಿದ್ದರೂ ಚಿಂತೆ ಅಲ್ಲವೇ? ಆದರೆ ಹರಿಕವುತನ ಈ ಆರು ವರ್ಷಗಳ ಸಂಸಾರವು ಕೂಡ ಒಂದೇ ಅಚ್ಚುಪಡಿಯಲ್ಲಿ ಎರಕಹೊಯ್ದಂತಾಗಿರಬೇಕಿತ್ತೇ? ಒಂದು ಇಂಗ್ಲಿಷು ನಾಣ್ಣುಡಿಯಿದೆ: 'Variety is Spice of Life' ಎಂದು. ಎಂದರೆ, ವಿವಿಧತೆಯೇ ಬಾಳ್ವೆಯ ಮಸಾಲೆ. (ಈ ಭಾಷಾಂತರಕ್ಕಾಗಿ ನನ್ನನ್ನು ದೂರಬೇಡಿ. ಇಂತಹ ಅಕೃತ್ಯಕ್ಕೆ ನಾನು ಜವಾಬದಾರನಲ್ಲ. ನನ್ನ ಹತ್ತಿರದಲ್ಲಿರುವ, ಅಂದರೆ ನಾನು ಯಾವಾಗಲೂ ಉಪಯೋಗಿಸುವ ಒಂದು ಇಂಗ್ಲಿಷ್-ಕನ್ನಡ ನಿಘಂಟೇ ಇದರ ಪೂರ್ಣ ಜವಾಬದಾರಿಕೆಯನ್ನು ವಹಿಸಿಕೊಳ್ಳುವುದು.) ನಿರ್ಭಾಗ್ಯನಾದ ಹರಿಕವುತನ ಜೀವನಕ್ಕೆ ವಿವಿಧತೆಯ ಮಸಾಲೆ ಕೂಡ ಇದ್ದಿಲ್ಲ. ಹೆಚ್ಚೇಕೆ? ಅವನ ಆರು ವರ್ಷಗಳ ಸಂಸಾರದಲ್ಲಿ ರುಕ್ಮಿಣಿಗೆ ಒಂದು ತಲೆ-ನೋವಾದರೂ ಎದ್ದಿರಬೇಕೇ? ಇಲ್ಲ, ಒಂದು ದಿನಕ್ಕಾದರೂ ಇಲ್ಲ!

ಹೀಗಾಗಿ ಹರಿಕವುತನಿಗೆ ಒಂದು ದಿನದಂತೆ ಮತ್ತೊಂದಾಯಿತು. ಮತ್ತೊಂದರಂತೆ ಇನ್ನೊಂದಾಯಿತು. ಇನ್ನೊಂದರಂತೆ ಮಗುದೊಂದಾಯಿತು. ಒಂದು ತಿಂಗಳಿನ ೩೦ ದಿನಗಳೂ ಒಂದೇ ರೀತಿಯಾದುವು.

ಒಂದು ವರ್ಷದ ೩೬೫ ದಿನಗಳೂ ಹೀಗೆಯೇ. ರುಕ್ಮಿಣಿಯೊಡನೆ ಅವನು ಇಂದಿನ ವರೆಗೆ ನಡೆಯಿಸಿದ ಈ ಆರು ವರ್ಷಗಳ ೩೬೫X೬ ಅಂದರೆ ೨,೧೯೦ ದಿನಗಳೂ ಒಂದೇ ವಿಧವಾದುವು. ಚುಟುಕಾಗಿ ಹೇಳುವುದಾದರೆ, ಹರಿಕಮಂತನ ಬಾಳ್ವೆಗೆ ಮಸಾಲೆಯೇ ಇಲ್ಲದಂತಾಯಿತು.

ಹರಿಕಮಂತನು ಮುಂದು ಮುಂದಕ್ಕೆ ಹೋದನು. ತಾನು ತನ್ನ ಬಿಡಾರವನ್ನು ಸೇರಿದೊಡನೆ ತನಗೆ ಎಂದಿನಂತೆ ಇಂದೂ ಸಂಭವಿಸಬಹುದಾದ ವಿದ್ಯಮಾನಗಳನ್ನೆಲ್ಲ ಒಂದೊಂದಾಗಿಯೇ ತನ್ನ ಮನಸ್ಸಿನಲ್ಲಿ ತಿರುಗಿಸುತ್ತಾ ಮುಂದೆ ಮುಂದೆ ಹೋಗುವವನಾದನು. ನೋಡೋಣ; ಹರಿಕಮಂತನಿಗೆ ತನ್ನ ಬಿಡಾರದಲ್ಲಿ ಸಂಭವಿಸಬಹುದಾದ ಈ ವಿದ್ಯಮಾನಗಳು ಯಾವು-ಯಾವುವು ಎಂದು ಪರೀಕ್ಷಿಸಿ ನೋಡೋಣ.

ಸ್ವಲ್ಪ ಸಮಯದಲ್ಲಿಯೇ ಬಿಡಾರವನ್ನು ಸೇರುವನು. ಇದಕ್ಕೇನೂ ಸಂದೇಹವಿಲ್ಲ. ರುಕ್ಮಿಣಿಯು ಬಾಗಿಲಬಳಿಯಲ್ಲಿ ಎಲೆ ಅಡಿಕೆಯನ್ನು ಹಾಕಿಕೊಳ್ಳುತ್ತಾ ಕೂತುಕೊಳ್ಳುವಳು. ಅವನು ಬಂದಕೂಡಲೇ ಎದ್ದು ನಿಂತು ‘ಬಂದಿರೇ?’ ಎಂದು ಕೇಳುವಳು. ‘ಹೌದು’ ಎಂದು ಅವನು ಹೇಳಬೇಕಾಗುವುದು. ‘ಸ್ವಲ್ಪ ಕಾಫಿ ಮಾಡಿ ಕೊಡಲೇ?’ ಎನ್ನುವಳು. ತಾನು ಹೊಟೇಲಿನಲ್ಲಿ ಕುಡಿದಿರುವುದರಿಂದ ‘ಬೇಡ, ಈಗ ಬೇಡ’ ಎಂದು ಅವನ ಉತ್ತರ. ಈ ಸಂವಾದವಾದ ಬಳಿಕ ರುಕ್ಮಿಣಿಯು ಅವನ ಹತ್ತಿರ ಸರಿದು ‘ಇವತ್ತೇನು ಪಲ್ಯಮಾಡಲಿ?’ ಎಂದು ಕೇಳುವಳು. ರುಕ್ಮಿಣಿಯನ್ನು ದೂರಬೇಡಿ. ಪ್ರತಿಯೊಬ್ಬ ಹೆಂಡತಿಗೆ ಅತಿ ಪ್ರಾಮುಖ್ಯವಾಗಿರುವ ಪ್ರಶ್ನೆಯನ್ನೇ ಅವಳು ಕೇಳಿರುವಳು. ‘ನನಗೆ ಎಲ್ಲವೂ ಸರಿಯೇ; ನಿನಗೆ ಬೇಕಾದ್ದನ್ನು ಮಾಡು’ ಎಂದು ಹರಿಕಮಂತನು ಉತ್ತರ ಕೊಡುವನು. ಇದು ನಿಮ್ಮಲ್ಲಿಯೂ ನನ್ನಲ್ಲಿಯೂ ವಾಡಿಕೆಯಾದ ಉತ್ತರವೇ ಎಂದು ನಾನು ಬೇರೆ ಹೇಳಬೇಕಾದ್ದಿಲ್ಲ. ರುಕ್ಮಿಣಿಯು ತನಗೆ ಬೇಕಾದ್ದನ್ನೇ ಮಾಡುವಳು. ಹಿಂದಿನ ೨,೧೯೦ ದಿನಗಳಲ್ಲಿಯೂ ಮಾಡಿದಂತೆ, ಈ ೨೧೯೧ನೆಯ ದಿನದಲ್ಲಿಯೂ ತೊಗರಿಬೇಳೆಯ ತೊವ್ವೆಯನ್ನು ಮಾಡಿ

ಬಳಸುವಳು ಎಂದು ಹರಿಕಮತನು ತಿಳಿದುಕೊಳ್ಳುವನು. ಇದೂ ಗಂಡಂದಿರಾದ ನಮ್ಮೆಲ್ಲರ ಅನುಭವದಲ್ಲಿರುವುದು.

ಅಷ್ಟರೊಳಗೆ ಹರಿಕಮತನು ತನ್ನ ಕೋಟನ್ನೂ ಟೊಪ್ಪಿಗೆಯನ್ನೂ ತೆಗೆದಿಟ್ಟು ಒಂದು ಗಳಿಗೆ ಜಗಲಿಯಲ್ಲಿರುವ ವಿರಾಮಕುರ್ಚಿಯಲ್ಲಿ ಕುಳಿತುಕೊಳ್ಳುವನು. ಹೀಗೆ ಅವನು ಕೂತುಕೊಂಡ ಸ್ವಲ್ಪ ಸಮಯದಲ್ಲಿಯೇ ಅವನ ಬಿಡಾರದ ಬಲಗಡೆಯಿಂದ 'ಸರಿಗ್ಗ ಗಗ್ಗನಿ ಪಪ್ಪಮ ಮಮ್ಮಸ' ಎಂಬ ಒಂದು ಹದಿನೈದು ರೂಪಾಯಿ ಹಾರ್ಮೋನಿಯಮ್ ಸ್ವರಕ್ಕೆ ಜೋಡಣೆಯಾಗಿ ಒಂದು ತರದ ಉದ್ವೇಗದ ಸ್ವರವು ಹೊರಡುವುದು. ಕೂಡಲೆ ಅವನ ಬಿಡಾರದ ಎಡಗಡೆಯಿಂದ ಒಬ್ಬನು ಕೊಳಲನ್ನು ಬಾರಿಸಲಿಕ್ಕೆ ಕಲಿಯುವನು. ಇದಾದ ಒಂದೆರಡು ನಿಮಿಷಗಳಲ್ಲಿಯೇ ಅವನ ಬಿಡಾರದ ಹಿಂದುಗಡೆಯಿರುವ ಕೃಷ್ಣಪ್ಪನು ತಾನೊಬ್ಬ ಬಿಡಾರಂ ಕೃಷ್ಣಪ್ಪನೋ ಎಂಬ ಭಾವನೆಯನ್ನು ತಾಳಿ, ತನ್ನ ವಿಲಕ್ಷಣವಾದ ಕೂಗುಗಳಿಂದ ಸುತ್ತುಮುತ್ತಲಿನ ವಾಯುಮಂಡಲವನ್ನೆಲ್ಲ ಅಲ್ಲೋಲ ಕಲ್ಲೋಲ ಮಾಡಿಬಿಡುವನು.

ಹರಿಕಮತನು 'ಸರ್ವಂ ವಿಷ್ಣುಮಯಂ ಜಗತ್' ಎಂಬ ವೇದವಾಕ್ಯವನ್ನು ಸಂಪೂರ್ಣವಾಗಿ ಶಿರಸಾವಹಿಸಲಿಕ್ಕೆ ಸಿದ್ಧನಾಗಿದ್ದನು. ಅವನನ್ನು ನೀವು ಒತ್ತಾಯಪಡಿಸಿದರೆ 'ಸರ್ವಂ ಕಾವ್ಯಮಯಂ ಜಗತ್' ಎಂಬ ಮತವನ್ನೂ ಸ್ವೀಕರಿಸಲಿಕ್ಕೆ ಅವನು ಒಂದುವೇಳೆ ಒಪ್ಪಿಗೆ ಕೊಟ್ಟಾನು. ಆದರೆ 'ಸರ್ವಂ ಸಂಗೀತಮಯಂ ಜಗತ್' ಎಂದು ಯಾರಾದರೂ ಒಬ್ಬರು ಪೀಕಲಾಟವನ್ನು ಎಬ್ಬಿಸುವುದಾದರೆ, ಅವನು ಹರಿಕಮತನಿಂದ ಎರಡು ಮೈಲು ದೂರವಾದರೂ ಇರುವಂತೆ ಜಾಗ್ರತೆ ತೆಗೆದುಕೊಳ್ಳುವುದು ಒಳ್ಳೇದು. ನಾನು ಈಗಲೆ ನಿಮಗೆ ತಿಳಿಸುತ್ತೇನೆ. ಮತ್ತೆ ನನ್ನನ್ನು ದೂರಬೇಡಿ.

ಹೀಗಿರುವಾಗ 'ಬಲಗಡೆ ಗುಂಡು, ಎಡಗಡೆ ಗುಂಡು, ಹಿಂದುಗಡೆ ಗುಂಡು' ಎಂಬಂತೆ ತನ್ನ ಬಿಡಾರದ ಮೂರೂ ಕಡೆಗಳಿಂದಲೂ ಸಿಡಿ

ಮದ್ದಿನಂತೆ ಬರುವ ಗಾಯನದ ಹೊಡೆತಕ್ಕೆ ಹರಿಕಮತನು ತಲೆಬಗ್ಗಿಸು ವನೇ? ಇಲ್ಲ, ಎಂದೂ ಇಲ್ಲ; ಈ ೩,೧೯೦ ದಿನಗಳಲ್ಲಿಯೂ ಅವನು ತಲೆ ಬಗ್ಗಿಸಲಿಲ್ಲ. 'ಹರದಾರಿ, ಹರದಾರಿ, ಹರದಾರಿ, ಮುಂದು!' ಎಂಬ ಸೂತ್ರವನ್ನು ಕೂಡಲೆ ಜ್ಞಾಪಕಕ್ಕೆ ತಂದುಕೊಂಡು ತನ್ನ ಟೊಪ್ಪಿಗೆ ಯನ್ನೂ, ಕೋಟನ್ನೂ ಪುನಃ ಹಾಕಿಕೊಂಡು ಹೊರಡುವನು.

ಇದನ್ನು ನೋಡಿದ ಕೂಡಲೆ ರುಕ್ಮಿಣಿಯು ಹೊರಕ್ಕೆ ಬಂದು 'ಈಗೆಲ್ಲಿ ಹೊರಡೋಣವೋ? ಗಂಟೆ ಏಳೂವರೆ ಆಯಿತು. ಇನ್ನು ಅರ್ಧ ಗಂಟೆಯೊಳಗೆ ಊಟ ಸಿದ್ಧವಾಗುವುದು. ಒಂದು ದಿನವಾದರೂ ಮನೆ ಯಲ್ಲಿ ಕೂತುಕೊಳ್ಳಬಾರದೇ?' ಎಂದು ತೀಕ್ಷ್ಣತೆಯಿಂದ ಕೇಳುವಳು.

ಹರಿಕಮತನು ಸುಣ್ಣದ-ಡಬ್ಬಿಯಂತಿರುವ ತನ್ನ ವೋಚ್‌ನ್ನು ಫಕ್ಕನೆ ಹೊರಕ್ಕೆ ತೆಗೆದು—ಇಲ್ಲ, ರುಕ್ಮಿಣಿಯು ತಲೆಗೆ ಏಸೆಯುವುದಿಲ್ಲ- ಸಮಯವನ್ನು ನೋಡುವನು. 'ಇಲ್ಲ; ೭॥ ಗಂಟೆ ಆಗಲಿಲ್ಲ; ಇನ್ನೂ ೭ ಗಂಟೆಗೆ ೧೦ ಮಿನಿಟುಂಟು. ಕ್ಲಬ್ಬಿಗೆ ಹೋಗೋಣವೋ ಎಂದು ಹೊರಟೆ. ಪೇಪರು ನೋಡದೆ ಎಷ್ಟೋ ದಿವಸಗಳಾದುವು. ಇಂದಾದರೂ ನೋಡಬೇಕು' ಎಂದು ಹೇಳುತ್ತ ಹೊರಗೆ ಹೋಗಿಯೇಬಿಡುವನು. ಜಗಲಿಯ ಮೆಟ್ಟಿಲಿನ ಮೇಲಿನಿಂದ, 'ಇನ್ನು ಅರ್ಧ ಗಂಟೆಯೊಳಗೆ ಬರು ತ್ತೇನೆ,' ಎಂದು ಹೇಳಿ ರುಕ್ಮಿಣಿಯು ಪ್ರತ್ಯುತ್ತರವು ತನ್ನ ಕಿವಿಗೆ ಬೀಳುವ ಮೊದಲೇ ಥಟ್ಟನೆ ಹೋಗಿ ಮಾರ್ಗವನ್ನು ಸೇರುವನು.

ಹರಿಕಮತನ ಸಂಜೆಯ ಅರ್ಧ ತಾಸು ಎಂಬುದು ನಮ್ಮಂತಹ ನಾಗರಿಕರ ಎರಡು ತಾಸುಗಳಷ್ಟು ದೊಡ್ಡದು. ಇದು ಅವನ ತಪ್ಪಲ್ಲ. ಕಾಲಕ್ಕೆ ಸಮಯದ ಬೆಲೆ ಗೊತ್ತಿಲ್ಲ. ಅದು ಬಹಳ ಪಕ್ಷಪಾತಿಯು. ಹರಿಕಮತನು ಸಂಜೆ ಕ್ಲಬ್ಬಿನಲ್ಲಿ ಬಿಝಿಕ್ ಆಟವನ್ನು ಆಡಲಿಕ್ಕೆಂದು ಕೂತುಕೊಳ್ಳುವುದೇ ತಡ, ಅದು ನಾಗಾಲೋಟದಿಂದ ಓಡಲಿಕ್ಕೆ ಪ್ರಾರಂಭಿಸುತ್ತದೆ. ಅದೇ ಸಮಯವು ಮನೆಯಲ್ಲಿದ್ದಾಗ್ಗೆ ಆಮೆಯಂತೆ ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತದೆ. ಹರಿಕಮತನು ತಾನು ಪೇಪರು ನೋಡದೆ ಅನೇಕ ದಿನಗಳಾದುವು ಎಂದು ಹೇಳುವ ಮಾತೂ

ನಿಜವಾದದ್ದೇ. ಏಕೆಂದರೆ ಅವನಿಗೆ ಪೇಪರು ನೋಡುವ ಅಭ್ಯಾಸವು ಆಗುವ ಮೊದಲೇ ಬಿಟ್ಟು ಹೋಗಿದೆ. ಇದೂ ಅವನ ತಪ್ಪಲ್ಲ. ಅವನು ಆಡುವ ಬಿಝಿಕ್ ಆಟದ ತಪ್ಪು.

ಅದು ಹೇಗೂ ಇರಲಿ. ಅವನು ಕ್ಲಬ್ಬಿನಿಂದ ತಿರುಗಿ ತನ್ನ ಬಿಡಾರಕ್ಕೆ ಬರುವಾಗ ರಾತ್ರಿ ೯ ಗಂಟೆಯಾಗುವುದು. ಒಂದೊಂದು ವೇಳೆ ರುಕ್ಮಿಣಿಯು ಅವನಿಗಾಗಿ ಕಾದು ಕಾದು ಊಟಮಾಡದೆಯೇ ನಿದ್ದೆ ಹೋಗುವಳು. ಒಂದೊಂದು ವೇಳೆ ಅದೇ ಕಾರಣದಿಂದ ತೂಕಡಿಸುವಳು. ಒಂದೊಂದು ವೇಳೆ ಮತ್ತೂ ಅದೇ ಕಾರಣದಿಂದ ಮಹಾಕಾಳಿಯ ಅವತಾರವನ್ನು ಧರಿಸುವಳು. ಇಂದು ತಾನು ತನ್ನ ಬಿಡಾರವನ್ನು ಮುಟ್ಟಿದೊಡನೆ ಅವಳು ಯಾವ ರೂಪವನ್ನು ಧರಿಸುವಳು ಎಂಬ ಒಂದು ಸಂಗತಿಯನ್ನು ಮಾತ್ರ ಹರಿಕಮತನಿಗೆ ಖಂಡಿತವಾಗಿ ಹೇಳಲು ಸಾಧ್ಯವಿಲ್ಲ.

* * *

ಇದೇ ರೀತಿಯಲ್ಲಿ ಹರಿಕಮತನು ತಾನು ಬಿಡಾರವನ್ನು ಮುಟ್ಟಿದೊಡನೆ ತನ್ನ ಸಂಸಾರದ ದಿನವಹಿಯ ಚಕ್ರವು ಹೇಗೆ ಹೇಗೆ ತಿರುಗುವುದೆಂದು ಮೊದಲೇ ಊಹಿಸಿಕೊಂಡು, ಅದನ್ನೇ ತನ್ನ ಮನಸ್ಸಿನೊಳಗೆ ತಿರುಗಿಸುತ್ತಾ ಮೆಲ್ಲಮೆಲ್ಲನೆ ತನ್ನ ಬಿಡಾರಕ್ಕಾಗಿ ಸರಿದುಹೋದನು. ಆದರೆ ಯಾವನೊಬ್ಬನು ಒಂದು ಠಾಣ್ಯಕ್ಕೆಂದು ಹೊರಟು ಆ ಮೇಲೆ ಎಷ್ಟು ಮೆಲ್ಲಮೆಲ್ಲನೆ ಹೋದರೂ ಆ ಠಾಣ್ಯವನ್ನು ಮುಟ್ಟಲೇ ಬೇಕಲ್ಲವೇ? ಇದರಲ್ಲಿ ಸಂಶಯವಿಲ್ಲ. ಹರಿಕಮತನು ಯಾವ ಠಾಣ್ಯಕ್ಕೆಂದು ಹೊರಟಿದ್ದನೋ ಅದನ್ನು ಮುಟ್ಟಿಯೇ ಬಿಟ್ಟನು. ರುಕ್ಮಿಣಿಯು ಬಾಗಿಲಬಳಿಯಲ್ಲಿ ಎಲೆ ಅಡಿಕೆಯನ್ನು ಹಾಕಿ, 'ಬಂದಿರೇ?' ಎಂದು ಹೇಳುವುದನ್ನು ಕೇಳಲಿಕ್ಕೆ ಅವನ ಕಿವಿಗಳು ತವಕಗೊಂಡುವು. 'ಹೌದು' ಎಂದು ಉಚ್ಚರಿಸಲಿಕ್ಕೆ, ಅವನ ತುಟಿಗಳು ಬಿಚ್ಚತೊಡಗಿದವು. ಅವನ ಕಾಲುಗಳು ಅಷ್ಟರೊಳಗೆ ಅವನನ್ನು ಹೊತ್ತುಕೊಂಡು ಅವನನ್ನು ಜಗಲಿಯ ಮೇಲೆ ತಂದು ಬಿಟ್ಟುವು. ...... ಆದರೆ ...... ಆದರೆ ...... ಇದೇನು? 'ಬಂದಿರೆ?' ಎಂದು ದಿನವೂ ಕೇಳಿಬರುವ ಸ್ವರವೆಲ್ಲಿ? ಅವನ ಕಿವಿಗಳು

ಫಕ್ಕನೆ ಕಿವುಡಾಗಿ ಹೋದುವೇ? ...... ರುಕ್ಮಿಣಿ ಎಲ್ಲಿ? ...... ಅವನ ಕಣ್ಣುಗಳು ಕೂಡ...... ಇಲ್ಲ, ಅವನ ಕಣ್ಣುಗಳು ಸರಿಯಾಗಿದ್ದುವು, ಕಿವಿಗಳೂ ನೆಟ್ಟಗಿದ್ದುವು.... 'ಬಂದಿರೆ?' ಎಂದು ಕೇಳುವ ರುಕ್ಮಿಣಿಯ ಸ್ವರವು ಮಾತ್ರ ಇಲ್ಲ! ಇದೇನು, ರುಕ್ಮಿಣಿಯೂ ಬಾಗಿಲ ಬಳಿಯಲ್ಲಿ ಇರಲಿಲ್ಲ!

ಬಾಗಿಲಿಗೆ ಬೀಗಹಾಕಿದ್ದಿತು.

ಹರಿಕಮತನಿಗೆ ತಲೆ ತಿರುಗಲಾರಂಭಿಸಿತು. ಅವನ ಹುರುಳಿಲ್ಲದ ಸಂಸಾರದ ದಿನವಹಿಯ ಚಕ್ರಕ್ಕೆ ಎಲ್ಲಿಯೋ ಒಂದು ಕಡೆ ಬಿರಿ ಕಟ್ಟಿದಂತಾಯಿತು. ಅವನು ಅನೇಕ ಕಾಲದಿಂದ ಇಚ್ಛಿಸಿದ್ದ ವಿವಿಧತೆಯು ಅವನ ಜೀವನದಲ್ಲಿ ಕಳೆಯನ್ನು ತುಂಬಿಸಲಾರಂಭಿಸಿತು. ಅನೇಕ ಕಾಲದಿಂದ ಅವನು ಹಂಬಲಿಸುತ್ತಿದ್ದ ಮುಸಾಲೆಯ ಖಾರವು ಅವನ ತಲೆಗೇರಹತ್ತಿತು.

ಒಂದು ವಿಚಿತ್ರರೀತಿಯ ಆಹ್ಲಾದದಿಂದ ಅವನು ನೆರೆಮನೆಗೆ ಓಡಿಹೋದನು. ಕಂಡ ಸಂಗತಿಯನ್ನು ತವಕದಿಂದ ಹೇಳಿದನು. ನೆರೆಮನೆಯವರು ಅವನ ಬಿಡಾರದ ಬೀಗದ ಕೈಯನ್ನು ಕೊಟ್ಟರು. 'ರುಕ್ಮಿಣಿಯು ಎಲ್ಲಿ ಹೋಗಿರುತ್ತಾಳೋ ಗೊತ್ತಿಲ್ಲ. ಅವಳು ಬಹಳ ಅವಸರದಲ್ಲಿದ್ದಳು. ಅವಳು ಮಧ್ಯಾಹ್ನದ ಮೇಲೆ ೨ ಗಂಟೆಗೇ ಹೋಗಿದ್ದಾಳೆ. ಅವಳ ಅಣ್ಣನು ಅವಳನ್ನು ಕರಕೊಂಡು ಹೋಗಲಿಕ್ಕೆ ಬಂದಿದ್ದನು. ಬಿಡಾರದ ಬೀಗದ ಕೈಯನ್ನು ಮಾತ್ರ ನಮ್ಮ ಹತ್ತಿರ ಕೊಟ್ಟಳು. ಮತ್ತೇನೂ ನಮಗೆ ಗೊತ್ತಿಲ್ಲ'ವೆಂದು ನೆರೆಮನೆಯವರು ತಿಳಿಸಿದರು.

ಬೀಗದ ಕೈಯನ್ನು ತೆಗೆದುಕೊಂಡು ಹರಿಕಮತನು ತನ್ನ ಬಿಡಾರಕ್ಕೆ ಹೋದನು. ಬಿಡಾರದ ಬೀಗವನ್ನು ತೆಗೆದನು. ಬಾಗಿಲನ್ನು ತೆರೆದು ಒಳಕ್ಕೆ ಹೋದನು. ಸಂಜೆಯ ಹೊತ್ತು ಮೀರಿದ್ದುದರಿಂದ ಒಳಗೆ ಕತ್ತಲಾಗಿತ್ತು. ದೀಪವನ್ನು ಹುಡುಕಿ ದೀಪ ಹಚ್ಚಿದನು.

ಹರಿಕಮತನ ಮನಸ್ಸಿನಲ್ಲಿ ವಿಧವಿಧವಾದ ಆಲೋಚನೆಗಳೂ ಊಹೆಗಳೂ ನುಸುಳಿಕೊಂಡುವು. ಅವನ ಹೃದಯದಲ್ಲಿ ಒಂದು ನವೀನ

ರೀತಿಯ ವೇದನೆಯು ವ್ಯಾಪಿಸಿಕೊಂಡಿತು. ಕೋಣೆಯೊಳಗೆ ಸುತ್ತು ಮುತ್ತಲೂ ನೋಡಿದನು. ಪ್ರತಿಯೊಂದೆಡೆಯಲ್ಲಿಯೂ ಅವಸರದ ಕುರುಹುಗಳು ಅವನ ಕಣ್ಣುಗಳನ್ನು ಕುಕ್ಕಿದುವು. ರುಕ್ಮಿಣಿಯು ಉಟ್ಟು ಕೊಂಡ ಸೀರೆಯು ನೆಲದಲ್ಲಿ ಬಿಟ್ಟ ಹಾಗೆಯೆ ಒಂದು ಕಡೆಯಿತ್ತು. ಅವಳು ತೊಟ್ಟಿದ್ದ ರವಕೆಯು ನೆಲದ ಮೇಲೆ ಇನ್ನೊಂದು ಕಡೆಯಲ್ಲಿ ಬಿದ್ದಿತ್ತು. ಗಂಡನ ಪತಿತ್ವದ ಕಣ್ಣುಗಳಿಗೆ ಆ ರವಕೆಯು ರುಕ್ಮಿಣಿಯ ಮೈಯ ಆಕಾರ ವನ್ನು ಘಂಟಾಘೋಷವಾಗಿ ಇನ್ನೂ ಪ್ರಕಟಗೊಳಿಸುತ್ತಿತ್ತು. ಎಲ್ಯ ದೆಲೆ ಹರಿವಾಣವು ಮತ್ತೊಂದೆಡೆ ಮಗುಚಿ ಬಿದ್ದಿತ್ತು. ಇದಲ್ಲದೆ ಅವಳ ಅನೇಕಾನೇಕ ವಸ್ತ್ರಗಳೂ ನೆಲದಲ್ಲಿ ಬಿದ್ದುಕೊಂಡಿದ್ದುವು. ನೆಲದ ಮಧ್ಯ ದಲ್ಲಿ ಒಂದು ಕಾಗದವೂ ಬಿದ್ದಿತ್ತು. ಅವನು ಅದನ್ನು ತವಕದಿಂದ ಹೆಕ್ಕಿ ತೆಗೆದು ದೀಪದ ಬಳಿಗೆ ಹೋದನು. ರುಕ್ಮಿಣಿಯು ಅವಸರದಿಂದ ಬರೆದ ಕಾಗದದಲ್ಲಿ ಹೀಗಿತ್ತು :—

'ಅಮ್ಮನಿಗೆ ಮೈಯಲಿ ಯೇನು ಕುಡುವದಿಲ್ಲವಂತೆ. ಅಣ್ಣಯ್ಯನವರು ನಂನನು ಕರಕೊಂಡು ಹೋಗಲಿಕ್ಕೆ ಗಾಡಿ ಮಾಡಿಕೊಂಡು ಬಂದಿರುತ್ತಾರೆ. ನಾಂನು ಇಗಲೇ ಅವರೊಂದಿಗೆ ಪದವಿಗೆ ಅಮ್ಮನ ಮನೆಗೆ ಹೊಗ್ತೆನೆ. ಅಮ್ಮ ಕ್ಷೆಮದಲ್ಲಿದರೆ ನಾನು ನಾಳೆ ಬರತ್ತೆನೆ

—ರುಕ್ಮಿಣಿ

ರಾತಿ ಊಟಕ್ಕೆ ಬೇಳೆಗೆ ಉಳಿದ ಅಂನವುಂಟು. ಮೆಲೊಗರವು ಸ್ವಲ್ಪವುಂಟು. ಬೆಕಾದರೆ ನೆರಿಮನೆಯಿಂದ ಸ್ವಲ್ಪ ತರಿಸಿರಿ. ವಿಸೇಶವೆನೂ ಇಲ್ಲ.'

ಹರಿಕಮತನು ಕಾಗದವನ್ನು ಒಮ್ಮೆ ಓದಿದನು. ಇನ್ನೊಮ್ಮೆ ಓದಿದನು. ಮತ್ತೊಮ್ಮೆ ಓದಿದನು. ಅವನ ದಾಂಪತ್ಯ ಸಂಸಾರದ ಆದು ವರೆಗಿನ ೩,೧೯೫ ದಿನಗಳಲ್ಲಿಯೂ ರುಕ್ಮಿಣಿಯು ಬರೆದ ಕಾಗದವನ್ನು ಅವನು ಓದಿದುದು ಇದೇ ಮೊದಲನೇ ಸಾರಿ. ಇದನ್ನು ತಿಳಿದುಕೊಂಡ ಕೂಡಲೇ ಅವನ ಮೈಯಲ್ಲಿ ರೋಮಾಂಚವೆದ್ದಿತು. ರುಕ್ಮಿಣಿಯ ಕಾಗದ! ತನ್ನ ಹೆಂಡತಿಯ ಕಾಗದ! 'ಆದರೆ ನಾನು ಪಡುವ ಸಂತೋಷವನ್ನು ಯಾರಿಗೆ ತಿಳಿಸಲಿ? ರುಕ್ಮಿಣಿಯು ಅಲ್ಲಿದ್ದರೆ'.... ಛುಚಾಛ್ಚಾ, ರುಕ್ಮಿಣಿಯು ಅಲ್ಲಿಲ್ಲವೆಂದು ಗೊತ್ತಿಲ್ಲವೇ?

ಅವನ ಸಂಸಾರದ ೨,೧೯೦ದಿನಗಳಲ್ಲಿ ಅವನು ರುಕ್ಮಿಣಿಯಿಂದ ಅಗಲಿಕೆ ಹೊಂದಿದ್ದುದು ಇದೇ ಮೊದಲನೆಯ ಸಾರಿ. ಸತ್ತುಹೋದ ಎಮ್ಮೆಗೆ ಹಾಲು ಹೆಚ್ಚು. ನಮ್ಮ ಹತ್ತಿರವಿರುವ ಒಂದು ವಸ್ತುವನ್ನು ನಾವು ಕಳಕೊಂಡ ಮೇಲೆಯೇ ಅದರ ಪೂರ್ಣ ಬೆಲೆಯು ನಮಗೆ ತಿಳಿದು ಬರುವುದು. ಇದರ ಪೂರ್ಣಾನುಭವವು ಹರಿಕಮಂತನಿಗೆ ಈಗಾಗಲಾರಂಭಿಸಿತು. ರುಕ್ಮಿಣಿಯು ಹರಿಕಮಂತನಿಗೆ ಅವನು ಉಸಿರಾಡುವ ಗಾಳಿಯಂತಿದ್ದಳು. ಲಕ್ಷ್ಯಕ್ಕೆ ತಂದುಕೊಳ್ಳುವ ವಸ್ತುವಲ್ಲವಾದರೂ ಅವಶ್ಯಕವಾದ ವಸ್ತುವೆನಿಸಿದ್ದಳು. ರುಕ್ಮಿಣಿಯ ಅವಶ್ಯಕತೆಯು ಅವನಿಗೆ ಆಗ ತಾನೆ ಹಠಾತ್ತಾಗಿ ತಿಳಿದುಬಂತು.

ಹರಿಕಮಂತನು ಅಲ್ಲಿಯೇ ಕುಳಿತುಬಿಟ್ಟನು. ಬೀಡಿ ಸೇದುವುದಕ್ಕೆಂದು ಬೀಡಿಯೊಂದನ್ನು ತನ್ನ ಕಿಸೆಯೊಳಗಿಂದ ತೆಗೆದನು. ಆದರೆ ಅದನ್ನು ಹಚ್ಚಲಿಕ್ಕೆ ಕೈ ಬಾರದೆ ಹೋಯಿತು. ತನ್ನ ಮುಂಧೆಯೇ ನೋಡುತ್ತ ಕಲ್ಲು ಪ್ರತಿಮೆಯಂತೆ ಕೂತುಕೊಂಡನು. ಕೋಣೆಯಲ್ಲಿ ಬೆಳಕಿದ್ದರೂ ಅವನ ಹೃದಯದಲ್ಲಿ ಅಂಧಕಾರವು ವ್ಯಾಪಿಸಿಕೊಂಡಿತು. ಕೋಣೆಯೊಳಗಿದ್ದ ಪ್ರತಿಯೊಂದು ವಸ್ತುವು 'ರುಕ್ಮಿಣಿ ಎಲ್ಲಿ?' ಎಂದು ಕಠೋರ ಸ್ವರದಿಂದ ಅವನನ್ನು ವಿಚಾರಿಸುವಂತೆ ಅವನಿಗೆ ತೋರಿಬಂತು. ಹೊರಗಿನಿಂದ 'ಸರಿಗ್ಗ ಗಗ್ಗನಿ ಪಪ್ಪಮ ಮಮ್ಮಸ' ಎಂಬ ಉದ್ವೇಗದ ಸ್ವರವು ಕೇಳಲಾರಂಭಿಸಿತು. ಎಡಗಡೆಯಿಂದ ಕೊಳಲಿನ ಆರ್ತ ಧ್ವನಿಯು ಮೆಲ್ಲಮೆಲ್ಲಗೆ ಹೊರಟಿತು. ಹಿಂದುಗಡೆಯಿರುವ ಕೃಷ್ಣಪ್ಪನೂ ತನ್ನ ವಿಲಕ್ಷಣವಾದ ಕೂಗುಗಳಿಂದ ಸುತ್ತುಮುತ್ತಲಿನ ವಾಯುಮಂಡಲವನ್ನು ಅಲ್ಲೋಲ ಕಲ್ಲೋಲ ಮಾಡಲಾರಂಭಿಸಿದನು. ಸುತ್ತಲೂ ಸರ್ವಜಗತ್ತು ಸಂಗೀತಮಯವಾಯಿತು. ಈಗ ಹರಿಕಮಂತನಿಗೆ ಕ್ಲಬ್ಬಿಗೆ ಹೋಗಲು ಯಾವ ಆತಂಕವಿರುವುದು? ತಟಕ್ಕನೇ ಎದ್ದು ಅವನೇಕೆ ಈಗ ಕ್ಲಬ್ಬಿಗೆ ಹೋಗಬಾರದು? ಅವನು ಹಾಗೆ ಹೋದರೆ ಅವನನ್ನು ಈಗ ಕೇಳುವವರು ಯಾರು? ಇಡೀ ರಾತ್ರಿಯು ಈಗ ಅವನದೇ ಆಗಿರುವುದು. ೯ ಗಂಟೆ ಅಲ್ಲ, ೧೨ ಗಂಟೆಯ ವರೆಗಾದರೂ ಅವನು ಕ್ಲಬ್ಬಿನಲ್ಲಿ ಬ್ರಿಜ್ಡ್ ಆಡಲಿಕ್ಕೆ ಕೂತುಕೊಂಡರೆ ಅವನನ್ನು ಕೇಳುವವರು ಯಾರು?

ಆದರೆ ಹರಿಕಮುತನು ಕೂತಲ್ಲಿಂದ ಕದಲಲಿಲ್ಲ. ಸುತ್ತುಮುತ್ತಲಿಂದೆದ್ದ ಸಂಗೀತದ ಆರ್ಭಟಕ್ಕೂ ಅವನು ಕದಲಲಿಲ್ಲ. ಅವನ ಕಿವಿಗಳು ಅತ್ತಿತ್ತಣ ಸದ್ದುಗಳಿಗೆಲ್ಲ ಕಿವುಡಾಗಿದ್ದುವು. ರುಕ್ಮಿಣಿಯ ಸ್ವರದ ಗಾಯನವು ಮಾತ್ರವೇ ಅವನ ಕಿವಿಗಳಲ್ಲಿ ತುಂಬಿಹೋಗಿತ್ತು. ರುಕ್ಮಿಣಿಯ ರೂಪಲಾವಣ್ಯವು ಮಾತ್ರವೆ ಅವನ ಕಣ್ಣುಗಳಲ್ಲಿ ನಲಿದಾಡುತ್ತಿತ್ತು. 'ಆಹಾ ನಾನು ಎಂತಹ ಮದಾಂಧನು! ರುಕ್ಮಿಣಿಯು ನನಗೆ ನಿಜವಾಗಿಯೂ ಎಷ್ಟು ಪ್ರಿಯಳಾಗಿದ್ದಳು! ಎಷ್ಟು ಹತ್ತಿರದವಳು! ಅಂಥವಳನ್ನು ನಾನು ಇಷ್ಟರವರೆಗೆ ಲಕ್ಷಿಸಲಿಲ್ಲವಲ್ಲ! ಅಹೋರಾತ್ರಿ ಎಂಬಂತೆ ಅವಳು ನನಗಾಗಿ ಗೇದು ನನ್ನ ಸುಖವೇ ತನ್ನ ಸುಖವೆಂದು ತಿಳಿದುಕೊಂಡಿದ್ದರೂ, ನಾನು ಮಾತ್ರ ಅವಳ ಸುಖವನ್ನು ಒಂದು ಕ್ಷಣಮಾತ್ರಕ್ಕೆ ಕೂಡ ಎಣಿಸಲಿಲ್ಲವಲ್ಲ! ನಾನು ಪ್ರತಿ ಸಂಜೆಗೆ ಕ್ಲಬ್ಬಿಗೆ ಹೋಗಿ ಸಮಯವನ್ನು ಆನಂದದಿಂದ ಕಳೆಯುತ್ತಿದ್ದಾಗ್ಗೆ ಅವಳು ನನಗಾಗಿ ಕಾದು ಕಾದು ಎಷ್ಟು ಬೇಸರಪಡುತ್ತಿದ್ದಳೋ, ನನ್ನ ಮಾತುಕಥೆಗಳಿಗಾಗಿ ಎಷ್ಟು ಆತುರಪಡುತ್ತಿದ್ದಳೋ, ತನ್ನ ಏಕಾಕಿಯಾದ ಜೀವನಕ್ಕಾಗಿ ಎಷ್ಟು ದುಃಖಿಸುತ್ತಿದ್ದಳೋ, ದೇವರೇ ಬಲ್ಲ. ನಾನು ಪಾಷಾಣಹೃದಯನು, ಕಠಿಣಮನಸ್ಕನು, ಹೆಂಡತಿಯನ್ನು ಬೇಸರದಿಂದ ಕೊಲ್ಲುವಾತನು, ಬಹಳ ಪಾಪಿಷ್ಠನು, ಹುಚ್ಚನು.... ಇಲ್ಲ, ಇನ್ನು ಹಾಗೆ ಮಾಡುವುದಿಲ್ಲ. ಇನ್ನು ಮುಂದೆ ಕ್ಲಬ್ಬಿಗೆ ಹೋಗುವುದಿಲ್ಲ; ನಾಳೆಯೇ ಕ್ಲಬ್ಬಿನ ಮೆಂಬರಿಕೆಗೆ ರಾಜಿನಾಮೆಯನ್ನು ಕೊಡುವೆನು. ಬ್ರಿಝಿಕ್ ಆಟಕ್ಕೆ ತರ್ಪಣೆಯನ್ನು ಬಿಡುವೆನು. ಇನ್ನು ಮುಂದೆ ನನ್ನ ಸಂಜೆಯ ಸಮಯವನ್ನು ನನ್ನ ಪ್ರಿಯಳಾದ, ನನ್ನ ಹೆಂಡತಿಯಾದ, ರುಕ್ಮಿಣಿಯ ಸಹವಾಸದಲ್ಲಿಯೆ ಕಳೆಯುವೆನು. ಅವಳ ಸುಖವೇ ನನ್ನ ಸುಖವೆಂದು ಭಾವಿಸುವೆನು. ಅವಳನ್ನು ನನ್ನ ಮಾತುಕಥೆಗಳಿಂದ ಸಂತೋಷಗೊಳಿಸುವೆನು. ಸಿನೆಮಾ ನಾಟಕಾದಿಗಳಿಗೆ ಇನ್ನು ಮುಂದೆ ಅವಳನ್ನು ಕರಕೊಂಡು ಹೋಗುವೆನು. ಗೃಹಕೃತ್ಯದಲ್ಲಿ ಇನ್ನು ಮುಂದೆ ಅವಳಿಗೆ ನಾನೂ ಸಹಾಯವನ್ನಿತ್ತು ಅವಳ ಮೇಲಿರುವ ಕೆಲಸದ ಭಾರವನ್ನು ಹಗುರ ಮಾಡುವೆನು....'

ಇದೇ ರೀತಿಯಲ್ಲಿ ರಾಮನು ತಾನು ಕಳಕೊಂಡ ಸೀತೆಗಾಗಿ ಹಂಬಲಿಸಿದಂತೆ ಹರಿಕಮತನು ರುಕ್ಮಿಣಿಗಾಗಿ ಹಂಬಲಿಸಲಾರಂಭಿಸಿದನು.

ಸ್ವಲ್ಪ ಸಮಯದಲ್ಲಿಯೇ ಫಕ್ಕನೆ ಎದ್ದು ನಿಂತನು. ತನ್ನ ಪ್ರತಿಜ್ಞೆಗಳನ್ನು ಆಚರಣೆಗೆ ತರಲಿಕ್ಕೆ ಕೂಡಲೇ ಸೊಂಟ ಕಟ್ಟಿದನು. ರುಕ್ಮಿಣಿಯು ಅವಸರದಿಂದ ಅಲ್ಲಲ್ಲಿಯೇ ಬಿಟ್ಟಿದ್ದ ವಸ್ತ್ರಗಳನ್ನು ಸರಿಯಾಗಿಡಲಿಕ್ಕೆ ಹೋದನು. ನೆಲದ ಮೇಲೆಯೇ ಅವಳು ಅವಸರದಲ್ಲಿ ಬಿಟ್ಟುಹೋದ ಸೀರೆಯನ್ನು ನೆರಿಗೆ ಹಾಕಿಡಲಿಕ್ಕೆ ಕೈಯಲ್ಲಿ ತೆಗೆದನು. ಕೂಡಲೇ ಅವನ ಮೈಯಲ್ಲೆಲ್ಲ ರೋಮಾಂಚವೆದ್ದಿತು. ಅವಳು ಅಲ್ಲಿಯೇ ಬಿಟ್ಟು ಹೋದ ಅವಳ ರವಕೆಯನ್ನು ಕೈಯಲ್ಲಿ ಹಿಡಿದುಕೊಂಡನು. ಅವನ ಕಣ್ಣುಗಳಲ್ಲಿ ನೀರು ಬರಲಾರಂಭಿಸಿತು. ಹೌದು, ಹರಿಕಮತನು ತಲೆಯನ್ನು ಬಗ್ಗಿಸಿ ಅಳಲಾರಂಭಿಸಿದನು. ರವಕೆಯು ರುಕ್ಮಿಣಿಯ ಮೈಯ ಆಕಾರವನ್ನು ಇನ್ನೂ ವ್ಯಕ್ತಗೊಳಿಸುತಿತ್ತು ಎಂದು ನಾನು ಮೊದಲೇ ಹೇಳಿದ್ದೇನಲ್ಲವೇ ? ಇನ್ನು ಹರಿಕಮತನು ಆ ಕೋಣೆಯ ಏಕಾಂತದಲ್ಲಿ ಏನು ಮಾಡಿದನೆಂದು ನಾನು ಹೇಳುವುದು ಏಹಿತವಲ್ಲ. ಆದರೆ ನಾನು ಹೀಗೆ ಹೇಳಿದುದರಿಂದಲೇ ನೀವು ಅದನ್ನು ಕೇಳಲಿಕ್ಕೆ ಬಹಳ ಆತುರಪಡುವಿರಿ! ಆದುದರಿಂದ ಹೇಳಿಯೇ ಬಿಡುವೆನು. ಹರಿಕಮತನು ರುಕ್ಮಿಣಿಯ ಆ ರವಕೆಯನ್ನು ತನ್ನ ಹೃದಯದ ಮೇಲೆ ಬಲವಾಗಿ ಒತ್ತಿಕೊಂಡು ಅನೇಕ ಸಾರಿ ಚುಂಬಿಸಿದನು. ಆ ರವಕೆಯೇ ತನ್ನ ರುಕ್ಮಿಣಿಯೆಂದು ಭ್ರಮಿಸಿ ಅದರೊಂದಿಗೆ ಹುಚ್ಚುಹುಚ್ಚಾಗಿ ಮಾತಾಡಲಿಕ್ಕೆ ತೊಡಗಿದನು—'ಪ್ರಿಯೇ, ರುಕ್ಮಿಣಿ, ನಾನು ನಿನಗೆ ಮಹಾಪರಾಧವನ್ನು ಮಾಡಿದೆ! ನಿನ್ನನ್ನು ತೃಣಸಮಾನಳನ್ನಾಗಿ ಎಣಿಸಿದೆ! ಪ್ರಿಯೇ, ನನ್ನನ್ನು ಕ್ಷಮಿಸು! ಒಮ್ಮೆ ನೀನು ನಿನ್ನ ತೌರು ಮನೆಯಿಂದ ಬಾ! ಇನ್ನು ನಿನ್ನ ಸುಖವೇ ನನ್ನದು!.. ವಿವಿಧತೆಯೇ ನನ್ನ ಜೀವನಕ್ಕೆ ಬೇಕಾದ ಮಸಾಲೆಯೆಂದು ಭ್ರಾಂತನಾಗಿ ನಾನು ವಿವಿಧತೆಗಾಗಿಯೇ ಈ ತನಕ ಹಂಬಲಿಸಿದೆನು! ನಾನು ಹುಚ್ಚನು! ನನ್ನ ಜೀವನಕ್ಕೆ ಬೇಕಾದ ಮಸಾಲೆಯು ವಿವಿಧತೆಯಲ್ಲ, ನೀನೇ ಆಗಿರುವಿ!....ಪ್ರಿಯೇ, ರುಕ್ಮಿಣೀ, ಬಾ!..ಒಮ್ಮೆ ಬಾ!'......

ಹರಿಕವುತನ ಬಿಡಾರದ ವುುಂದೆ ಒಂದು ಗಾಡಿಯುು ಬಂದು ನಿಂತಿತು. ಸ್ವಲ್ಪ ಸವುಯುದಲ್ಲಿಯೇ ಒಂದು ವ್ಯಕ್ತಿಯುು ಹರಿಕವುತ ನಿರುವ ಕೋಣೆಯೊಳಗೆ ಬಂದು ನಿಂತಿತು. ಹರಿಕವುತನು ತನ್ನ ಹೃದ ಯುಕ್ಕೆ ಒತ್ತಿಕೊಂಡಿದ್ದ ರವಕೆಯುನ್ನು ಕೂಡಲೆ ಕೆಳಗೆ ಬೀಳಿಸಿಬಿಟ್ಟನು. ತನ್ನ ಕಣ್ಣುಗಳನ್ನು ಬಿಟ್ಟುಬಿಟ್ಟು ತನ್ನ ವುುಂದೆಯೇ ಬಿರಬಿರನೆ ನೋಡ ಲಾರಂಭಿಸಿದನು.

'ಅವ್ಮುಯ್ಯ! ಹೇಗಾದರೂ ವೂಡಿ ಹೊತ್ತು ಏರುವಷ್ಟರೊಳಗೆ ವಾಪಸು ವುನೆಗೆ ಬಂದೆನು' ಎಂದು ರುಕ್ಮಿಣಿಯುು ಪ್ರಾರಂಭಿಸಿದಳು. 'ಸುವ್ಮುನೆ ನನ್ನನ್ನು ಕರಕೊಂಡು ಹೋದುದು. ನಾನು ಪದವಿನ ಹತ್ತಿ ರಕ್ಕೆ ವುುಟ್ಟುವಷ್ಟರೊಳಗೆ ಅವ್ಮು ಪೂರ್ಣ ಹುಶ್ಯಾರಾಗಿದ್ದರು. ಏನೋ ತಲೆತಿರುಗಿ ಬಿದ್ದರಂತೆ. ಬಹಳ ಸವುಯುದ ವರೆಗೆ ವೂತನಾಡಲಿಲ್ಲವಂತೆ. ಅಪ್ಪ ಗಾಬರಿಪಟ್ಟು ಅಣ್ಣನನ್ನು ಇಲ್ಲಿಗೆ ಕಳುಹಿಸಿದುದಂತೆ. ಅಲ್ಲೇ ನಿಲ್ಲ ಬೇಕೆಂದು ಬಹಳ ವತ್ತಾಯುವೂಡಿದರು. ಆದರೆ ನೀವು ಉಪವಾಸದಲ್ಲಿ ಬೀಳುವಿರಿ ಎಂದು ಹೆದರಿ ಬಂದೇಬಿಟ್ಟೆ......ಎವ್ಮುಯುನ್ನು ಕರೆ ದಿದ್ದೀರೋ ಇಲ್ಲವೋ?....'

ಹರಿಕವುತನ ಸಂಸಾರದ ದಿನಪಹಿಯು ಚಕ್ರಕ್ಕೆ ಬಿರಿ ಕಟ್ಟಿದ್ದುದು ಫಕ್ಕನೆ ಬಿಚ್ಚಿ ಹೋಯಿತು. ಅದು ವೆುಲ್ಲವೆುಲ್ಲನೆ ತಿರುಗಲಾರಂಭಿಸಿತು. ಬಿಡಾರದ ಬಲಗಡೆಯಿುಂದ 'ಸರಿಗ್ಗ ಗಗ್ಗನಿ ಪಪ್ಪವು ವುವ್ಮುಸ' ಎಂಬ ಆ ಉದ್ವೇಗದ ಸ್ವರವು ಪುನಃ ಕೇಳಲಾರಂಭಿಸಿತು. ಎಡಗಡೆಯು ಬಿಡಾರ ದಿಂದ ಕೊಳಲು ಕೂಗಲು ಪ್ರಾರಂಭಿಸಿತು. ಹಿಂದುಗಡೆಯಿುಂದ ಕೃಷ್ಣ ಪ್ಪನ ಗಾಯುನವು ವಾಯುುವುಂಡಲವನ್ನೆಲ್ಲ ಅಲ್ಲೋಲಕಲ್ಲೋಲ ವೂಡ ಲಿಕ್ಕೆ ಪ್ರಾರಂಭಿಸಿತು. ಹರಿಕವುತನ ಸಂಸಾರದ ದಿನವಹಿಯು ಚಕ್ರವು ಎಂದಿನಂತೆ ಸರಾಗವಾಗಿ ತಿರುಗಿತು. ಅವನು ತನ್ನ ವೋಚ್‌ನ್ನು ಹೊರಗೆ ತೆಗೆದು ನೋಡಿದನು. ೭॥ ಗಂಟೆಗೆ ೧೦ ವಿುನಿಟುಗಳಿದ್ದವು. ಕೂಡಲೇ ತನ್ನ ಟೊಪ್ಪಿಗೆಯುನ್ನೂ ಕೋಟನ್ನೂ ಹಾಕಿಕೊಂಡನು.

'ಈಗೆಲ್ಲಿ ಹೊರಡೋಣವೋ? ಗಂಟೆ ಏಳೂವರೆ ಆಯಿತು. ಇನ್ನು



„ ಅಮ್ಮಯ್ಯ! ಹೇಗಾದರೂ ಮಾಡಿ ಹೊತ್ತು ಮೀರುವಷ್ಟರೊಳಗೆ ವಾಪಸು ಮನೆಗೆ ಬಂದೆನು."

ಅರ್ಧಗಂಟೆಯೊಳಗೆ ಊಟ ಸಿದ್ಧವಾಗುವುದು. ಒಂದು ದಿನವಾದರೂ ಮನೆಯಲ್ಲಿ ಕೂತುಕೊಳ್ಳಬಾರದೇ?' ಎಂದು ರುಕ್ಮಿಣಿಯು ಸ್ವಲ್ಪ ತೀಕ್ಷ್ಣತೆಯಿಂದ ಕೇಳಿದಳು.

'ಇಲ್ಲ, ೭॥ ಗಂಟೆ ಆಗಲಿಲ್ಲ; ಇನ್ನೂ ೧೦ ನಿಮಿಷವುಂಟು. ಕ್ಲಬ್ಬಿಗೆ ಹೋಗೋಣವೋ ಎಂದು ಹೊರಟೆ. ಪೇಪರು ನೋಡದೆ ಸುಮಾರು ದಿನಗಳಾದವು. ಇಂದಾದರೂ ನೋಡಬೇಕು' ಎಂದು ಹೇಳುತ್ತಾ ಹರಿಕಮುತನು ಹೊರಗೆ ಹೋಗಿಯೇ ಬಿಟ್ಟನು. ಜಗುಲಿಯ ಮೆಟ್ಟಿಲಿನ ಮೇಲಿನಿಂದ, 'ಇನ್ನು ಅರ್ಧ ಗಂಟೆಯೊಳಗೆ ಬರುತ್ತೇನೆ' ಎಂದು ಹೇಳಿ ರುಕ್ಮಿಣಿಯ ಪ್ರತ್ಯುತ್ತರವು ತನ್ನ ಕಿವಿಗೆ ಬೀಳುವ ಮೊದಲೆ ಥಟ್ಟನೆ ಹೋಗಿ ಮಾರ್ಗವನ್ನು ಸೇರಿದನು.



## ಹರಿಕಮುತನ ನೆನಪು

ಹರಿಕಮುತನು ಕ್ಲಬ್ಬಿಗೆ ಬಾರದೆ ಇದ್ದುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಐದುವರೆ ಗಂಟೆ ಆಯಿತು. ಆರು ಆಯಿತು. ಆರುವರೆ ಆಯಿತು. ಆದರೂ ಹರಿಕಮುತನು ಇಲ್ಲ! ಅವನಿಲ್ಲದೆ ಬಿಝಿಕ್ ಆಟವು ಸಪ್ಪೆ. ಯಾವುದೋ ಒಂದು ಒಳ್ಳೆಯ ಮೇಲೋಗರಕ್ಕೆ ಏನೋ ಒಂದು ಕಡಿಮೆಯಾದಂತಾಗುವುದು. ಆದರೂ ಅಭ್ಯಾಸಬಲದಿಂದ ನಾನು ಆಡಲಿಕ್ಕೆ ಕೂತುಕೊಂಡೆನು. ಕ್ಷಣದಲ್ಲಿಯೇ ಆಟವಿದ್ದುದು ಕಾಟವಾಗಿ ಪರಿಣಮಿಸಿತು. ಏಕೆಂದರೆ ಹರಿಕಮುತನ ಆ ಕುಚೋದ್ಯದ ಮಾತುಗಳೆಲ್ಲಿ? ಮನೋಹರವಾದ ಸಂಗೀತವೆಲ್ಲಿ? ಮಾತುಮಾತಿಗೆ ರಭಸದಿಂದ ಹೊರಡುವ ಆ ಕವಿತೆಯೆಲ್ಲಿ? ಒಂದು ಕೈಯಿಂದ ಇಸ್ಪೀಟು ಎಲೆಗಳನ್ನು ಹಿಡಿದುಕೊಂಡು ಇನ್ನೊಂದು ಕೈಯಿಂದ ಬಿಸ್ಕೂಟು ಆಂಬೊಂಡೆಯನ್ನು ಬಾಯಲ್ಲಿ ತುರುಕಿಸಿ, ಆ ಕ್ಷಣವೇ ಒಂದು ಸಿಕ್ವೆನ್ಸಿನ ಸ್ಕೋರನ್ನು ಹಾಕಿ ಕೂಡಲೇ ಸಂಗೀತವನ್ನು ಹೊರಡಿಸುವ ಆ ಚಾತುರ್ಯವೆಲ್ಲಿ? ನಿಜವಾಗಿಯೂ ಅವನಿಲ್ಲದೆ ನನಗೆ ಬೇಸರ ಬಂತು. ಹೀಗಾಗಿ ಎದುರು ಪಾರ್ಟಿಯವರು ತುರುಪಿನ ಮೂರನೆಯ ಸಿಕ್ವೆನ್ಸನ್ನೂ ಐದನೆಯ ಬಿಝೀಕನ್ನೂ ಮೇಜಿನ ಮೇಲೆ ಹಾಕಿದ ಕೂಡಲೇ, ಕೊಠಡಿಯೊಳಗೆ ಆಗ ತಾನೇ ಪ್ರವೇಶಿಸಿದ ಕ್ಲಬ್ಬಿನ ಕಾಶ್ಮೀರನ ತಲೆಯ ಮೇಲೆ ನನ್ನ ಕೈಯಲ್ಲಿದ್ದ ಎಲೆಗಳನ್ನು ಗುರಿ ಇಟ್ಟು ಬಿಸಾಡಿ, ಕುರ್ಚಿಯಿಂದೆದ್ದು ಕ್ಲಬ್ಬಿನ ಹೊರಬಿದ್ದೆನು.

ನಾನು ಕ್ಲಬ್ಬಿನಿಂದ ಇಪ್ಪತ್ತೈದು ಹೆಜ್ಜೆಗಳನ್ನಿಟ್ಟಿದ್ದೇನೋ ಇಲ್ಲವೋ, ಹಿಂದುಸ್ಥಾನ ಸಿನೇಮಾದವರು ಹಂಪನಕಟ್ಟೆಯಲ್ಲಿ ಇಡುವ ಆ ಜಾಹೀರು–ಹಲಗೆಯ ಹತ್ತಿರ ಹರಿಕಮುತನು ನಿಂತಿರುವುದನ್ನು ಕಂಡೆನು. ನಾನು ಹರಿಕಮುತನನ್ನು ಕಂಡದ್ದೇನೋ ನಿಜವು. ಆದರೆ

ಹರಿಕಮುತನು ನನ್ನನ್ನು ಕಾಣಲಿಲ್ಲ. ನನ್ನನ್ನು ಕಾಣಲು ಅವನಿಗೆ ಆಸ್ಪದ ವಿರಲಿಲ್ಲ. ಆವನನ್ನು ಮುತ್ತಿಗೆ ಹಾಕಿ, 'ಕೂಲಿ ಬೇಕೋ, ಸ್ವಾಮೀ! ನಾನು ಬರುತ್ತೇನೆ, ಸ್ವಾಮೀ! ಎಲ್ಲಿಗೆ ಸ್ವಾಮೀ!' ಎಂದು ಅರಚು ತ್ತಿದ್ದ ಇಪ್ಪತ್ತೆರಡು ಮಂದಿ ಸಣ್ಣ ಪೋರರನ್ನು ದಿಕ್ಪಾಪಾಲಾಗಿ ಚದರಿಸುವ ಕೆಲಸದಲ್ಲಿ ಅವನು ಮಗ್ನನಾಗಿದ್ದನು. ನಾನು ಹತ್ತಿರ ಹೋದೆನು. ಇಂದು ಅವನು ವಿಶೇಷ 'ಶೊಪಿಂಗ್' ಮಾಡಿದಂತೆ ತೋರಿಬಂತು. ಅವನ ದೇಹವೆಲ್ಲ ಚಿಕ್ಕದೊಡ್ಡ ಗಂಟುಗಳಿಂದಲೂ ಕಾಗದದ ಕಟ್ಟುಗಳಿಂದಲೂ ಅಲಂಕರಿಸಲ್ಪಟ್ಟಿತ್ತು. ನಾನು ಹತ್ತಿರ ಹೋಗಿ ಅವನ ಬೆನ್ನನ್ನು ತಟ್ಟಿದೆನು. ಬೆನ್ನನ್ನು ತಟ್ಟಿ, 'ಇದೇನು, ಹರಿ, ನೀನಿಂದು ಕ್ಲಬ್ಬಿಗೆ ಬರಲಿಲ್ಲವೇಕೆ?' ಎಂದು ಕೇಳಿದೆನು.

'ಕ್ಲಬ್ಬಿಗೆ ಮಣ್ಣುಹಾಕ!.. ನಾನೊಂದು ಹೇಳುತ್ತೇನೆ. ನೀನು ಕೇಳುವುದು ಒಳ್ಳೇದು. ಇನ್ನು ನಿನಗೆ ನನ್ನ ಬೆನ್ನು ತಟ್ಟಬೇಕೆನಿಸುವಾಗ ಅದು ಕಬ್ಬಿಣದ್ದಲ್ಲವೆಂದು ನೆನಪಿರಲಿ!'

ಇಂದು ಏನೋ ಹರಿಕಮುತನ ಬಾಳ್ವೆಯಲ್ಲಿ ಮಸಾಲೆ ಬಂದಿರಬೇಕೆಂದು ಮನಸ್ಸಿನಲ್ಲಿಯೇ ತಿಳಿದುಕೊಂಡೆನು.

'ನಡೆದ ಸಂಗತಿಯೇನು? ಅಥವಾ ನಡೆಯುವ ಸಂಗತಿಯೇನು?' ಎಂದು ಪುನಃ ಪ್ರಶ್ನಿಸಿದೆನು.

'ಕಾಣುವುದಿಲ್ಲವೇ?'

'ಹೌದು, ಕಾಣುತ್ತದೆ. ನೀನು ಇಂದು ಇಡೀ ತೇರು–ಬೀದಿಯನ್ನು ಸುಲಿಗೆ ಮಾಡಿದಂತೆ ತೋರುತ್ತದೆ ಅಲ್ಲವೇ?' ಎಂದೆನು.

'ತೇರು-ಬೀದಿಯಲ್ಲ. ಇಡೀ ಮಂಗಳೂರನ್ನೇ ಸುಲಿಗೆ ಮಾಡಿದರೂ ನಾನೀಗ ಮರೆತು ಹಾಕಿದ ವಸ್ತುವು ನನ್ನ ಪಾಲಿಗೆ ಬರಲಿಕ್ಕಿಲ್ಲವೆಂದು ನಂಬುತ್ತೇನೆ.'

'ಏನಪ್ಪ ಅದು? ನಿನಗೆ ಹಾಗೆ ಮರೆತು ಹೋದ ವಸ್ತುವಾದರೂ ಏನು?' ಎಂದು ನಾನು ಸಹಜವಾಗಿ ಕೇಳಿದೆನು.

ನನ್ನದು ನಿರಪರಾಧವಾದ ಪ್ರಶ್ನೆ. ಆದರೂ ಹರಿಕಮುತನು ಅಷ್ಟೇಕೆ

ರೇಗಿಕೊಂಡನೆಂದು ನನಗೆ ಈಗಲೂ ತಿಳಿಯುವುದಿಲ್ಲ. ನಾಲ್ಕು ಮಾರ್ಗ ಗಳು ಕೂಡಿದಲ್ಲಿ (ಏಳು ಎಂದು ನಮ್ಮ ನೆನಪು—ಸಂಪಾದಕ 'ರಾ. ಬ.') ಸುಮ್ಮನೆ ಅವನ ಸಿಟ್ಟಿಗೆ ಈಡಾಗುವುದೇಕೆಂದು ಕೂಡಲೇ ನನ್ನ ಕಾಲಿಗೆ ಬುದ್ಧಿ ಹೇಳಿದೆನು. ಆದರೆ ಹರಿಕಮುತನು ಬಿಡಲಿಲ್ಲ. ನನ್ನನ್ನು ಕೂಗಿ ಕರೆ ದನು. ಉಪಾಯವಿಲ್ಲದೆ ನಾನು ಹಿಂತಿರುಗಿದೆನು.

ಹರಿಕಮುತನ ಸಿಟ್ಟು ತೀರಾ ಮಾಯವಾಗಿತ್ತು. ಅವನ ಮನಸ್ಸಿ ನಲ್ಲಿ ಯಾವುದೋ ಒಂದು ತರದ ವ್ಯಾಕುಲತೆಯು ಹಬ್ಬಿಕೊಂಡಿದ್ದಂತೆ ತೋರಿಬಂತು. ಅವನ ಮುಖವು ಬಾಲ ಹೋದ ನರಿಯ ಮುಖದಂತೆ ಬೆಪ್ಪಾಗಿದ್ದಿತು. ನನ್ನ ಗಡುಸಿನ ವರ್ತನೆಗೆ ನಾನೆ ಬೇಸರಪಟ್ಟೆನು.

'ನೋಡು, ರಮಾನಂದ,' ಎಂದು ಹರಿಕಮುತನು ನನ್ನ ಭುಜದ ಮೇಲೆ ಕೈಯಿಟ್ಟು ಪ್ರಾರಂಭಿಸಿದನು. 'ನಾನೊಂದು ಫಜೀತಿಯಲ್ಲಿ ಬಿದ್ದಿದ್ದೇನೆ. ಇಂದು ಬೆಳಿಗ್ಗೆ ನಾನು ಕಚೇರಿಗೆ ಹೋಗುವಾಗ್ಗೆ ನನ್ನ ರುಕ್ಮಿಣಿಯು ಕೆಲವು ಸಾಮಾನುಗಳನ್ನು ಮನೆಗೆ ಬರುವಾಗ ತರಲಿಕ್ಕೆ ಹೇಳಿದ್ದಳು. ಯಾವುದೋ ಒಂದನ್ನು ಮಾತ್ರ, ಎಷ್ಟು ಮಾತ್ರಕ್ಕೂ ಮರೆಯಬಾರದೆಂದು ಅವಳು ಇಪ್ಪತ್ತು ಸಾರಿ ಒತ್ತಿ ಹೇಳಿದ್ದಳು. ಅವಳು ಹಾಗೆ ಒತ್ತಿ ಹೇಳಿದ ವಸ್ತುವನ್ನೇ ಈಗ ಮರೆತಿರುವೆನು. ಮಾಡು ವುದೇನು?'

ನನಗೆ ನಗುವನ್ನು ತಡೆಯಲಿಕ್ಕಾಗಲಿಲ್ಲ. 'ಮಾಡುವುದೇನು, ಕ್ಲಬ್ಬಿಗೆ ಹೋಗಿ ಒಂದು ಆಟ ಬಿಝೀಕನ್ನು ಆಡುವುದು. ಬಾ ಹೋಗೋಣ. ಗಂಟೆ ಏಳೂ ಕಾಲು ಆಯಿತಷ್ಟೇ.' ಎಂದೆನು.

'ಛೆ, ಛೆ, ಅದಾಗದು. ಅವಳು ಅಷ್ಟು ಒತ್ತರದಿಂದ ತರಬೇಕೆಂದು ಹೇಳಿದ ವಸ್ತುವನ್ನು ತಾರದೆ ಇದ್ದರೆ. . ತಾರದೆ ಇದ್ದರೆ. .'

'ಮನೆಯಲ್ಲಿ ಅನ್ನ ಸಿಕ್ಕಲಿಕ್ಕಿಲ್ಲವೆಂದು ಹೆದರುತ್ತೀಯೋ? ಹಾಗಾ ದರೆ ನಮ್ಮಲ್ಲಿಗೆ ಬರಬಹುದಲ್ಲ!'

'ನೋಡು, ಇದು ತಮಾಷೆಯಲ್ಲ. ಆ ವಸ್ತುವನ್ನು ಈಗ ಹೇಗಾ ದರೂ ಮಾಡಿ ನೆನಪಿಗೆ ತರಬೇಕು. ಇಲ್ಲದಿದ್ದರೆ ನನಗಿಂದು ಮನೆಯಲ್ಲಿ ಫಜೀತಿ ಆಗಲಿಕ್ಕೆ ಉಂಟು.'

'ಫಜೀತಿ ಅಲ್ಲ, ಹುಚ್ಚ್ಚು, ನನ್ನ ಸುಶಿಯು ಹೇಳಿದ ಸಂಗತಿಗಳಲ್ಲಿ ನಾನು ಕ್ರಮವಾಗಿ ಶೇಕಡ ೯೯ರಂತೆ ಮರೆತು ಬಿಡುತ್ತೇನೆ. ನಾನು ಈವರೆಗೆ ಮರೆತುಬಿಟ್ಟು ಕಳಕೊಂಡ ಕೊಡೆಗಳನ್ನೆಲ್ಲ ಈಗ ಒಟ್ಟು ಕೂಡಿಸಿದರೆ ಒಂದು 'ಅಂಬ್ರೆಲ್ಲಾ ಮಾರ್ಟ'ನ್ನೇ ತೆರೆಯಬಹುದು.'

'ಅದೇನೂ ನನಗೆ ಗೊತ್ತಿಲ್ಲ. ಆ ವಸ್ತುವಿನ ನೆನಪಾಗುವವರೆಗೆ ನಾನು ಇಲ್ಲಿಂದ ಹೋಗುವಂತಿಲ್ಲ. ಇದು ನಿಶ್ಚಯ!'

'ಹಾಗಾದರೆ ನೀನು ಇಲ್ಲಿಯೇ ಇದ್ದು ಈ ಮಾರ್ಗದಲ್ಲಿ ಚಲಾವಣೆಯಾಗುವ ಮೋಟರ್ ಕಾರುಗಳ ಖಾನೆಶುಮಾರಿಯನ್ನು ತೆಗೆ, ನನಗೆ ಹೊತ್ತಾಗುತ್ತದೆ. ನಾನು ಮನೆಗೆ ಹೋಗುತ್ತೇನೆ.'

'ನಿಲ್ಲು, ರಮಾನಂದ. ನಾನು 'ಬ'ಕಾರದ ಅಕ್ಷರ ಮಾಲೆಯನ್ನು ಅನೇಕ ಸಾರಿ ಮನಸ್ಸಿನಲ್ಲಿಯೇ ತಿರುಗಿಸಿ ಆಯಿತು..'

'ಏನು? 'ಬ'ಕಾರದ ಅಕ್ಷರ ಮಾಲೆಯನ್ನು?'

ಹರಿಕಮಂತನ ಬುದ್ಧಿಸ್ಥಿರತೆಯ ವಿಷಯವಾಗಿ ನನಗೆ ಸ್ವಲ್ಪ ಸಂಶಯ ಉಂಟಾಗಲಿಕ್ಕೆ ಪ್ರಾರಂಭಿಸಿತು.

'ಹೌದು, 'ಬ'ಕಾರದ ಅಕ್ಷರಮಾಲೆಯನ್ನು. ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ..ಬೌ..'

'ಏನು? ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ.. ಬೌ?'

'ಹೌದು, ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ.. ಬೌ..ಬೌ..ಮತ್ತು ಭ ಭಾ ಭಿ ಭೀ ಭು ಭೂ ಭೆ ಭೇ ಭೈ ಭೊ ಭೋ ಭೌ..ಭೌ..'

ನನ್ನ ಸಂಶಯವು ಬಲವಾಯಿತು. ಹತ್ತರವಿದ್ದ ಯಾರೋ ಒಬ್ಬರು 'ನಾಯೋ!' ಎಂದರು. ಬೀಟಿನಲ್ಲಿದ್ದ ಪೋಲೀಸಿನವನು ನಮ್ಮತ್ತ ಕಡೆಗೆ ದೃಷ್ಟಿಸಿ ನೋಡಿದನು. ಹರಿಕಮಂತನ ಭುಜದ ಮೇಲೆ ಕನಿಕರದಿಂದ ನನ್ನ ಕೈಯನ್ನಿಟ್ಟು 'ನಾವು ಗಾರಡಿವಾಣಿಯನ್ನು ನಮ್ಮ ಮನೆಯೊಳಗೇನೇ ಕದವನ್ನು ಭದ್ರವಾಗಿ ಹಾಕಿ ಕಲಿಯೋಣ. ಇಲ್ಲಿ ಬೇಡ.' ಎಂದು ಸಾವಧಾನದಿಂದ ಹೇಳಿದೆನು.

' ಎಂತಹ ದಪ್ಪ ತಲೆ ನಿನ್ನದು, ರಮಾನಂದ! ನನಗೇನೂ ಹುಚ್ಚು ಗಿಚ್ಚು ತಗಲಿಲ್ಲ! ನನ್ನಾಕೆಯು ನಾನು ಮರೆಯಬಾರದೆಂದು ಹೇಳಿದ ಸಂಗತಿಯೋ ವಸ್ತುವೋ ಅನೇಕ 'ಬ'ಮಾಲೆಯ ಅಕ್ಷರಗಳಿಂದ ಕೂಡಿತ್ತು. ಅಂತಹ ಅಕ್ಷರದಿಂದ ಪ್ರಾರಂಭಿಸುವ ಶಬ್ದಗಳೇ ಅವುಗಳಾಗಿರಬೇಕೆಂದು ನನ್ನ ನೆನಪು. '

' ಅಷ್ಟೇಯೋ! ಕ್ಲಬ್ಬಿಗೆ ಹೋಗೋಣ. ಅಲ್ಲಿ ಕಿಟ್ಟೆಲ್ ಸಾಹೇಬರ ' ಡಿಕ್ಷನರಿ ' ಇರಬಹುದು '

' ಡಿಕ್ಷನರಿಯೂ ಬೇಡ, ಏಶೆ-ನರಿಯೂ ಬೇಡ. ನೀನು ಇಲ್ಲಿದ್ದಾಗಲೇ 'ಬ'ಮಾಲೆಯ ಅಕ್ಷರಗಳಿಂದ ಶುರು ಆಗುವ ಕೆಲವು ಶಬ್ದಗಳನ್ನು ಹೇಳಬಾರದೇ?'

' ಹಾಗೆ ಹೇಳಲಿಕ್ಕೆ ನಾನೊಬ್ಬ ಪಂಡಿತನೆಂದು ನೀನು ಭಾವಿಸಿದ್ದೀ ಎಂದು ಕಾಣುತ್ತೆ?' ಎಂದೆನು.

' ನನ್ನ ರುಕ್ಮಿಣಿಯು ಪಂಡಿತೆಯೇ? ಅವಳು ಹೇಳಿದ ಶಬ್ದಗಳು ಯಾವುವೆಂದು ಆಲೋಚಿಸಲಿಕ್ಕೆ ಪಂಡಿತನಾಗಬೇಕೆ? ನೋಡೋಣ, ಕೆಲವು ಶಬ್ದಗಳನ್ನು ಹೇಳಿಬಿಡು. ಫಕ್ಕನೆ ಅವಳು ಹೇಳಿದ ವಸ್ತುವಿನ ನೆನಪಾದೀತು.'

' ಇದು ಬರೇ ಹುಚ್ಚು. ಆದರೂ ಪ್ರಯತ್ನಿಸುತ್ತೇನೆ. '

' ಹೂಂ '

' ಬಡನೆ, ಬೆಲ್ಲ, ಬೇವು . .'

' ಅಲ್ಲ '

' ಬಟಾಟೆ, ಬಾಟ್ಲಿ, ಬೂಚು, ಬೆಂಕಿಪೆಟ್ಟಿಗೆ, ಬುರುಡೆ. .'

' ಅಲ್ಲ '

' ಬದಾಮು, ಮುಲಾಮು, ಸಲಾಮು . .'

' ಪ್ರಾಸು ಇದ್ದ ಶಬ್ದಗಳಲ್ಲ. 'ಬ'ಕಾರದಿಂದ ಶುರು ಆಗುವ ಶಬ್ದಗಳು. '

'ಒಹೊ, ಮರೆತೆ..ಬದಾಮುಹಲ್ವಾ, ಮೈಸೂರಪಾಕ್–ತಪ್ಪಿ ಬಿದ್ದೆ–ಬಾಳೆಕಾಯಿ, ಬಾಳೆಹಣ್ಣು, ಬಾಳೆ–ಎಲೆ..'

'ಅಲ್ಲ'

'ಬ್ರೆಡ್ಡು, ಬಿಸ್ಕೂಟು, ಭಾಜಿ, ಬೇರು, ಬೇಂಡೆಕಾಯಿ.... ಇನ್ನೇನಪ್ಪಾ..'

'ಹೂಂ, ಆಲೋಚಿಸು.'

'ಬೀಗ, ಬೀಜಾಗರ, ಬೂಕು, ಬಿಲ್ಲು, ಬೆಣ್ಣೆ..'

'ಅಲ್ಲ'

'ಬಂಗಾರ, ಬೆಳ್ಳಿ, ಬಳೆ, ಬಂಗಾರದ ಬಳೆ, ಬಟ್ಟಲು, ಬೆಳ್ಳಿಬಟ್ಟಲು, ಬಾರ್ಲಿ..'

'ಅಲ್ಲ'

'ಬಿಸಿಲು, ಬಿದಿರು, ಭಂಗಿ, ಭ್ರಾಂತಿ..'

'ತಡೆ, ತಡೆ, ತಡೆ! ಸ್ವಲ್ಪ ಆಲೋಚಿಸಿ ಹೇಳಬಾರದೇ?'

'ನನ್ನ ತಪ್ಪಲ್ಲ. ನನ್ನ ಶಬ್ದ ಭಂಡಾರವು ಬರಿದಾಗುತ್ತಾ ಬರುತ್ತದೆ.'

'ಇರಲಿ; ಸ್ವಲ್ಪ ಪ್ರಯತ್ನಮಾಡು.'

'ಬೆತ್ತ, ಬಾಚಣಿಗೆ..'

'ಭೇಷ್!'

'ಏನು, ನೆನಪಾಯಿತೇ?'

'ಅಲ್ಲ, ನಿನಗೆ ಸ್ವಲ್ಪ ವಿಚಾರ ಬಂದುದಕ್ಕೆ ಭೇಷ್ ಅಂದೆ–ಮುಂದ ರಿಸು!'

'ಬದುಕು, ಭೂಮಿ, ಬೈಲು ಬಿರುದು, ಬೆರಳು, ಬೆವರು....

'ಛಿ! ಛಿ!'

'ಬೋನು, ಬಟ್ಟೆ, ಬೇಲಿ, ಭೂತ, ಭ್ರಮೆ, ಬಾಧೆ ಬೆರಗು..'

'ನಿಲ್ಲು, ನಿಲ್ಲು! ಸುಮ್ಮನೆ ಕಂಡಾಬಟ್ಟೆ ಶಬ್ದಗಳನ್ನು ಬೊಗಳ ಬೇಡ.'

'ಮತ್ತೇನು ಮಾಡುವುದು? ನೆನಪಿಗೆ ಬಂದ ಶಬ್ದಗಳನ್ನೆಲ್ಲ

ಹೇಳುವ ಕೆಲಸವನ್ನು ನಾನು ಮಾಡುತ್ತೇನೆ. ಅವುಗಳನ್ನು ಹೆಕ್ಕಿ ತೆಗೆಯುವ ಕೆಲಸವು ನಿನ್ನದು.'

'ಆಗಲಿ, ಬೇರೆ ಉಪಾಯವಿಲ್ಲ.'

'ಹಾಗಾದರೆ ಕೇಳು—ಬೀಡು, ಬಿರಿ, ಬದಲಿ, ಬಾವಲಿ, ಬೊಂಬೆ, ಬೈಗಳು..'

'ಪ್ರಾರಂಭಿಸಬೇಕೆಂದು ಕಾಣುತ್ತದೆ!'

'ಬ್ರೈಡು, ಬ್ರೋಚು, ಬ್ರಶ್ಶು, ಬಟ್ಟನ್ಸ್ಸು..ಭಸ್ಮ, ಬೂದಿ, ಬಡಾಯಿ, ಬೀಡಿ, ಬ್ರೆಂಡಿ, ಬೊಬ್ಬೆ..'

'ಅಬದ್ಧ!'

'ಬಯಕೆ, ಬಯಕೆ—ಕೂಳು, ಬಿಲ್ಲು, ಬಾಣ, ಭಾಷಣ, ಭಾಗ್ಯ, ಬೈರಾಗಿ, ಭಾದ್ರಪದ..'

'ಹುಚ್ಚು!'

'ಬೂಟ್ಸ್ಸು, ಬ್ಲೋಟಿಂಗು, ಬ್ಲೆಂಕೆಟ್ಟು, ಬೈಂಡು, ಬೇಂಕು, ಬೋನಸ್ಸು, ಬಿಝೀಕು..ಬೈಬಲ್ಲು, ಬೋಲ್ಟು, ಬೊಂಡು, ಬೊಂಬು, ಬೋರ್ಡರ್, ಬೊಯ್ಲರು.'

'ಅಲ್ಲ, ಅಲ್ಲ, ಅಲ್ಲ!'

'ಬೆರೊಮಿಟರು, ಥರ್ಮೊಮಿಟರು—ಪುನಃ ತಪ್ಪಿ ಬಿದ್ದೆ, ಆಲೋಚಿಸುತ್ತೇನೆ, ಸ್ವಲ್ಪ ತಾಳು. ಬ್ರೆಡ್ಡು, ಬಿಸ್ಕೂಟು..'

'ಅದೊಮ್ಮೆ ಆಗಿದೆ'

'ಬಿಸ್ಕೂಟು ಒಮ್ಮೆ ಆದರೆ, ಇಗೊ, ಬಿಸ್ಕೂಟು ರೊಟ್ಟಿ, ಬಿಸ್ಕೂಟು ಅಂಬೊಡೆ, ಬೋಂಡಾ ಆಗಲಿಲ್ಲ.'

'ಅದಲ್ಲ'

'ಹಾಗಾದರೆ, ಬಂಡಿ, ಬಾಡಿಗೆ, ಬಲೆ, ಬಂಡೆಕಲ್ಲು, ಬೇಸಾಯ, ಬೇಸರ..'

'ಬರಲಿಕ್ಕೆ ಪ್ರಾರಂಭವಾಯಿತು. ಆದರೂ..ಹೂಂ, ಮುಂದರಿಸು.'

'ಬಾಸ್ಕೇಟು, ಬೆಃಕು, ಬೆಳೆ, ಬೊಗರಿ, ಬಿಗೀಲು, ಬೇಟು, ಬೇಟಿ

ನಾಯಿ, ಬೆಕ್ಕು, ಬಾತುಕೋಳಿ, ಬೆಕ್ಕಿನ ಬರಿ..ಬಂದರು, ಬಂಧು ಬಾತ್ಮಿ—ಥೆ, ಥೆ, ಅದಲ್ಲ. ಬೀಗರು, ಭೇರಿ, ಬೆಟ್ಟ, ಬೀಸೋಕಲ್ಲು—ಏನು, ಇನ್ನೂ ನೆನಪಾಗಲಿಲ್ಲವೇ? ಹೋಗಲಿ ಬಾಗೇಸರ, ಬಿಲಹರಿ, ಬೇಹಾಗ—ತಪ್ಪಾಯಿತು. ಕ್ಷಮಿಸು—ಬಸ್ಸು ಬೋಟಾರು, ಬೆಂಚು, ಬೇಚು, ಬಂಚ, ಬೆನ್ನಿಲು, ಬೇಣ, ಬೇಣದ ಒತ್ತಿ..'

'ಏನು, ಏನು? ಗ್ರೀಕ ಭಾಷೆಯ ಶಬ್ದಗಳೋ?

'ನನಗೆ ಗೊತ್ತಿಲ್ಲ. ಇಲ್ಲಿ ತಂಗಾಳಿಗೆ ನಿಂತು ಮೂಗು ಕಟ್ಟಿ ಹೋಗಿದೆ. ನಾಲಿಗೆಯು ದಣಿದು ಸರಿಯಾಗಿ ತಿರುಗುವದೇ ಇಲ್ಲ. ಇಷ್ಟು ರಾಶಿ ಶಬ್ದಗಳನ್ನು ಹೇಳಿದರೂ ನಿನಗೆ ನೆನಪಾಗಲಿಲ್ಲವೇ? ನೀನು ಬೇಕಾದ ದ್ದನ್ನು ಮಾಡು. ನನಗೆ ಬೇಸರ ಬಂತು. ಸಾಕಷ್ಟು ಹುಚ್ಚನಾಗಿ ವರ್ತಿ ಸಿದೆ. ಇನ್ನು ಹೆಚ್ಚು ಬೇಡ. ಹೊತ್ತಾಯಿತು. ನಾನಿನ್ನು ಹೋಗು ತ್ತೇನೆ.' ಎಂದು ಹೇಳಿ ಮನೆಗೆಂದು ಹೋಗಲಿಕ್ಕೆ ಹೆಜ್ಜೆಯಿಟ್ಟೆನು.

ಆದರೆ ಹರಿಕಮಂತನು ಪುನಃ ಬಿಡಲಿಲ್ಲ. ಹೋಗಲಿಕ್ಕೆ ಸಿದ್ಧನಾದ ನನ್ನನ್ನು ಎಳೆದನು. ನಾನು ಅವನಿಂದ ಬಿಡಿಸಿಕೊಳ್ಳಲಿಕ್ಕೆ ಪ್ರಯತ್ನಿಸಿ ದೆನು. ನಮ್ಮ ಹೋರಾಟದಲ್ಲಿ ನನ್ನ ಕಾಲು ಹಿಂದುಸ್ಥಾನ ಸಿನೇಮಾ ದವರ ಜಾಹೀರು-ಹಲಗೆಗೆ ತಾಗಿ ಹಲಗೆಯು ಧೊಪ್ಪನೆ ಕೆಳಗೆ ಬಿತ್ತು. ಹರಿಕಮಂತನೂ ನನ್ನ ಕೈಯನ್ನು ಬಿಟ್ಟನು. ನಾನು ಬಗ್ಗಿ ಹಲಗೆಯನ್ನು ಸರಿಯಾಗಿ ಇಡುವಾಗ ಅದರಲ್ಲಿ ಬರೆದಿದ್ದುದನ್ನು ನೋಡಿದೆನು. '**ಬಣ್ಣದ ಬೀಸಣಿಗೆ**' ಎಂದು ಗಟ್ಟಿಯಾಗಿ ಓದಿದೆನು.

ಇದನ್ನು ಕೇಳುತ್ತಲೇ ಹರಿಕಮಂತನು ಒಂದು ದೊಡ್ಡ ಅರಚನ್ನು ಹಾಕಿದನು.

'ಇಂದೇನು ನಿನಗೆ ಹಿಡಿದ ಹುಚ್ಚು?' ಎಂದು ಕೇಳಿದೆನು.

'ಹೌದು, ಹುಚ್ಚು. ರುಕ್ಮಿಣಿಯು ಹೇಳಿದ ವಿಷಯವು ಈಗ ನನ್ನ ನೆನಪಿಗೆ ಬಂತು, **ಬಣ್ಣದ ಬೀಸಣಿಗೆ!**'

'ಏನು, ಬಣ್ಣದ ಬೀಸಣಿಗೆಯನ್ನು ತರಬೇಕೆಂದು ಹೇಳಿದ್ದಳೇ?' ಎಂದು ಕೇಳಿದೆನು.



5 “ಹರಿಕಮುತನು ಒಂದು ದೊಡ್ಡ ಅರಚನ್ನು ಹಾಕಿದನು.”

'ಅಲ್ಲಪ್ಪ! ಇಂದು ಸಿನೇಮದಲ್ಲಿ '**ಬಣ್ಣದ ಬೀಸಣಿಗೆ**' ಎಂಬ ಫಿಲ್ಮಿನ ಕಡೆಯ ದಿನವಂತೆ. ಅದನ್ನು ನೋಡಲಿಕ್ಕೆ ಹೋಗಬೇಕೆಂದು ರುಕ್ಮಿಣಿಯು ಒತ್ತಾಯಪಡಿಸಿದ್ದಳು. ಆದುದರಿಂದಲೇ ಇಂದು ಬೇಗ ಮನೆಗೆ ಬರಲಿಕ್ಕೆ ಮರೆಯಬಾರದೆಂದು ಹೇಳಿದ್ದಳು...ಈಗ ಮಾತಾಡಿ ಪ್ರಯೋಜನವೇನು? ನಾನು ಹುಚ್ಚನಂತೆ ಸುಮ್ಮನೆ ನಿನ್ನ ಹಾಳುಹರಟೆ ಯನ್ನು ಕೇಳುವುದರಲ್ಲೇ ಸಮಯವನ್ನು ಕಳೆದೆನು.!..'

ಇದು ನನ್ನ ಜೀವಿತದ ಹಣೆಬರಹ. ಏನು ಮಾಡಲಿಕ್ಕಾದ್ದೀತು? ಕೃತಜ್ಞತೆ ಎಂದರೇನೆಂದು ನಾನು ಸಹಾಯಮಾಡಿದವರಿಗೆ ಸಾಧಾರಣ ವಾಗಿ ಗೊತ್ತೇ ಇರುವುದಿಲ್ಲ.

ಹರಿಕಮತನು ತನ್ನ ವೋಚನ್ನು ಹೊರತೆಗೆದು ಸಮಯವನ್ನು ನೋಡಿದನು. 'ಎಂಟುಗಂಟೆಯಾಗಿ ಐದು ಮಿನಿಟುಗಳಾದುವು' ಎಂದು ಕ್ಷೀಣ ಸ್ವರದಿಂದ ಹೇಳಿದನು. ಹಿಂದುಸ್ಥಾನ ಸಿನೇಮಾದಲ್ಲಿ '**ಬಣ್ಣದ ಬೀಸಣಿಗೆ**'ಯ ಕೊನೆಯ ಪ್ರದರ್ಶನವು ಪ್ರಾರಂಭವಾಗಿ ೩೫ ಮಿನಿಟು ಗಳಾಗಿದ್ದುವು.



# ಶ್ರೀನಿವಾಸನ ಅಕೃತ್ಯ ೦೦ ೦೦ ೦೦ ೦೦

ನಾನು ಶ್ರೀನಿವಾಸನು ಮಾಡಿದುದನ್ನು ಅನುಮೋದಿಸುವುದಿಲ್ಲ. ಅವನ ಕಡೆಯಿಂದ ವಕಾಲತನ್ನೂ ನಡೆಯಿಸುವುದಿಲ್ಲ. ಆದರೆ ಅವನ ಅಕೃತ್ಯದ ಕಪ್ಪಾದ ಛಾಯೆಯನ್ನು ಸ್ವಲ್ಪ ಮಟ್ಟಿಗಾದರೂ ಬಿಳುಪೇರಿಸು ವಂತೆ ಕೆಲವು ವಿದ್ಯಮಾನಗಳಿದ್ದುವು ಎಂದು ಸೂಚಿಸುವುದೇ ನನ್ನ ಈಗಿನ ಕೃತ್ಯವು.

ನಾನೊಬ್ಬ ಚರಿತ್ರಕಾರನು; ಕತೆಗಾರನಲ್ಲ. ಆದುದರಿಂದ ನೀವು ಇದರಲ್ಲಿ ಪ್ರಾತಃಕಾಲದ ವರ್ಣನೆಯನ್ನಾಗಲಿ ಸೂರ್ಯಾಸ್ತದ ಬಣ್ಣನೆ ಯನ್ನಾಗಲಿ ಕಾಣಲಾರಿರಿ. ನನ್ನ ಮಾತುಗಳನ್ನು ಹೇಳುವುದರಲ್ಲಿ ಆವೇ ಶವು ಏರಿದಂತೆ ಪ್ರತಿ ಒಂದು ವಾಕ್ಯದ ಅಂತ್ಯಕ್ಕೂ ಆವೇಶೋದ್ಗಾರ ಚಿಹ್ನೆ ಗಳು (!) ಒಂದರಿಂದ ಹತ್ತರ ವರೆಗೆ ಏರುವುದನ್ನೂ ನೀವು ಇದರಲ್ಲಿ ಕಾಣಲಾರಿರಿ. ಮತ್ತು ಇದನ್ನು ಓದುವಾಗ ನೀವು ತೂಕಡಿಸಿ ನಿದ್ರೆ ಹೋಗದಂತೆ ಆಗಾಗ್ಗೆ 'ಪಾಠಕ ಮಹಾಶಯ!' 'ಪಾಠಕ ಮಹಾಶಯ!' ಎಂದು ಸಂಬೋಧಿಸಿ ನಿಮ್ಮನ್ನು ಎಚ್ಚರಗೊಳಿಸುವ ಸಂಪ್ರದಾಯವೂ ನನ್ನಲ್ಲಿಲ್ಲ. ಇದನ್ನೆಲ್ಲ ನಿಮಗೆ ಮೊದಲೇ ತಿಳಿಸುವುದು ಒಳ್ಳೆಯದು. ಮತ್ತೆ ನೀವು ನನ್ನನ್ನು ದೂರಬಾರದು.

ಶ್ರೀನಿವಾಸನು ನನ್ನ ಚರಿತ್ರಾಕಾಶದಲ್ಲಿ ತೇಲಿಬರುವಾಗ ಅವನಿಗೆ ೧೯ ವರ್ಷ ಪ್ರಾಯ. ಇಂಟರ್‌ಮೀಡಿಯೇಟ್ ಪರೀಕ್ಷೆಯನ್ನು (ನಮ್ಮ ಬರಹಗಾರರು ಬರೆಯುವಂತೆ) ಪ್ಯಾಸು ಮಾಡಿ ಮಂಗಳೂರಿನ ಗುಡ್ಡದ ಮೇಲಿರುವ ಕೊಲೇಜಿನಲ್ಲಿ ಬಿ. ಎ. ತರಗತಿಗೆ ಸೇರಬೇಕೆಂದು ಅವನು ಬಹಳವಾಗಿ ಹವಣಿಸಿದನು. ಆದರೆ ಅವನು ಒಂದೆಣಿಸಿದರೆ ಅವನ ಚಿಕ್ಕ

ತಂದೆಯಾದ ದೇವರಾಯನು ಮತ್ತೊಂದೆಣಿಸಿದನು. ದೇವರಾಯನು ಶ್ರೀನಿವಾಸನನ್ನು ಚಿಕ್ಕಂದಿನಿಂದ ಸಾಕಿ ಸಲಹಿದವನು. ಅವನನ್ನು ಎಸ್. ಎಸ್. ಎಲ್. ಸಿ. ವರೆಗೆ ಸಂಬಳಕೊಟ್ಟು ಕಲಿಸಿದವನು. ಶ್ರೀನಿವಾಸನು ಎಸ್. ಎಸ್. ಎಲ್. ಸೀ. ಪರೀಕ್ಷೆ ಪಾಸಾದರೆ ಯಥೇಷ್ಟವಾಯಿತೆಂದು ಅವನು ತಿಳಿದುಕೊಂಡಿದ್ದನು. ಆದರೆ ಶ್ರೀನಿವಾಸನಿಗೆ ಇಂಟರ್‌ಮಿಾಡಿಯೇಟ್ ಕಲಿಯಲಿಕ್ಕೆ ಒಂದು ವಿದ್ಯಾರ್ಥಿವೇತನ ದೊರೆತಿದ್ದುದರಿಂದ ಹೇಗೂ ಮುಂದೆ ಕಲಿಯಬೇಕೆಂಬ ಅವನ ಪಂಥವು ಮೇಲಕ್ಕೇರಿತು.

ಶ್ರೀನಿವಾಸನು ಯಥಾನುಸಮಯದಲ್ಲಿ ಇಂಟರ್‌ಮಿಾಡಿಯೇಟನ್ನೂ 'ಪ್ಯಾಸು' ಮಾಡಿದನು—ಆ ಮೇಲೆ? ಆ ಮೇಲೆ ಅವನಿಗೆ ಬಿ. ಎ. ಕಲಿಯಲಿಕ್ಕೆ ವೇತನವೇನೂ ಸಿಕ್ಕಲಿಲ್ಲ. ಅವನ ವಿಷಯದಲ್ಲಿ ಗಂಟು ಬಿಚ್ಚಲಿಕ್ಕೆ ದೇವರಾಯನು ಇಷ್ಟರ ವರೆಗೆ ದಾಕ್ಷಿಣ್ಯ ಮಾಡಿದ್ದಿಲ್ಲವಾದರೂ ಅವನಿಗೆ ಬಿ. ಎ. ಕಲಿಸಲಿಕ್ಕೆ ಮಾತ್ರ ತನ್ನಿಂದಾಗದು ಎಂದು ಹೇಳಿಯೇ ಬಿಟ್ಟನು. ಶ್ರೀನಿವಾಸನ ಮೇಲೆ ಅವನಿಗೆ ವಾತ್ಸಲ್ಯವಿರಲಿಲ್ಲವೆಂದಲ್ಲ. ಈಗಿನ ಕಾಲದಲ್ಲಿ ಹುಡುಗರು ಬಿ. ಎ., ಎಮ್. ಎ. ಕಲಿತು ಏನೂ ಪ್ರಯೋಜನವಿಲ್ಲ; ಎಸ್. ಎಸ್. ಎಲ್. ಸೀ. ವರೆಗೆ ಕಲಿತರೆ ಭಾರ ಇಳಿಯಿತು; ಅವರು ಯಾವುದಾದರೊಂದು 'ಕಮುರ್ಶಿಯಲ್ ಲೈನಿಗೆ' ಸೇರುವುದೇ ಒಳ್ಳೆಯದು, ಎಂಬುದೇ ಅವನ ಅಭಿಪ್ರಾಯವಾಗಿತ್ತು. ಹೀಗಾಗಿ ಶ್ರೀನಿವಾಸನು ಇಂಟರ್‌ಮಿಾಡಿಯೇಟ್ 'ಪ್ಯಾಸು' ಮಾಡಿದ ಕೂಡಲೇ ದೇವರಾಯನು ಮುಂಬಯಿಯಲ್ಲಿರುವ ತನ್ನ ಸ್ನೇಹಿತರಿಗೆಲ್ಲ, ಶ್ರೀನಿವಾಸನಿಗೆ ಯಾವುದಾದರೊಂದು 'ಕಮುರ್ಶಿಯಲ್ ಲೈನಿನಲ್ಲಿ' ಒಂದು ಕೆಲಸವನ್ನು ಮಾಡಿಕೊಡಿಸುವಂತೆ ಬರೆದನು. ಎರಡು ತಿಂಗಳು ಕಳೆದ ಅನಂತರ ಮುಂಬಯಿಯ 'ಬುಯಿಟ್ನೀ ಕುಯಿಟ್ನೀ' ಕಂಪನಿಯಲ್ಲಿ ಒಂದು ೬೦ ರೂಪಾಯಿಯ ಕೆಲಸವು ಖಾಲೀ ಉಂಟೆಂತಲೂ, ಅದನ್ನು ಶ್ರೀನಿವಾಸನಿಗೆ ಮಾಡಿಕೊಡಿಸುತ್ತೇನೆಂತಲೂ ಒಬ್ಬ ಸ್ನೇಹಿತನು ಬರೆದೂಬಿಟ್ಟನು.

ಏನೂ ಕೆಲಸವಿಲ್ಲದೆ ತ್ರಿಶಂಕುಸ್ವರ್ಗದಲ್ಲಿ ನೇತಾಡುತ್ತಿದ್ದಾಗ ಮುಂಬಯಿಯಲ್ಲಾಗಲಿ ಅಥವಾ ಕೆಂಬೋಡಿಯದಲ್ಲಾಗಲಿ ಒಂದು ೬೦

ರೂಪಾಯಿಯ ಕೆಲಸವುಂಟೆಂದರೆ—ಅದು 'ಬುಯಿಟ್ಸೀ ಕುಯಿಟ್ಸೀ' ಕಂಪನಿಯಲ್ಲಾಗಲಿ ಅಥವಾ 'ಕುಯಿಟ್ಸೀ ಬುಯಿಟ್ಸೀ' ಕಂಪನಿಯಲ್ಲಾಗಲಿ—ನಾನಾದರೊ ಇನ್ನೊಂದು ಮಾತೆತ್ತದೆ ಬಿಲ್ಲಿನಿಂದೆಸೆದ ಬಾಣದಂತೆ ಹೋಗಿ ಆ ಕೆಲಸಕ್ಕೆ ಸೇರುತ್ತಿದ್ದೆನು. ಆದರೆ ಶ್ರೀನಿವಾಸನು ನನ್ನಂತೆ ದುಡುಕುವಂಥವನಲ್ಲ. ಆವನು ಮುಂಬಯಿಯ ಕೆಲಸಗಳ ವಿಷಯ ತನ್ನ ಸ್ನೇಹಿತರಿಂದ ತುಂಬಾ ತಿಳಿದುಕೊಂಡಿದ್ದನು. ಅದಲ್ಲದೆ ಅವನ ಚಿಕ್ಕದಾದ ತಲೆಯಲ್ಲಿ ದೊಡ್ಡದಾದೊಂದು ಆಲೋಚನೆಯು ಅನೇಕ ವರ್ಷಗಳಿಂದ ಮೆಲ್ಲಮೆಲ್ಲಗೆ ಪ್ರಬಲಗೊಳ್ಳುತ್ತಾ ಬಂದಿತ್ತು. ಇದು ಮೊದಲು ಮೊದಲು (ನಮ್ಮ ದಾಸರ ಮಾತಿನಲ್ಲಿ ಹೇಳುವುದಾದರೆ) ಬೀಜರೂಪವಾಗಿ, ಕ್ರಮೇಣ ಅಂಕುರವಾಗಿ, ಪಲ್ಲವಿಸಿ, ತಳಿರಿ, ಎಲೆಯಾಗಿ, ಈ ಚರಿತ್ರೆಯ ಪ್ರಾರಂಭಕ್ಕೆ ಹೂವಾಗಿ, ಕಾಯಾಗಿ, ಹಣ್ಣಾಗಲಿಕ್ಕೆಮಾತ್ರ ಬಾಕಿ ಇತ್ತು. ಈ ಆಲೋಚನೆ ಏನೆಂದು ನಿಮಗೆ ಸ್ವಲ್ಪ ವಿಸ್ತರಿಸಿ ಹೇಳಬೇಕಾಗಿದೆಯಾದರೂ ಅದನ್ನು ನಿಮಗೆ ಬೇಸರಬಾರದಂತೆ ಬರೇ ಒಂದೆರಡುಮಾತುಗಳಲ್ಲಿ ಹೇಳಿಬಿಡುವೆನು.

ಶ್ರೀನಿವಾಸನು ತನ್ನ ಪ್ರಾಯದ ಇತರ ಹುಡುಗರಂತಿರಲಿಲ್ಲ. ಅವನಿಗೆ ಕನ್ನಡ ವಾಙ್ಮಯದಲ್ಲಿ ವಿಶೇಷ ಆಸಕ್ತಿಯಿತ್ತು; ವಾತ್ಸಲ್ಯವಿತ್ತು. ಈ ವಾತ್ಸಲ್ಯವು ಸಾಧಾರಣ ಅವನ ಹನ್ನೆರಡನೆಯ ವಯಸ್ಸಿನಲ್ಲೇ ತಲೆದೋರಿ, ಕ್ರಮೇಣ ಚಿಕ್ಕ ಕವಿತೆಗಳಾಗಿಯೂ, ಪುಟ್ಟ ಉಪನ್ಯಾಸಗಳಾಗಿಯೂ, ಸಣ್ಣ ಕತೆಗಳಾಗಿಯೂ ಪರಿಣಮಿಸಿತು. ಅವನು ಹೈಸ್ಕೂಲು ತರಗತಿಗಳಲ್ಲಿರುವಾಗ್ಗೆ ಅವನ ಸಂಪಾದಕತ್ವದಲ್ಲಿ ಹೊರಡುತ್ತಿದ್ದ ಕೈಬರಹದ 'ಗಜಕೇಸರಿ'ಯಲ್ಲಿ ಇದೇ ವಾತ್ಸಲ್ಯದ ಪ್ರಕಾಶವು ತುಂಬಾ ಬೀರಿಕೊಂಡಿತ್ತು. ಮದರಾಸು ವಿಶ್ವವಿದ್ಯಾಲಯದ ಒಂದು 'ಡಿಗ್ರಿ'ಯನ್ನು ಪಡೆದು ಆ ಮೇಲೆ ಕನ್ನಡ ಭಾಷೆಯ ಮೇಲೆ ತನಗಿರುವ ಈ ವಾತ್ಸಲ್ಯವನ್ನು ಯೋಗ್ಯ ರೀತಿಯಲ್ಲಿ ಕಾರ್ಯರೂಪಕ್ಕೆ ತರುವುದರಲ್ಲಿಯೇ ತನ್ನ ಜೀವಮಾನವನ್ನು ಕಳೆಯಬೇಕೆಂದು ಅವನು ನಿಶ್ಚಯಿಸಿದ್ದನು.

ಹೀಗಿರುವಾಗ ಶ್ರೀನಿವಾಸನು ಆ ಮುಂಬಯಿಯ ೬೦ ರೂಪಾಯಿಯ ಕೆಲಸಕ್ಕೆ ಒಡಂಬಡದೆ ಇದ್ದುದರಲ್ಲಿ ಆಶ್ಚರ್ಯವೇನು? ತನ್ನ ಸಿರಿಗನ್ನಡದ ಸವಿಯು ಆ ಮರಾಠಿಯ ಗೊಂದಲದಲ್ಲಿ ಸಿಲುಕಿಕೊಂಡು ಕಹಿಯಾಗಿ ಬೀಳಬಹುದೆಂಬ ಭಯವೇ ಅವನನ್ನು ಆವರಿಸಿಕೊಂಡಿತ್ತು. ಆದರೆ ಅಂದಿನಿಂದ ಅವನಿಗೂ ಅವನ ಚಿಕ್ಕ ತಂದೆಯಾದ ದೇವರಾಯನಿಗೂ ರಣಾಗ್ರಕ್ಕೆ ಪ್ರಾರಂಭವಾಯಿತು. ಶ್ರೀನಿವಾಸನು ತನ್ನ ಜೀವದ ಲಾಲಸೆಯ ಮಾತನ್ನೆತ್ತುವುದೇ ತಡ, ದೇವರಾಯನು 'ಸಿರಿಗನ್ನಡವಲ್ಲ, ಕರಿಕನ್ನಡ–ಹಾಳು ಹರಟೆ, ಸುಮ್ಮನಿರು!' ಎಂದು ಬೊಗಳುತ್ತಿದ್ದನು. ಹೀಗೆಯೇ ಒಂದು ತಿಂಗಳಪರ್ಯಂತವೂ ಅವರಿಬ್ಬರೊಳಗೆ ಈ ಸಮರವು ಸಾಕಷ್ಟು ನಡೆಯಿತು. ಆದರೂ ವಿಜಯದೇವತೆಯು ವಿಜಯಮಾಲೆಯನ್ನು ತನ್ನ ಕೈಯೊಳಗೇ ಇಟ್ಟುಕೊಂಡಳು; ಕಟ್ಟಕಡೆಗೆ ಬೇಸತ್ತು ಅಲ್ಲಿಂದ ಪಲಾಯನ ಮಾಡಿದಳು. ದೇವರಾಯನೂ ಬೇಸತ್ತು ಶ್ರೀನಿವಾಸನಿಗೆ 'ನಿನ್ನ ದಾರಿಯನ್ನು ನೀನು ಹಿಡಿ' ಎಂದನು. ಶ್ರೀನಿವಾಸನೂ ಬೇಸತ್ತು ತನ್ನ ಚಿಕ್ಕ ತಂದೆಯ ಮಾತಿನಂತೆ ತನ್ನ ದಾರಿಯನ್ನು ಹಿಡಿದನು. ಇಲ್ಲಿಗೆ ಅವನ ಚರಿತ್ರೆಯ ಮೊದಲನೆ ಅಧ್ಯಾಯವು ಮುಗಿಯಿತು.

ಅವನ ಚರಿತ್ರೆಯ ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ನೀವು ಅವನನ್ನು, ಬಾಳೂರು ಶಾಲೆಯಲ್ಲಿ ಒಂದನೆಯ ಸಹಾಯಕ ಉಪಾಧ್ಯಾಯನಾಗಿ ಹುಡುಗರ ಮಂದೆಗಳನ್ನು ಮೇಯಿಸುವುದನ್ನು ಕಾಣಬಹುದು. ಇದರಿಂದ ಬಿ. ಎ. ಕಲಿಯಬೇಕೆಂಬ ಅವನ ಆಶೆಯು ಮತ್ತಷ್ಟು ದೂರವಾಯಿತು ಎಂದು ನೀವು ತಿಳಿದುಕೊಳ್ಳಬಹುದು. ಆದರೇನು? ಈ ಲೋಕದಲ್ಲಿ ನಮ್ಮ ಎಲ್ಲ ಆಶೆಗಳು ಕೈಗೂಡುವುವಾದರೆ ಇದೊಂದು ಸ್ವರ್ಗಲೋಕವೆಂದೇ ನಾವು ತಿಳಿದುಕೊಳ್ಳಬೇಕಾಗುವುದು. ಸುಖವೆಂಬುದು ನಮ್ಮ ಎಲ್ಲ ಆಶೆಗಳು ಕೈಗೂಡುವುದರಲ್ಲಿಲ್ಲ. ನಮ್ಮ ಕೈಲಾಗದ ಆಶೆಗಳು ನಮ್ಮ ಮನಸ್ಸಿನ ತಕ್ಕಡಿಯನ್ನು ಒಂದು ಕಡೆಗೆ ಬಲವಾಗಿ ಕೆಳಗೆ ಎಳೆದರೆ ತಕ್ಕಡಿಯನ್ನು ಪುನಃ ಸರಿಗೊಳಿಸುವಂತೆ ಅದರ ಇನ್ನೊಂದು ಕಡೆಯಲ್ಲಿ ಕೈಗೂಡುವ ಆಶೆಗಳ ಸಾಕಷ್ಟು ದೊಡ್ಡ

ಸಮೂಹವಿರುವುದೇ ಈ ಲೋಕದಲ್ಲಿ ಸುಖವೆನಿಸುವುದು. ಸಂಸಾರದಲ್ಲಿ ಇದಕ್ಕಿಂತಲೂ ಹೆಚ್ಚು ಆಶಿಸುವವರು ಹುಚ್ಚರೇ ಸರಿ. ಶ್ರೀನಿವಾಸನಿಗೆ ಬಿ. ಏ. ಕಲಿಯುವ ಯೋಗ್ಯತೆಯು ಮತ್ತಷ್ಟು ದೂರವಾಯಿತೆಂಬುದು ಅವನ ಮನಸ್ಸಿನ ತಕ್ಕಡಿಯನ್ನು ಒಂದು ಕಡೆಗೆ ಬಲವಾಗಿ ಕೆಳಗೆ ಎಳೆಯಿತೆಂಬುದೇನೋ ನಿಜವು. ಆದರೆ ತಾನು ಕನ್ನಡ ಜಿಲ್ಲೆಯಾದ ದಕ್ಷಿಣ ಕನ್ನಡವನ್ನಾದರೂ ಇನ್ನು ಬಿಟ್ಟುಹೋಗಬೇಕಾಗಿಲ್ಲವೆಂಬ ಸಂಗತಿಯು ಅವನ ತಕ್ಕಡಿಯನ್ನು ಪುನಃ ಸರಿಗೊಳಿಸಿತು.

ಶ್ರೀನಿವಾಸನು ತರಬೇತು ಹೊಂದದ ಉಪಾಧ್ಯಾಯನಾದುದರಿಂದ ಅವನಿಗೆ ತಿಂಗಳಿಗೆ ೨೫ ರೂ. ಮಾತ್ರ ಸಂಬಳ ಸಿಕ್ಕುತ್ತಿತ್ತು. ತರಬೇತಾದ ಮೇಲೆ ಅವನಿಗೆ ತಿಂಗಳಿಗೆ ೩೫ ರೂ. ಸಿಕ್ಕುವುದೆಂದು ಶಾಲೆಯ ಮುಖ್ಯೋಪಾಧ್ಯಾಯನಾದ ಗೋವರ್ಧನರಾಯನು ಭರವಸೆ ಕೊಟ್ಟಿದ್ದನು. ಗೋವರ್ಧನರಾಯನು ಸುಮಾರು ೪೫ ವರ್ಷ ಪ್ರಾಯದವನಾಗಿದ್ದನು. ಅವನ ಹೆಂಡತಿಯು ಮಕ್ಕಳೊಡನೆ ತಾಯಿಯ ಮನೆಗೆ ಹೋಗಿದ್ದುದರಿಂದಲೂ, ಮನೆಯು ದೊಡ್ಡದಿದ್ದುದರಿಂದಲೂ, ಶ್ರೀನಿವಾಸನು ಅವನ ಸ್ವಜಾತಿಯವನಾದುದರಿಂದಲೂ ಗೋವರ್ಧನರಾಯನು ಶ್ರೀನಿವಾಸನನ್ನು ತನ್ನ ಮನೆಯಲ್ಲೇ ಉಳಿದುಕೊಳ್ಳುವಂತೆ ಮಾಡಿದನು. ಇದಕ್ಕೆ ಪ್ರತಿಫಲವಾಗಿ ಶ್ರೀನಿವಾಸನು ತನ್ನ ಸಂಬಳದಿಂದ ತಿಂಗಳಿಗೆ ೧೫ ರೂ. ಗಳನ್ನು ಗೋಧರ್ವನರಾಯನಿಗೆ ಕೊಟ್ಟು ಬಾಕಿ ಉಳಿದ ೧೦ ರೂ. ಗಳಿಂದ ನೂರು ರೂಪಾಯಿಗಳ ಒಡೆಯನಂತೆ ಬಾಳೂರಿನಲ್ಲಿ ಮೆರೆಯುತ್ತಿದ್ದನು.

ಹೀಗಾಗಿ ಗೋವರ್ಧನರಾಯನ ಮನೆಯಲ್ಲಿ ಅವರಿಬ್ಬರು ಮಾತ್ರವಿದ್ದರು. ಕೆಲಸದವರೆಂದರೆ—ಅನ್ನ ಮಾಡಿ ಬಡಿಸುವ ಮುದುಕಿಯೊಬ್ಬಳು ಮತ್ತು ಮನೆಯ ಇತರ ಚಾಕರಿಯನ್ನು ಮಾಡುತ್ತಿರುವ ೧೭ ವರ್ಷದ ಗುಲಾಬಿ ಎಂಬ ಹುಡುಗಿಯು. ಶಾಲೆಯ ಪೇದೆಯಾದ ಕಣ್ಣನ್ನನು ಗೋವರ್ಧನರಾಯನ ಏನಾದರೊಂದು ಬಿಟ್ಟಿಯನ್ನು ಮಾಡಲಿಕ್ಕೆಂದು ಮನೆಯೊಳಗೆ ಆಗಾಗ್ಗೆ ನುಸುಳಿಕೊಂಡಿರುತ್ತಿದ್ದನು. ಇವರಲ್ಲದೆ

ಮತ್ತಾರೂ ಇರಲಿಲ್ಲ. ಗೋವರ್ಧನರಾಯನಿಗಾದರೋ ಮಾತು ಬಹಳ ಕಡಮೆ; ಶ್ರೀನಿವಾಸನಿಗೂ ಹಾಗೆಯೇ. ಆದುದರಿಂದ ಮನೆಯೊಳಗೆ ಯಾವಾಗಲೂ ಶಾಂತತೆಯು ನೆಲೆಗೊಂಡಿತು. ಇದರಿಂದ ಶ್ರೀನಿವಾಸನಿಗೆ ಹಿತಕರವೇ ಆಯಿತು. ಶಾಲೆಯ ಕೆಲಸವು ಮುಗಿದೊಡನೆ ಮನೆಗೆ ಬಂದು ಏನೂ ತೊಂದರೆ ಇಲ್ಲದೆ ಅನೇಕಾನೇಕ ಕಥೆಗಳನ್ನು ಬರೆಯುವುದಕ್ಕೂ ಕವಿತೆಗಳನ್ನು ರಚಿಸುವುದಕ್ಕೂ ಅವನಿಗೆ ಬಹಳ ಅನುಕೂಲವಾಯಿತು. ಒಂದು ನೊವ್ಹೆಲನ್ನು ಬರೆಯುವುದಕ್ಕೂ ಉಪಕ್ರಮಿಸಿದನು.

ಹೀಗೆಯೇ ಒಂದು ತಿಂಗಳು ಕಳೆಯುತ್ತಾ ಬಂತು; ಆದರೆ ಅದು ಮುಗಿಯುವಷ್ಟರೊಳಗೆ ಶಾಂತತೆಯಲ್ಲಿ ಮುಳುಗಿದ್ದ ಗೋವರ್ಧನ ರಾಯನ ಮನೆಯನ್ನು ಅದು ಅಡಿಮೇಲಾಗಿ ಮಾಡಿಬಿಟ್ಟಿತು. ಶ್ರೀನಿವಾಸನ ಸಮಾಧಾನಕರವಾದ ಜೀವನದಲ್ಲಿ ಅನೇಕಾನೇಕ ಸಂಗತಿಗಳು ಬಂದರ ಹಿಂದೆ ಒಂದು ನಾಗಾಲೋಟದಿಂದ ಸಂಭವಿಸಲಿಕ್ಕೆ ಪ್ರಾರಂಭಿಸಿದುವು.

ನೀವು ಇಲ್ಲಿ ನನ್ನ ಮಾತನ್ನು ಮನಸ್ಸು ಕೊಟ್ಟು ಕೇಳಬೇಕಾಗುವುದು. ತೂಕಡಿಸಿದರೆ ಪ್ರಯೋಜನವಿಲ್ಲ. ಏಕೆಂದರೆ ಶ್ರೀನಿವಾಸನು ಮಾಡಿದ ಅಕೃತ್ಯಕ್ಕಾಗಿ ಅವನನ್ನು ಕ್ಷಮಿಸಬೇಕೆಂಬ ಇಚ್ಛೆಯು ನಿಮ್ಮಲ್ಲಿ ಉಂಟಾಗಬೇಕಾದರೆ ಅದು ಇಲ್ಲಿಯೇ ಆಗಬೇಕು, ಮತ್ತೆ ಸಾಧ್ಯವಾಗಲಾರದು. ನೋಡೋಣ, ಶ್ರೀನಿವಾಸನ ಅಕೃತ್ಯದ ಕಪ್ಪು ಬಣ್ಣವನ್ನು ಸ್ವಲ್ಪ ಮಟ್ಟಿಗಾದರೂ ಬಿಳುಪೇರಿಸುವಂತೆ ಯಾವ ಯಾವ ವಿದ್ಯಮಾನಗಳಾಗಿದ್ದುವು ಎಂದು ನೋಡೋಣ:—

೧ ಸಂಧ್ಯಾಕಾಲ; ಸೂರ್ಯನು (ಹೆದರಬೇಡಿ, ಸಂಧ್ಯಾಕಾಲದ ವರ್ಣನೆಯನ್ನು ಮಾಡಲಿಕ್ಕೆ ನನ್ನ ಲೇಖನಿಯು ಮುಂದೊತ್ತಿ ಓಡುವುದಾದರೂ ನಿಮ್ಮ ಮೇಲಿನ ಕರುಣಾಭಾವದಿಂದ ಅದನ್ನು ಬಿಗಿಯಾಗಿ ಲಗಾಮು ಹಾಕಿ ಹಿಡಿದಿದ್ದೇನೆ.) ನಾನು ಹೇಳಲಿಕ್ಕೆ ಹೋದುದೇನು? ನೆನಪಾಯಿತು. ಸೂರ್ಯನು ಅಸ್ತಂಗತನಾಗುತ್ತಿದ್ದನು.

೨ ಶ್ರೀನಿವಾಸನು ಕ್ಲಬ್ಬಿನಲ್ಲಿ ಎರಡು 'ಟೇನಿಸ್ ಸೆಟ್ಟು' ಗಳನ್ನು ಆಡಿ ಆಗ ತಾನೇ ತನ್ನ ಕೊಠಡಿಯೊಳಗೆ ಪ್ರವೇಶಿಸಿದ್ದನು. ಅವನಾಡಿದ

ಎರಡು ಸೆಟ್ಟುಗಳಲ್ಲಿಯೂ ಅವನೇ ಜಯಶಾಲಿಯಾಗಿದ್ದನು. ಇದರಿಂದ ತಾರುಣ್ಯಾವಸ್ಥೆಯಲ್ಲಿದ್ದ ಅವನ ಮನಸ್ಸು ಬಹಳ ಆಹ್ಲಾದಮಯ ಸ್ಥಿತಿಯಲ್ಲಿತ್ತು.

೩ ಗೋವರ್ಧನರಾಯನು ಕ್ಲಬ್ಬಿನಲ್ಲಿ 'ಬ್ರಿಜ್' ಆಡಲಿಕ್ಕೆ ಕೂತುಕೊಂಡಿದ್ದನು. ಆದುದರಿಂದ ರಾತ್ರಿ ಎಂಟುವರೆ ಗಂಟೆಯ ಮೊದಲು ಅವನಿಗೆ ಮನೆಗೆ ಬರಲಿಕ್ಕಾಗುವುದಿಲ್ಲವೆಂದಾಯಿತು. ಇದರಿಂದ ಸಂಜೆಯ ಸಮಯದಲ್ಲಿ ಏಕಾಂತವನ್ನು ಬಯಸುವ ಶ್ರೀನಿವಾಸನಿಗೆ ಹಿತಕರವೇ ಆಯಿತು. ಏಕೆಂದರೆ ಅವನಿಗೆ ಬರುವ ಕವಿತೆಗಳೂ, ಗ್ರಂಥನಿರ್ಮಾಣಕ್ಕೆ ಬೇಕಾದ ಅನೇಕಾನೇಕ ಭಾವನೆಗಳೂ ಯಾವಾಗಲೂ ಸಂಜೆಯ ಸಮಯದಲ್ಲಿಯೇ, ಏಕಾಂತದಲ್ಲಿದ್ದಾಗಲೇ ಬರುತ್ತಿದ್ದುವು.

೪ ಶ್ರೀನಿವಾಸನ ಮೇಜಿನ ಮೇಲೆ ಅವನು ಮಧ್ಯಾಹ್ನ ಶಾಲೆಗೆ ಹೋದ ಸಮಯ ಟಪ್ಪಾಲಿನಲ್ಲಿ ಬಂದಿದ್ದ ಒಂದು ಕಾಗದವೂ ಒಂದು ಕನ್ನಡ ಪತ್ರಿಕೆಯೂ ಇದ್ದುವು. ಅವುಗಳನ್ನು ನೋಡಿದ ಕೂಡಲೆ ಅವನು ಅವುಗಳ ಕಡೆಗೆ ಹಾರಿ ಅವುಗಳನ್ನು ಓದಲಿಕ್ಕೆ ಹತ್ತಿದನು.

೫ ಪತ್ರಿಕೆಯಲ್ಲಿ ಅವನು ಬರೆದಿದ್ದ ಒಂದು ಕಥೆಯು ಅಚ್ಚಾಗಿ ಬಂದಿತ್ತು.

೬ ಇದು ಅವನ ಅಚ್ಚಾದ ಮೊದಲನೆಯ ಕಥೆಯಾಗಿತ್ತು.

೭ ಕಾಗದವು ಆ ಪತ್ರಿಕೆಯ ಸಂಪಾದಕರು ಸ್ವತಃ ಬರೆದುದಾಗಿತ್ತು. ಅದರಲ್ಲಿ ಬರೆದ ಒಕ್ಕಣೆಯಲ್ಲಿ ಈ ಒಂದು ವಾಕ್ಯವೂ ಇತ್ತು:– 'ನೀವು ಇನ್ನೂ ಇದರಂತೆಯೇ ಹೆಚ್ಚು ಹೆಚ್ಚು ಕಥೆಗಳನ್ನು ಬರೆದು ನಮಗೆ ಕಳುಹಿಸುವಿರೆಂದು ನಂಬುತ್ತೇವೆ. ನಾವು ಅವುಗಳನ್ನು ಯಾವಾಗಲೂ ಸಂತೋಷದಿಂದ ನಮ್ಮ 'ವೀರಕೇಸರಿ' ಯಲ್ಲಿ ಪ್ರಕಟಿಸುವೆವು'

ಯೋಗ್ಯವಾದ ಕನ್ನಡ ಕಥೆಗಳ ಅಭಾವವಿರುವ ಈ ಕಾಲದಲ್ಲಿ ಏನಾದರೊಂದನ್ನು ಬರೆದು 'ಚಿಕ್ಕ ಕಥೆ' ಯೆಂದು ಹೆಸರಿಟ್ಟು ಪತ್ರಿಕೆಗಳಿಗೆ ಕಳುಹಿಸಿದರಾಯಿತು. ಅದು ಕೂಡಲೆ ಅಚ್ಚಾಗಿ ಬರುತ್ತದೆ ಎಂದು ನನಗೂ ನಿಮಗೂ ತಿಳಿದಿರುವ ಸಂಗತಿಯೇ ಸರಿ. ಆದರೆ ಇದೇ ಸಂಗತಿಯು

ಅನುಭವವು ಶ್ರೀನಿವಾಸನಿಗೆ ಇನ್ನೂ ಆಗಬೇಕಷ್ಟೆ. ಅವನಾದರೋ 'ವೀರ ಕೇಸರಿ' ಯ ಸಂಪಾದಕರ ಪತ್ರವನ್ನೋದಿ ಕನ್ನಡ ವಾಙ್ಮಯದ ಹೊಸ ಹುರುಪಿನಲ್ಲಿ ತಾನೊಬ್ಬ ಶ್ರೇಷ್ಠನಾದ ಕತೆಗಾರನಿರುವೆನೆಂದು ಹಿರಿಹಿರಿ ಹಿಗ್ಗಿಕೊಂಡನು. ಸತ್ಯವನ್ನು ಹೇಳುವುದಾದರೆ ತರುಣನಾದ ಶ್ರೀನಿವಾಸನ ಕಥೆಗಳೆಲ್ಲ ಅವನು ಹೇಗೆ ಹೇಗೆ ಆಲೋಚಿಸಿದರೂ ಬರೇ ಮದುವೆ ಲಗ್ನಗಳ ಸುತ್ತು ಸುತ್ತು ತಿರುಗಿ 'ವರದಕ್ಷಿಣೆ' ಎಂತಲೋ 'ಕನ್ಯಾದಾನ' ವೆಂತಲೋ 'ನಿಶ್ಚಯ ತಾಂಬೂಲ' ವೆಂತಲೊ ಇವೇ ಮೊದಲಾದ ಹೆಸರುಗಳನ್ನು ಧರಿಸಿಕೊಂಡು ಹೊರಬರುತ್ತಿದ್ದುವು. ಅವುಗಳ ಮೊದಲನೆಯ ಒಂದೆರಡು ವಾಕ್ಯಗಳನ್ನು ಓದುವುದೇ ತಡ, ಕಥೆಯೇನೆಂದೂ ಅದು ಹೇಗೆ ಅಂತ್ಯವಾಗುವುದೆಂದೂ ಕೂಡಲೆ ತಿಳಿದುಬರುತ್ತಿತ್ತು. 'ವೀರಕೇಸರಿ' ಯ ಸಂಪಾದಕರು ಶ್ರೀನಿವಾಸನ ಇಂತಹ ಕತೆಯೊಂದನ್ನೇ ಪ್ರಕಟಿಸಿದ್ದರೆಂದು ಬೇರೆ ಹೇಳಬೇಕೆ?

ಅದು ಹೇಗೂ ಇರಲಿ. ಅಚ್ಚಾದ ತನ್ನ ಮೊದಲನೆಯ ಕಥೆಯನ್ನು ನೋಡಿ ಶ್ರೀನಿವಾಸನ ಸಂತೋಷಕ್ಕೆ ಮಿತಿಯೇ ಇಲ್ಲದಂತಾಯಿತು. ಅದನ್ನು ನೋಡಿದ ೧೦ ಮಿನಿಟುಗಳೊಳಗೆ ೨೦ ಸಾರಿ ಅದನ್ನು ಓದಿ ಮುಗಿಸಿದನು. ಕಥೆಯ ಮೇಲೆ ಅಚ್ಚುಹಾಕಿದ ತನ್ನ ಹೆಸರನ್ನು ೫೦ ಸಾರಿ ತನ್ನಷ್ಟಕ್ಕೇ ಓದಿ ನೋಡಿದನು.... ಓಹೋ, ಇನ್ನೂ ಒಂದೆರಡು ವಿದ್ಯಮಾನಗಳನ್ನು ಹೇಳಲು ಮರೆತೆ.

೮ ಶ್ರೀನಿವಾಸನು ಅಚ್ಚಾದ ತನ್ನ ಕಥೆಯನ್ನು ೨೧ನೆಯ ಸಾರಿ ಓದುತ್ತಿರುವಾಗ್ಗೆ ಗುಲಾಬಿಯು ಅವನ ಕೊಠಡಿಯೊಳಗೆ ಬಂದು ನಿಂತಿದ್ದಳು.

೯ ಗುಲಾಬಿಗೆ ೧೭ ವರ್ಷ ಪ್ರಾಯವೆಂದು ನಾನು ಆಗಲೇ ಹೇಳಿದ್ದೇನಲ್ಲವೇ? ಮನೆ ಚಾಕರಿಗೆ ನಿಂತ ಹುಡುಗಿಯಾದರೂ ನೋಡಲಿಕ್ಕೆ ರೂಪವತಿಯಾಗಿದ್ದಳು. ಆದರಲ್ಲಿಯೂ ಅವಳು ಅಲ್ಲಿ ಸುಮ್ಮನೆ ನಿಂತಿರಲಿಲ್ಲ: ಶ್ರೀನಿವಾಸನನ್ನು ಹಾಸ್ಯವದನದಿಂದ ನೋಡುತ್ತ ನಿಂತಿದ್ದಳು.

೧೦ ಸೂರ್ಯನು ಅಸ್ತಂಗತನಾಗುತ್ತಿದ್ದನೆಂದೂ ನಾನು ಮೇಲೆ

ಹೇಳಿದ್ದೇನಲ್ಲವೇ? ಅವನೂ ಸುಮ್ಮನೆ ತನ್ನಷ್ಟಕ್ಕೆ ಅಸ್ತಂಗತನಾಗುತ್ತಿದ್ದಿಲ್ಲ. ಹಾಗೆ ಅಸ್ತಂಗತನಾಗುತ್ತಿದ್ದಾಗ ಗುಲಾಬಿಯ ಹಾಸ್ಯವದನದ ಮೇಲೆ ಚಿನ್ನದ ಸೊಬಗನ್ನೇ ಬೀರುತ್ತಿದ್ದನು.

ಶ್ರೀನಿವಾಸನು ತಲೆಯೆತ್ತಿ ನೋಡಿದನು. ಸೌಭಾಗ್ಯಸುಂದರಿಯಂತೆ ನಿಂತಿದ್ದ ಗುಲಾಬಿಯು ಅವನ ಕಣ್ಣಿಗೆ ಬಿದ್ದಳು. ಮೊದಲೇ ಅವನ ಆಚ್ಛಾದ ಕಥೆಯ ದೆಸೆಯಿಂದ ತಲೆಗೇರಿದ ಮದವು ಈಗ ಅವನ ಸರ್ವಾಂಗವನ್ನು ವ್ಯಾಪಿಸಿತು. ಗುಲಾಬಿಯಿದ್ದೆಡೆಗೆ ಅವನು ತಟಕ್ಕನೆ ಹಾರಿ ಅವಳನ್ನು ಬಿಗಿಯಾಗಿ ಹಿಡಿದುಕೊಂಡು ಅವಳ ತುಟಿಗಳನ್ನು ದೀರ್ಘಕಾಲದ ವರೆಗೆ ಚುಂಬಿಸಿದನು.

ಹೀಗೆಯೇ ಒಂದು ಯುಗವು ಕಳೆದ ಅನಂತರ ಗುಲಾಬಿಯು, 'ಏನಿದು, ಲಜ್ಜೆ!' ಎನ್ನುತ್ತಾ ಮೆಲ್ಲಗೆ ಅವನಿಂದ ಬಿಡಿಸಿಕೊಂಡು ದೂರ ಸರಿದಳು. ಅವಳು ಅವನ ಆಲಿಂಗನದಿಂದ ಬಿಡಿಸಿಕೊಳ್ಳಲಿಕ್ಕೆ ವಿಶೇಷ ಕುತೂಹಲವನ್ನು ತೋರಿಸಿದಂತೆ ಕಾಣಲಿಲ್ಲ. ಅವಳು ಶ್ರೀನಿವಾಸನ ಈ ಅಕೃತ್ಯವನ್ನು ನೋಡಿ ವಿಶೇಷ ಕೋಪಗೊಂಡಂತೆಯೂ ಕಾಣಲಿಲ್ಲ. ಆದರೂ ಶ್ರೀನಿವಾಸನು ಫಕ್ಕನೆ ಎಚ್ಚತ್ತಂತಾದನು. ಸ್ವಪ್ನದಲ್ಲಿ ಕೂಡ ತಾನೆಣಿಸದೆ ಇದ್ದ ಈ ಅಕೃತ್ಯವನ್ನು ಮಾಡಿದುದಕ್ಕಾಗಿ ವಿಸ್ಮಯಪಟ್ಟನು. ಮತ್ತು ಕ್ಷೀಣಸ್ವರದಿಂದ, 'ಗುಲಾಬಿ....ಗುಲಾಬಿ.... ಕ್ಷಮಿಸು. ನಾನು ಏನೋ ಹುಚ್ಚ.... ಹೌದು ತೀರಾ ಹುಚ್ಚನಂತಾದೆ....ಯಾರಿಗೂ ಹೇಳಬೇಡ!' ಎಂದನು.

'ಯಾರಿಗೆ ಯಾಕೆ ಹೇಳಬೇಕು? ಅದೇನೂ ದೊಡ್ಡದಲ್ಲ.' ಎಂದು ಗುಲಾಬಿಯು ತನ್ನ ತುಟಿಗಳನ್ನು ಸೆರಗಿನಿಂದ ಒರಸಿಕೊಳ್ಳುತ್ತಾ, ಪಿಸಿಪಿಸಿ ನಗುತ್ತಾ ಹೇಳಿದಳು.

ಗುಲಾಬಿಗೆ ಶ್ರೀನಿವಾಸನ ಅಕೃತ್ಯವು 'ದೊಡ್ಡದಲ್ಲ' ವಾದುದಕ್ಕೆ ಕಾರಣವುಂಟು. ಅವಳನ್ನು ಚುಂಬಿಸಿದವರಲ್ಲಿ ಶ್ರೀನಿವಾಸನು ಮೊದಲನೆಯವನಾಗಿದ್ದಿಲ್ಲ. ಎಷ್ಟೋ ಜನರು ಅವಳನ್ನು ಈ ಮೊದಲೇ ಚುಂಬಿಸಿರುವರು. ಅವಳನ್ನು ನೋಡಿದ ಕೂಡಲೇ ಚುಂಬಿಸುವುದು ಜನರಿಗೆ

ಒಂದು ರೂಢಿಯಾಗಿತ್ತು. ಹೆಚ್ಚೇಕೆ? ಅವಳು ಮೂರು ತಿಂಗಳು ವಯಸ್ಸಿನ ಬಾಲೆಯಾದಂದಿನಿಂದ ಜನರು ಅವಳನ್ನು ಚುಂಬಿಸುತ್ತಲೇ ಇರುವರು. ಆದರೆ ಇದು ಶ್ರೀನಿವಾಸನ ತಿಳುವಳಿಕೆಗೆ ಹೇಗೆ ಬಂದೀತು? ಅವನು ತಾನು ಮಾಡಿದ ಮಹದಪರಾಧಕ್ಕಾಗಿ ಪಶ್ಚಾತ್ತಾಪ ಪಡುವುದನ್ನು ಬಿಡಲಿಲ್ಲ.

'ನೋಡು ಗುಲಾಬಿ, ಈ ಪತ್ರಿಕೆಯಲ್ಲಿ ನಾನೇ ಬರೆದ ಕಥೆಯೊಂದು ಬಂದಿತ್ತು....'

'ಏನು, ನೀವು ಕಥೆಗಳನ್ನು ಬರೆಯುತ್ತಿರುವಿರೇ? ಅದೇನೋ ನೀವು ಯಾವಾಗ ನೋಡಿದರೂ ಬರೆಯುತ್ತಾ ಇರುವುದು!'

'ಹೌದು, ಗುಲಾಬಿ, ನನ್ನ ಕಥೆಯು ಮೊದಲಾಗಿ ಅಚ್ಚಿನಲ್ಲಿ ಬಂದುದನ್ನು ನೋಡಿ ನನಗೆ.... ಏನೋ....'

'ಅದಾವ ಕಥೆಯನ್ನು ನೀವು ಬರೆದಿರುವಿರಿ? ರಾಮದೇವರ ಕಥೆಯೋ ಅಥವಾ ಧರ್ಮರಾಯನ ಕಥೆಯೋ?'

'ಛೆ! ರಾಮದೇವರ ಕಥೆಯನ್ನು ಈ ಕಾಲದಲ್ಲಿ ಯಾರು ಬರೆಯುತ್ತಾರೆ? ನೋಡು, ಈ ಕಥೆಗೆ 'ನಿಶ್ಚಯತಾಂಬೂಲ'ವೆಂದು ಹೆಸರಿಟ್ಟಿದ್ದೇನೆ. ಬಹಳ ಸೊಗಸಿದೆ. ಓದಿ ಹೇಳಲೋ?'

'ಈಗ ಬೇಡ; ಕೆಲಸ ಉಂಟು..ಅದೆಲ್ಲವೂ ಇದರಲ್ಲಿ ಅಚ್ಚಾಗಿ ಬಂದಿದೆಯೇನು?'

'ಹೌದು, ಗುಲಾಬಿ! ಇದರಲ್ಲಿ ನಾನು ಬರೆದ ಇಡೀ ಕಥೆಯು ಅಚ್ಚಾಗಿ ಬಂದಿದೆ.'

'ನಿಮ್ಮ ಹೆಸರೂ ಅದರಲ್ಲಿ ಅಚ್ಚಾಗಿ ಬಂದಿದೆಯೇನು?'

'ಅದೇನು ದೊಡ್ಡದೆ? ನೋಡು, ಇಲ್ಲಿ ಅಚ್ಚಾದ ನನ್ನ ಹೆಸರು. ನಿನಗೆ ಓದಲು ಬರುವುದಿಲ್ಲ. ಇಲ್ಲದಿದ್ದರೆ ಇಲ್ಲಿ, 'ಲೇಖಕರು:—ಶ್ರೀಯುತ ಮಂಗಳೂರು ಶ್ರೀನಿವಾಸರಾಯರು' ಎಂದು ಓದುತ್ತಿದ್ದೀ.'

ಗುಲಾಬಿಯು ಇದನ್ನು ಕೇಳಿ ವಿಸ್ಮಿತಳಾದಳು.

'ಹಾಗಾದರೆ ನೀವು ಬಹು ಭಾರೀ ದೊಡ್ಡ ಮನುಷ್ಯರು!'

'ಅಲ್ಲವೇನು ಮತ್ತೆ? ಇಲ್ಲಿ ನೋಡು. ಇದು ನನ್ನ ಕಥೆಯನ್ನು ಛಾಪಿಸಿದವರ ಪತ್ರ. ನಾನು ಇಂತಹ ಕಥೆಗಳನ್ನು ಇನ್ನೂ ಬರೆಯಬೇಕೆಂದೂ ಅವುಗಳನ್ನೆಲ್ಲ ಇದೇ ಪತ್ರಿಕೆಯಲ್ಲಿ ಛಾಪಿಸುತ್ತೇನೆಂದೂ ಅವರು ಬರೆದಿರುತ್ತಾರೆ.'

ಗುಲಾಬಿಯ ಕಣ್ಣುಗಳು ವಿಸ್ಮಯದಿಂದ ದೊಡ್ಡದಾಗಿ ಹೊಳೆಯಲಾರಂಭಿಸಿದುವು. ಅವಳು ಏನನ್ನೋ ಹೇಳಲಿಕ್ಕೆ ಬಾಯಿ ತೆರೆದಳು. ಆದರೆ ಫಕ್ಕನೆ ದೃಷ್ಟಿಯು ಬಾಗಿಲಿನ ಕಡೆಗೆ ಬೀಳಲಾಗಿ ಅವಳು ಕೂಡಲೆ ಗಾಬರಿ ಪಟ್ಟು ಕಸಗೂಡಿಸಲಿಕ್ಕೆ ಪ್ರಾರಂಭಿಸಿದಳು.

ಇಷ್ಟೆಲ್ಲ ನಡೆಯುತ್ತಿದ್ದಾಗ ಬಾಗಿಲು ತೆರೆಯಲ್ಪಟ್ಟೇ ಇತ್ತು. ಬಾಗಿಲಿನಲ್ಲಿ ಶಾಲೆಯ ಪೇದೆ ಕಣ್ಣಣ್ಣನು ಹಲ್ಲುಕಿರಿಯುತ್ತಾ ಕಾಳಭೈರವನಂತೆ ನಿಂತುಕೊಂಡಿದ್ದನು. ಅವನು ಎಷ್ಟು ಸಮಯದಿಂದ ಅಲ್ಲಿ ನಿಂತಿದ್ದನೋ ದೇವರೇ ಬಲ್ಲ. ಆದರೆ ಶ್ರೀನಿವಾಸನು ಮತ್ತು ಗುಲಾಬಿಯು ಈಗಾಗಲೇ ಅಭಿನಯಿಸಿದ ನಾಟಕ ಪ್ರದರ್ಶನದಲ್ಲಿ ಅವನೊಬ್ಬ ಟಿಕೆಟು ಪಡೆದುಕೊಳ್ಳದ ಪ್ರೇಕ್ಷಕನಾಗಿ ನಿಂತಿದ್ದನೆಂದು ಅವನ ಮುಖವು ನಿಸ್ಸಂಶಯವಾಗಿ ಹೇಳುತ್ತಿತ್ತು. ಇದನ್ನೇ ದೃಢಪಡಿಸುವುದಕ್ಕೋ ಎಂಬಂತೆ ಅವನು ಕೂಡಲೇ, 'ನ್ಯಾಂನ್ ಕಂಡಿಟುಂಡು!' ಎಂದು ಹೇಳಿಯೇ ಬಿಟ್ಟನು.

ಶ್ರೀನಿವಾಸನು ಅವನನ್ನು ನೋಡಿ ಬೆಚ್ಚಿಬಿದ್ದನು. ಗುಲಾಬಿಯು ತನ್ನ ಕಸಗುಡಿಸುವ ಕೆಲಸವನ್ನು ಮುಗಿಸಿ ಅವನ ಬಳಿ ಸೇರಿ ಕಣ್ಣಣ್ಣನನ್ನು ಮುಗುಳುನಗೆಯಿಂದ ನೋಡಿದಳು.

ಅನೇಕ ದಿನಗಳಿಂದ ಕಣ್ಣಣ್ಣನ 'ಮಲೆಯ ನಾಡಿ'ನ ಮೆದುಳಿನಲ್ಲಿ ಎರಡು ಮಹತ್ವಾಕಾಂಕ್ಷೆಗಳು ಒಂದರ ಹಿಂದೆ ಇನ್ನೊಂದು ನುಸುಳಿಕೊಂಡಿದ್ದುವು. ಅವುಗಳಲ್ಲಿ ಮೊದಲನೆಯದು ಕನ್ನಡ ಭಾಷೆಯನ್ನು ಅಲ್ಪಸ್ವಲ್ಪ ಓದಲಿಕ್ಕೆ ಮತ್ತು ಬರೆಯಲಿಕ್ಕೆ ಕಲಿತು ಈ ಜಿಲ್ಲೆಯಲ್ಲಿ ಮೊದಲೇ ಅಸಂಖ್ಯಾತವಾಗಿದ್ದ ಮಲೆಯಾಳಿ ಪೋಲೀಸು ಕೊನ್ಸಟೇಬಲರ ಸಂಖ್ಯೆಯನ್ನು ಇನ್ನೊ ಒಂದಕ್ಕೆ ಹೆಚ್ಚಿಸಬೇಕೆಂದು. ಆದರೆ ತಕ್ಕ ಗುರುವಿಲ್ಲದೆ



“ಬಾಗಿಲಿನಲ್ಲಿ ಶಾಲೆಯ ಪೇದೆ ಕಣ್ಣನ್ನನು ಹಲ್ಲು ಕಿರಿಯುತ್ತ ಕಾಳಭೈರವನಂತೆ ನಿಂತಿದ್ದನು.”

ಯಾವ ವಿದ್ಯೆಯೂ ಯೋಗ್ಯವಾಗಿ ಸಿಕ್ಕುವುದಿಲ್ಲವಷ್ಟೇ. ಆದುದರಿಂದ ಶ್ರೀನಿವಾಸನು ಬಾಳೂರು ಶಾಲೆಗೆ ಉಪಾಧ್ಯಾಯನಾಗಿ ಬಂದಕೂಡಲೇ ಕಣ್ಣನ್ನನು ಕ್ಲಾರಿಕನನ್ನು ಕಂಡ ಎಮ್ಮೆಯು ಕರುಪಿಸಂತಾದನು. ಆದರೆ ಶ್ರೀನಿವಾಸನು ಕಂಕುಳನ್ನು ಎಬ್ಬಿಸಿ ನಿಂತ ಎಮ್ಮೆಯು ಕರುವನ್ನು ಹಠಾತ್ತಾಗಿಯೂ ನೋಡಲಿಲ್ಲ. ಕಣ್ಣನ್ನನೆಲ್ಲಿ ತನಗೆ ಏಳುವರೆ ಶನಿಯಂತೆ ತಾಗುವನೋ ಎಂಬ ಭೀತಿಯಿಂದ ಅವನನ್ನು ಮೊದಲಿನಿಂದಲೇ ದೂರ ದಲ್ಲಿರಿಸುತ್ತ ಬಂದಿದ್ದನು. ಅವನ ಆದರಾತಿಥ್ಯಗಳನ್ನೆಲ್ಲ ಅವನು ಮೊದಲಿ ನಿಂದಲೇ ಏಕಪ್ರಕಾರವಾಗಿ ನಿರಾಕರಿಸುತ್ತ ಬಂದಿದ್ದನು. ಒಂದೆರಡು ಸಲ ಕಣ್ಣನ್ನನು ಬಾಯಿಬಿಟ್ಟು ತನ್ನ ಮನದಾಸೆಯನ್ನು ಅವನಿಗೆ ತಿಳಿ ಸಿದ್ದನು. ಆದರೆ ಶ್ರೀನಿವಾಸನು ಕೂಡಲೇ ಅವನ ಮಾತಿಗೆ ಅಡ್ಡಬಂದು ತನ್ನಿಂದ ಆ ಬಿಟ್ಟೀ ಕೆಲಸವು ಎಷ್ಟು ಮಾತ್ರಕ್ಕೂ ಆಗುವುದಿಲ್ಲವೆಂದು ಖಂಡಿತವಾಗಿ ಹೇಳಿದ್ದನು. ಆದುದರಿಂದ ಇತ್ತಲಾಗಿ ಅನೇಕ ದಿನಗಳಿಂದ ಶ್ರೀನಿವಾಸನನ್ನು ಕಂಡ ಕೂಡಲೇ ಕಣ್ಣನ್ನನ ಹೃದಯದಲ್ಲಿ ಒಂದು ರೀತಿಯ ಜ್ವಾಲೆಯು ಉರಿಯುತ್ತಲಿತ್ತು. ಆ ಜ್ವಾಲೆಯನ್ನು ಶ್ರೀನಿ ವಾಸನ ಮೇಲೆ ಎಂದು ಕಾರಿಬಿಡೋಣವೆಂದು ಹೊಂಚುಹಾಕಿದ್ದ ಕಣ್ಣನ್ನನಿಗೆ ಈಗಾಗಲೇ ಅಂತಹದೊಂದು ಸಂದರ್ಭವು ನಿರಾಯಾಸವಾಗಿ ದೊರಕಿತು.

'ನ್ಯಾಂನ್ ಕಂಡಿಟ್ಟುಂಡು!'—ಎರಡೇ ಶಬ್ದಗಳು, ಆದರೆ ಶ್ರೀನಿ ವಾಸನಿಗೆ ಅವುಗಳ ಅರ್ಥದ ಪರಿಮಾಣವು ಎರಡು ಪರ್ವತಗಳಷ್ಟು ದೊಡ್ಡದಾಯಿತು.

ಕಣ್ಣನ್ನನ ಮತ್ತೊಂದು ಮಹತ್ವಾಕಾಂಕ್ಷೆಯು ಏನಾಗಿತ್ತೆಂದರೆ ಗುಲಾಬಿಯನ್ನು ಒಮ್ಮೆ ಚುಂಬಿಸಬೇಕೆಂದು. ಆದರೆ ಇದರಲ್ಲಿ ಒಂದು ಮಹತ್ವವಿದೆ; ಒಂದು ಚೋದ್ಯವಿದೆ. ಎಲ್ಲರ ಕೈಗೂ ಸುಲಭದಿಂದ ಎಟಕುವಂತಹ ಆ ವಸ್ತು ಇವನ ಪಾಲಿಗೆ ಮಾತ್ರ ಹುಲಿಯ ಹಾಲಿನಂತಾ ಯಿತು. ಎಲ್ಲರ ಬಾಯಿಗೂ ಅಮೃತವಾಗಿ ಪರಿಣಮಿಸುತ್ತಿರುವ ಗುಲಾಬಿಯು ಇವನ ಬಾಯಿಗೆ ವಿಷವಾಗಿ ಪರಿಣಮಿಸಿದಳು. ಒಮ್ಮೆ

ಕಣ್ಣನ್ನನು ಅವಳನ್ನು ಚುಂಬಿಸಲಿಕ್ಕೆ ಯತ್ನಿಸಿದ್ದನು. ಆದರೆ ಅವಳ ಅಧರಾಮೃತವನ್ನು ಸ್ವೀಕರಿಸುವ ಬದಲಾಗಿ ತನ್ನ ಕೆನ್ನೆಯ ಮೇಲೆ ಅವಳ ಚೂಪಾದ ನಖಗಳ ಸವಿಯನ್ನು ಅವನು ಚೆನ್ನಾಗಿ ಅನುಭವಿಸಿದ್ದನು. ಆ ಸವಿಯ ಗುರುತು ಅವನ ಕೆನ್ನೆಯ ಮೇಲೆ ಇನ್ನೂ ಮಾಸಿ ಹೋಗದೆ ಇದ್ದುದರಿಂದ ಆ ಅನುಭವದ ಸ್ಮರಣೆಯೂ ಅವನ ಮೆದುಳಿನಿಂದ ಇನ್ನೂ ಮಾಸಿ ಹೋಗಿರಲಿಲ್ಲ.

ತನ್ನ ಮುಂದಿರುವ ಶ್ರೀನಿವಾಸನನ್ನೂ ಗುಲಾಬಿಯನ್ನೂ ಇನ್ನೂ ಹಲ್ಲು ಕಿರಿಯುತ್ತಾ ನೋಡುತ್ತಾ, 'ನ್ಯಾಂನ್ ಕಂಡಿಟುಂಡು!..ಸಲ್ಲೆ ಪೆಣ್, ಅಲ್ಲೇ?' ಎಂದು ಅವನು ಮೂರನೆಯ ಬಾರಿ ಪರಿಹಾಸ್ಯದಿಂದ ಹೇಳಿದನು.

ಗುಲಾಬಿಯು ಗೃಹಚಾಮರವನ್ನು ಹಿಡಿದು ಸದ್ದಿಲ್ಲದೆ ಕೋಣೆಯ ಹೊರಗೆ ಹೋದಳು. ಶ್ರೀನಿವಾಸನು ಕಣ್ಣನ್ನನ ವರ್ತನೆಯನ್ನು ನೋಡಿ ಅಲ್ಲಿಯೇ ಸ್ತಂಭಿತನಾದನು. ಅವನ ಬಾಯಿಯನ್ನು ಹೇಗೆ ಮುಚ್ಚಲಿ ಎಂಬುದೊಂದೇ ವಿಚಾರವು ಅವನ ತಲೆಯಲ್ಲಿ ತುಂಬಿ ಹೋಯಿತು. ಅದನ್ನೊಂದು ಮಾಡದಿದ್ದರೆ ಗುಲಾಬಿಯ ಮೇಲೆ ತಾನು ನಡೆಸಿದ ಆಕೃತ್ಯದ ಪರಿಣಾಮವು ವಿಪರೀತಕ್ಕೆ ಬರುವುದೆಂದು ಅವನಿಗೆ ನಿಶ್ಚಯವಿತ್ತು. ಆದುದರಿಂದ ಕಣ್ಣನ್ನನ ಬಾಯಿಯನ್ನು ಮುಚ್ಚುವುದಕ್ಕೆ ತನ್ನ ಅಂಗಿಯ ಜೇಬಿನಲ್ಲಿ ಏನಾದರೂ ನಾಲ್ಕಾಣೆಯ ದುಡ್ಡು ಉಂಟೋ ಎಂದು ನೋಡಿದನು. ಆದರೆ ವಿಧಿಯು ಅವನಿಗೆ ಇಲ್ಲಿಯೂ ಎದುರು ನಿಂತಿತು. ನಾಲ್ಕಾಣೆಯ ದುಡ್ಡಿನ ಬದಲಾಗಿ ಒಂದು ರೂಪಾಯಿಯ ನಾಣ್ಯವೇ ಅವನ ಬೆರಳುಗಳಲ್ಲಿ ಸಿಲುಕಿಗೊಂಡಿತು. ಆದರೆ ಮಾನಮರ್ಯಾದೆಗೆ ಬೆಲೆ ಉಂಟೇ? ಎಷ್ಟು ಖರ್ಚು ಮಾಡಿಯಾದರೂ ಅದನ್ನೊಂದು ಉಳಿಸಿಕೊಳ್ಳುವುದು ನಮ್ಮಂಥ ನಾಗರಿಕರ ಲಕ್ಷಣವಲ್ಲವೇ? ಆದುದರಿಂದ ಶ್ರೀನಿವಾಸನು ಕೈಗೆ ಸಿಲುಕಿದ ನಾಣ್ಯವನ್ನು ಅಸಡ್ಡೆಮಾಡದೆ ಹೊರ ತೆಗೆದು, ಕಣ್ಣನ್ನನು ಮತ್ತೊಂದಾವೃತ್ತಿ 'ನ್ಯಾಂನ್ ಕಂಡಿಟುಂಡು!' ಎಂದು ಹೇಳುವ ಮೊದಲೇ ಅವನ ಕೈಯಲ್ಲಿಟ್ಟುಬಿಟ್ಟನು.

ಕಣ್ಣನ್ನನು ತನ್ನ ಕೈಯಲ್ಲಿ ಮಿಂಚುತ್ತಿರುವ ನಾಣ್ಯವನ್ನು ಕಂಡನು. ಆದರೂ ಅವನು ಹಲ್ಲು ಕಿರಿಯುವುದನ್ನು ಬಿಡಲಿಲ್ಲ. ಶ್ರೀನಿವಾಸನು ಇದನ್ನು ನೋಡಿ ಗಾಬರಿಪಟ್ಟನು.

'ಆರ್ಕೆ ವೇಣೋ ನಿಂಗಡೆ ಪಣಂ? ಎನಿಕ್ಕ್ ವೇಂಡ!' ಎಂದು ಹೇಳುತ್ತಾ ಕಣ್ಣನ್ನನು ಕೈಯಲ್ಲಿದ್ದ ನಾಣ್ಯವನ್ನು ಕೂಡಲೇ ತನ್ನ ಜೇಬಿನೊಳಗೆ ಹಾಕಿದನು. ಮತ್ತು ಶ್ರೀನಿವಾಸನ ಹತ್ತಿರಕ್ಕೆ ಒಂದು 'ನಿಂಗಳ್ ಎನ್ನೆ ಕರ್ನಾಟಕಂ ಪಠಿಪಿಚ್ಚಾಲ್ ನ್ಯಾಂನ್ ಅದ ಆರೋಡುಂ ಪರಯುಲ್ಲಾ!' ಎಂದು ಒತ್ತರದಿಂದ ಹೇಳಿದನು.

ಇದನ್ನು ಕೇಳಿ ಶ್ರೀನಿವಾಸನಿಗೆ ಸಿಡಿಲು ಬಡಿದಂತಾಯಿತು. 'ಅವನ ಕನಸು ನೆನಸಾದಂತೆ ಭೀತಿ ಕೃತಿಯಾಯಿತು.' ತಾನೀಗ ಇಡೀ ಒಂದು ರೂಪಾಯಿಯನ್ನು ಕಳೆದುಕೊಂಡುದಲ್ಲದೆ, ಇನ್ನು ಮುಂದೆ ಗ್ರಂಥ ನಿರ್ಮಾಣದಲ್ಲಿ ವಿನಿಯೋಗಿಸಬೇಕೆಂದಿರುವ ತನ್ನ ಅಮೂಲ್ಯವಾದ ಸಮಯವನ್ನೆಲ್ಲ ಈ ಮುಟ್ಠಾಳನಿಗೆ ಅ ಆ ಕಲಿಸುವುದರಲ್ಲಿ ಕಳೆಯಬೇಕೇ? ಛೆ! ಛೆ! ಛೆ! ಬೇಕಾದರೆ ಹತ್ತು ಸಾರಿ ಛೆ! ಛೆ! ಛೆ! ಅದೊಂದು ಮಾತ್ರ ಎಂದಿಗೂ ತನ್ನಿಂದಾಗದ ಕೆಲಸವು! ಕಣ್ಣನ್ನನು ಬೇಕಾದುದನ್ನು ಮಾಡಲಿ! ಅವಶ್ಯವಿದ್ದರೆ ಒಂದು ದೊಡ್ಡ ಮದ್ದಳೆಯನ್ನು ತೆಗೆದುಕೊಂಡು ಇಡೀ ಊರೊಳಗೆ ಸುತ್ತಾಡಿ ತಾನು ಗುಲಾಬಿಯ ಮೇಲೆ ನಡೆಯಿಸಿದ ಅಕೃತ್ಯವನ್ನು ಡಂಗುರ ಹೊಡಿಸಿ ಸಾರಲಿ. ತಾನು ಖಂಡಿತವಾಗಿಯೂ ಅವನಿಗೆ ಅ ಆ ಮಾತ್ರವಲ್ಲ ಇ ಈ ಕೂಡ ಕಲಿಸಲಿಕ್ಕಿಲ್ಲ ಎಂದು ಶ್ರೀನಿವಾಸನು ನಿಶ್ಚಯಮಾಡಿದನು.

ಶ್ರೀನಿವಾಸನ ಈ ಮನೋಭಾವವು ಕಣ್ಣನ್ನನಿಗೆ ಕೂಡಲೇ ತಿಳಿಯಿತೆಂದೇ ಕಾಣುತ್ತದೆ. ಏಕೆಂದರೆ ಅವನೂ ತನ್ನ ಬತ್ತಳಿಕೆಯಿಂದ ಆ ತನ್ನ ವಾಸವಾಸ್ತ್ರವನ್ನು ಹೊರತೆಗೆದನು: 'ನ್ಯಾಂನ್ ಕಂಡಿಟುಂಡು! ಮನಸಿಲಾಯೋ?'

ಕಣ್ಣನ್ನನ ಈ ಅಸ್ತ್ರದ ಮುಂದೆ ಶ್ರೀನಿವಾಸನ ನಿರ್ಧಾರವು ದಿಕ್ಕಾಪಾಲಾಗಿ ಹೋಯಿತು. ಅವನು ವಸ್ತುಸ್ಥಿತಿಗೆ ಎಚ್ಚತ್ತಂತಾದನು.

ಉಪಾಯವಿಲ್ಲದೆ ಕಣ್ಣಾನ್ನನ ಬಲೆಯೊಳಗೆ ಬಿದ್ದನು. ಕಣ್ಣಾನ್ನನು ಕೂಡಲೇ ಚೀಲದೊಳಗಿದ್ದ ಒಂದು ಹರುಕು ಬಾಲಶಿಕ್ಷೆಯನ್ನು ತೆರೆದು ಶ್ರೀನಿವಾಸನ ಮುಂದೆ ಮರುಮಾತೆತ್ತದೆ ಕುಳಿತನು.

ಕಂಕುಳನ್ನು ಎತ್ತಿ ತೋರಿಸಿದ ಎಮ್ಮೆಯ ಕರುವಿಗೆ ಕ್ಷೌರಿಕನು ಕ್ಷೌರ ಮಾಡತೊಡಗಿದನು.

ಅಂದಿನಿಂದ ಶ್ರೀನಿವಾಸನಿಗೆ ಏಳುವರೆ ಶನಿಯು ಸರಾಗವಾಗಿ ಹಿಡಿಯಿತು. ಅವನು ಪ್ರತಿ ದಿನದ ಸಂಜೆಯ ಸಮಯವನ್ನು ಅಮೂಲ್ಯವಾದ ಭಾವೋಕ್ತಿಗಳಿಂದ ಕೂಡಿದ ಕವಿತೆಗಳ ನಿರ್ಮಾಣದಲ್ಲಿ ತಲ್ಲೀನನಾಗಿ ಕಳೆಯುವುದರ ಬದಲಾಗಿ ಕಣ್ಣಾನ್ನನಿಗೆ ಬಾಲಶಿಕ್ಷೆಯ ಅರ ಪರ ಗರ ಅರಗ ಅಗರ ಗರಸ ಪರಪರ ಗರಗರ ಪರಗಸ ಗರಪಸ ಇವೇ ಮೊದಲಾದ ಅನರ್ಥಗಳನ್ನು ಕಲಿಸುವುದರಲ್ಲಿ ವಿನಿಯೋಗಿಸಬೇಕಾಯಿತು. ದಿನ ಹೋಗುತ್ತಾ ಶ್ರೀನಿವಾಸನ ಮುಖವು ಬಾಡುತ್ತಬಂತು. ಜೀವನದಲ್ಲಿಯ ಉತ್ಸಾಹವು ಕಡಮೆಯಾಗುತ್ತ ಬಂತು. ವಾರ್ತಾಪತ್ರಿಕೆಗಳ ಜಾಹೀರಾತುಗಳಲ್ಲಿ ವಿರಳವಾಗಿ ಬಣ್ಣಿಸಿರುವ ರೋಗಗಳ ಚಿಹ್ನೆಗಳೆಲ್ಲ ಅವನಲ್ಲಿ ಒಂದೊಂದಾಗಿ ಕಂಡುಬರಲಿಕ್ಕೆ ಪ್ರಾರಂಭಿಸಿದುವು. ಹೆಚ್ಚೇನು ಬರೇ ಕೆಲವು ದಿನಗಳೊಳಗೆ ಅವನಿಗೆ ಜೀವನವೇ ಬೇಡವೆನಿಸಿತು.

ಹೀಗೆಯೇ ಅನೇಕ ದಿನಗಳು ಕಳೆದುಹೋದುವು. ಶ್ರೀನಿವಾಸನ ಪಾಲಿಗೆ ಕಣ್ಣಾನ್ನನು ಸಿಂದಬಾದ ನಾವಿಕನ ಮೇಲೆ ಸವಾರಿಮಾಡುತ್ತಿದ್ದ ಸಮುದ್ರದ ಮುದುಕನಂತಾದನು. ಅಷ್ಟು ದಿನಗಳು ಕಳೆದುಹೋದರೂ ಶ್ರೀನಿವಾಸನ ಲೇಖನಿಯಿಂದ ಒಂದೇ ಒಂದು ಚಿಕ್ಕ ಕಥೆಯಾದರೂ ಉತ್ಪನ್ನವಾಗಲಿಲ್ಲ! ಕವಿತೆಯ ಒಂದೇ ಒಂದು ಭಾವನೆಯಾದರೂ ಅವನ ತಲೆಯಿಂದ ಹೊರಸೂಸಲಿಲ್ಲ! ಅವನೆಷ್ಟೋ ಹಿಂದೆ ಅರ್ಧದಲ್ಲಿಯೇ ಬರೆದಿಟ್ಟಿದ್ದ ನೊವ್ಹೆಲಿಗೆ ಒಂದೇ ಒಂದು ಅಕ್ಷರವನ್ನಾದರೂ ಕೂಡಿಸಲಿಕ್ಕಾಗಲಿಲ್ಲ! ಎಂತಹ ದುರ್ದೈವವು! ಲೋಕದಲ್ಲಿ ಎಷ್ಟು ಮಂದಿ ಗುಲಾಮಿಯರಿಲ್ಲ? ಅವರನ್ನೆಷ್ಟು ಮಂದಿ ಚುಂಬಿಸುವುದಿಲ್ಲ! ಆಗರೆ ಅವನೊಮ್ಮೆ ಏನೋ ಥಕ್ಕನೆ ತಾನು ಏನು ಮಾಡುತ್ತೇನೆಂದು ತನಗೆ ತಿಳಿಯು

ದೇನೇ—ಅದು ಕೂಡ ಬರೇ ಭ್ರಾತೃಭಾವದಿಂದ—ಗುಲಾಬಿಯನ್ನು ಚುಂಬಿಸಿದ್ದುದೇ ತಡ, ಅವನು ಇಷ್ಟೆಲ್ಲ ಅನರ್ಥಕ್ಕೆ ಗುರಿಯಾಗಬೇಕೇ? ಅವನು ಗುಲಾಬಿಯ ಮೇಲೆ ನಡೆಸಿದ ಅಕೃತ್ಯವು ನಿಜವಾಗಿಯೂ ಅಷ್ಟು ಹೇಯವಾದುದೇ?

ಒಂದು ದಿನ ಸಂಜೆ; ೭ ಗಂಟೆ. ಮರಣದಂಡನೆಗೆ ಗುರಿಯಾಗಿದ್ದ ಕೈದಿಯು ತನ್ನ ಕುತ್ತಿಗೆಗೆ ನೇಣುಬೀಳುವ ಸಮಯವನ್ನು ಯಾವ ರೀತಿಯಲ್ಲಿ ನಿರೀಕ್ಷಿಸುತ್ತಾನೋ ಅದೇ ರೀತಿಯಲ್ಲಿ ಶ್ರೀನಿವಾಸನು ತನ್ನ ಕೊಠಡಿಯೊಳಗೆ ಕಣ್ಣಾನ್ನನ ಆಗಮನವನ್ನು ಎಂದಿನಂತೆ ನಿರೀಕ್ಷಿಸುತ್ತಿದ್ದನು. ಕೊಠಡಿಯೊಳಗೆ ಕತ್ತಲು ಕವಿದಿದ್ದರೂ ಅವನು ದೀಪವನ್ನು ಉರಿಸಲಿಲ್ಲ. ಹೃದಯದೊಳಗೆ ಕತ್ತಲೆ ಕವಿದಿರುವಾಗ್ಗೆ ಬಾಹ್ಯದಲ್ಲಿ ಬೆಳಕನ್ನು ಇಚ್ಛಿಸುವವನಾರು? ನಮ್ಮ ಅಂತರ್ಯವು ಸುಖದ ಬೆಳಕಿನಲ್ಲಿ ವಿಹರಿಸುತ್ತಿದ್ದರೇನೇ ನಾವು ಬಾಹ್ಯದಲ್ಲಿಯೂ ಬೆಳಕಿನ ಪ್ರಕಾಶಕ್ಕೆ ಹಂಬಲಿಸುವೆವು. ಆದರೆ ಇದೇನು ಚಮತ್ಕಾರ? ಅವನ ಹೃದಯದಲ್ಲಿ ಫಕ್ಕನೆ ಒಂದು ನವೀನ ತರದ ಆಹ್ಲಾದದ ವೇದನೆಯುಂಟಾಗಲಿಕ್ಕೆ ಕಾರಣವೇನು? ಅತಿ ಹೆಚ್ಚು ಛಳಿಯೂ ಅತಿ ಹೆಚ್ಚು ಬೆಂಕಿಯಂತೆಯೇ ಸುಡುತ್ತದೆಂದು ಅನುಭವಜ್ಞರು ಹೇಳುತ್ತಾರೆ. ಅತಿರೇಕ ದುಃಖಕ್ಕೂ ಅತಿರೇಕ ಸಂತೋಷಕ್ಕೂ ಭೇದವಿಲ್ಲೆಂದು ಜ್ಞಾನಿಗಳು ಹೇಳುವರು. ಅಂತೆಯೇ ವೇದನೆಯು ಪರಮಾವಧಿಯನ್ನು ಮುಟ್ಟಿದ ಶ್ರೀನಿವಾಸನ ಹೃದಯದಲ್ಲಿ ಅವನನುಭವಿಸುತ್ತಿರುವ ವೇದನೆಯು ಆಹ್ಲಾದರೂಪವಾಗಿ ಮಾರ್ಪಟ್ಟುದರಲ್ಲಿ ಆಶ್ಚರ್ಯವೇನು?

ಅವನ ಈ ಸ್ಥಿತಿಯಲ್ಲಿ ಅವನಿಗೆ ತಿಳಿಯದೇನೇ ಅವನ ಕೈಯು ಬರೆಯುವ ಲೇಖನಿಯನ್ನು ಹುಡುಕಿಹೋಯಿತು; ಕಾಗದವನ್ನು ಮೇಜಿನ ಮೇಲೆ ತಂದಿರಿಸಿತು; ದೀಪವನ್ನು ಉರಿಸುವಂತೆ ಮಾಡಿತು. ದೀಪದ ಬೆಳಕಿನಲ್ಲಿ ಅವನಿಗೆ ತಿಳಿಯದೇನೇ ಅವನ ಲೇಖನಿಯು ಕಾಗದ ಮೇಲೆ ಕವಿತೆಯ ಸಾಲುಸಾಲುಗಳನ್ನು ಬರೆಯುತ್ತ ಹೋಯಿತು. ಅವನ ಮುಖದಲ್ಲಿ ಎಷ್ಟೋ ದಿನಗಳಿಂದ ಮಾಯವಾದ ಜ್ಯೋತಿಯು ಮೆಲ್ಲಗೆ

ಬರಲಾರಂಭಿಸಿತು. ಆವನೀಗ ಒಬ್ಬ ಕಣ್ಣನ್ನನಲ್ಲ, ನೂರು ಕಣ್ಣನ್ನರು ಬಂದರೂ ಆವರನ್ನೆಲ್ಲ ನಿರ್ಭಯದಿಂದ ಎದುರುಗೊಳ್ಳಲಿಕ್ಕೆ ಸಿದ್ಧನಾದನು.

ಆದರೆ ಆಗ ತಾನೇ ಕೋಣೆಯೊಳಗೆ ಪ್ರವೇಶಿಸಿದ ಕಣ್ಣನ್ನನು ಒಬ್ಬನೇ ಒಬ್ಬನಾಗಿದ್ದನು. ಅವನ ಕಂಕುಳೊಳಗಿಂದ ಕನ್ನಡ ಮೊದಲ ನೆಯ ಪುಸ್ತಕವು ಹೊರಗೆ ಇಣಿಕಿನೋಡುತ್ತಿತ್ತು.

'ನ್ಯಾಂನ್ ವನ್ನಿಟ್ಟುಂಡು!' ಎಂದು ಅವನು ತಾನು ಬಂದ ಸುವಾರ್ತೆಯನ್ನು ಕೂಡಲೇ ಶ್ರೀನಿವಾಸನಿಗೆ ಹಲ್ಲು ಕಿರಿಯುತ್ತಾ ತಿಳಿಸಿದನು.

ಕಾಗದದ ಮೇಲೆ ಸರಾಗವಾಗಿ ಸವಾರಿಮಾಡುತ್ತಿದ್ದ ಶ್ರೀನಿವಾಸನ ಲೇಖನಿಗೆ ಬಿಗಿದಾಗಿ ಲಗಾಮು ಹಾಕಿ ಎಳೆಯಲ್ಪಟ್ಟಂತಾಯಿತು. ಇದನ್ನು ನೋಡಿ ಶ್ರೀನಿವಾಸನು ಕೋಪದಿಂದ ಕಿಡಿಕಿಡಿಯಾದನು. ಕೋಪದ ಪರಮಾವಧಿಯಿಂದ ತನಗೆ ಗೊತ್ತಿದ್ದ ಒಂದು ಪಾಲು ಮಲೆಯಾಳಕ್ಕೆ ಎರಡು ಪಾಲು ಕನ್ನಡವನ್ನೂ, ಮೂರು ಪಾಲು ತುಳುವನ್ನೂ, ಐದೂವರೆ ಪಾಲು ಇಂಗ್ಲೀಷನ್ನೂ ಚೆನ್ನಾಗಿ ಬೆರಸಿ ಕಣ್ಣನ್ನನನ್ನು ಸಮೃದ್ಧಿಯಿಂದ ಹರಸಿದನು. ಅವನ ಕಂಕುಳಲ್ಲಿದ್ದ ಕನ್ನಡ ಮೊದಲನೆಯ ಪುಸ್ತಕವನ್ನು ಎಳೆದು ನುಚ್ಚುನೂರಾಗಿ ಹರಿದು, ಕಿಟಕಿಯಿಂದ ಬಿಸಾಡಿದನು. ಆ ಮೇಲೆ ಅವನ ಎರಡು ಭುಜಗಳ ಮೇಲೂ ತನ್ನ ಕೈಗಳನ್ನು ಒತ್ತಿಟ್ಟು ಆವನನ್ನು ಕೋಣೆಯ ಬಾಗಿಲಿಗೆ ಕರಕೊಂಡು ಹೋದನು. ಎರಡು ನಿಮಿಷದಲ್ಲಿಯೇ ಕಣ್ಣನ್ನನು ತನ್ನ ಗುರುವಿನ ಚರಣಕಮಲಗಳ ಸ್ಪರ್ಶದಿಂದ ಆಶೀರ್ವದಿಸಲ್ಪಟ್ಟು ಎಂಟು ಹೆಜ್ಜೆ ಮುಂದಕ್ಕೆ ಅಂತರಿಕ್ಷದಲ್ಲಿ ಹಾರಿಹೋಗಿ ನೆಲವನ್ನು ಚುಂಬಿಸಿದನು.

ದೂರದಿಂದ ಇದನ್ನೆಲ್ಲ ನೋಡುತ್ತಿದ್ದ ಗುಲಾಬಿಯು ಆ ಕ್ಷಣವೇ ತನ್ನ ಗಂಟಲೊಳಗಿಂದ ಒಂದು ಅತಿ ಮನೋಹರವಾದ ಕಿಲಕಿಲ ನಿನಾದವನ್ನು ಹೊರಡಿಸಿದಳು.

ಕಣ್ಣನ್ನನು ರೋಷದಿಂದ ಎದ್ದನು. ಗುಲಾಬಿಗೆ ಸಹಸ್ರನಾಮಕರಣವನ್ನು ಮಾಡಿದನು. ಮಲೆಯಾಳ ಭಾಷೆಯಲ್ಲಿರುವ ಅಮೂಲ್ಯವಾದ ಶಬ್ದಗಳನ್ನೆಲ್ಲ ಹೆಕ್ಕಿ ತೆಗೆದು ಅವುಗಳನ್ನೆಲ್ಲ ಸರಿಯಾಗಿ ಪೋಣಿಸಿ

ಶ್ರೀನಿವಾಸನ ಅವಗಾಹನೆಗಾಗಿ ಅರ್ಪಿಸಿದನು. ಇದಾದ ಮೇಲೆ ಇನ್ನು ತನ್ನ ವಿಷವನ್ನೆಲ್ಲ ಗೋವರ್ಧನರಾಯನ ಕಿವಿಯಲ್ಲಿ ಕಾರಬೇಕೆಂದು ನಿಶ್ಚಯಮಾಡಿ ಆ ಭೂಪತಿರಂಗನನ್ನು ಹುಡುಕಿಕೊಂಡು ಹೋದನು.

ಅಂದು ರಾತ್ರಿ ಗೋವರ್ಧನರಾಯನು ಕ್ಲಬ್ಬಿನಲ್ಲಿ ಬ್ರಿಜ್ ಆಡಿ ಮನೆಗೆ ಹೋಗಬೇಕೆಂದು ನಿಶ್ಚಯಮಾಡಿದಾಗ ಎಂಟುವರೆ ಗಂಟೆ ಆಗಿ ಹೋಗಿತ್ತು. ಅದರಲ್ಲಿಯೂ ಅವನು ಅಂದು ಬ್ರಿಜ್ ಆಟದಲ್ಲಿ ವಿಶೇಷವಾಗಿ ಮಗ್ನನಾಗಿದ್ದುದರಿಂದ ಮನೆಗೆಂದು ಹೋಗುವಾಗಲೂ ಕೂಡ ಅವನಾಡಿದ ಕಡೆಯ ನೋ ಟ್ರಂಪ್ಸ್ (ತುರುಪಿಲ್ಲದ) ಆಟದಲ್ಲಿ ತಾನು ಡಯ್ಮಾನ್ ಕಳ್ಳನನ್ನು ಮೊದಲು ಇಳಿಸುವ ಬದಲಾಗಿ ಇಸ್ಪೀಟು ರಾಜನನ್ನು ಇಳಿಸಿದರೆ ಆಟವನ್ನು ಹೇಗೆ ಕೊನೆಗಾಣಿಸಬಹುದಿತ್ತು, ಎಂಬ ವಿಚಾರವನ್ನೇ ಮನಸ್ಸಿನಲ್ಲಿ ತಿರುಗಿಸುತ್ತಾ ಮಾರ್ಗದಲ್ಲಿ ಹೋಗುತ್ತಿದ್ದನು. ಇಂತಹ ಪ್ರಸಂಗದಲ್ಲಿ ಅವನು ತನ್ನ ಮನೆಯ ದಾರಿ ತಪ್ಪಿ ಮನೆಯಿಂದ ಎರಡು ಮೈಲು ದೂರವಾದರೂ ಹೋದುದರಲ್ಲಿ ಆಶ್ಚರ್ಯವೇನು? ದೈವವಶಾತ್ ಅವನ ಒಬ್ಬ ಸ್ನೇಹಿತನು ದಾರಿಯಲ್ಲಿ ಅವನಿಗೆ ಸಿಕ್ಕಿ 'ಏನಯ್ಯಾ, ಗೋವರ್ಧನರಾಯರೇ, ಇಷ್ಟು ರಾತ್ರಿಯಲ್ಲಿ ಎಲ್ಲಿಗೆ ಹೋಗುತ್ತಿರುವಿರಿ?' ಎಂದು ಕೇಳಿದುದರಿಂದ ಅವನು ಫಕ್ಕನೆ ತನ್ನ ಅವಸ್ಥೆಯಿಂದ ಎಚ್ಚತ್ತು ಮತ್ತೆ ವಿಳಂಬ ಮಾಡದೆ ಹಿಂತಿರುಗಿ ತನ್ನ ಮನೆಯ ದಾರಿಯನ್ನು ಹಿಡಿದನು. ಇದರ ದೆಸೆಯಿಂದಲೋ, ಏನೋ, ಅವನು ಕ್ಲಬ್ಬಿನಿಂದ ಬರುವಾಗಲೇ ಅವನ ಕಿವಿಗಳಲ್ಲಿ ಶ್ರೀನಿವಾಸನ ವಿಷಯದಲ್ಲಿ ತುಂಬ ವಿಷವನ್ನು ಜಡಿಯಬೇಕೆಂದು ನಿಶ್ಚಯಮಾಡಿದ ಕಣ್ಣನ್ನನಿಗೆ ಅವನು ಸಿಗದೆ ಹೋದನು. ಇದರ ದೆಸೆಯಿಂದಲೇ ಗೋವರ್ಧನರಾಯನು ಅಂದು ಮನೆಗೆ ಬರುವಾಗ ರಾತ್ರಿ ಹತ್ತು ಗಂಟೆ ಮೀರಿ ಹೋಗಿತ್ತು.

ಗೋವರ್ಧನರಾಯನು ಮನೆಗೆ ಬಂದು ತನ್ನ ಕೊಠಡಿಯನ್ನು ಪ್ರವೇಶಿಸಿದೊಡನೆ ಗುಲಾಬಿಯು ಕೈಯಲ್ಲಿ ಒಂದು ಹಳದಿ ಬಣ್ಣದ ಲಕೋಟೆಯನ್ನು ಹಿಡಿದುಕೊಂಡು ಅವನ ಕೊಠಡಿಯೊಳಗೆ ಬಂದಳು.

'ಈಗಾಗಲೇ ತಮಗೆ ಈ ತಂತಿಯು ಬಂದಿತ್ತು' ಸ್ವಾಮಿ. ಶ್ರೀನಿವಾಸರಾಯರು ತಮಗಾಗಿ ದಸ್ಕತು ಮಾಡಿ ಇದನ್ನು ತೆಗೆದು ಕೊಂಡಿರುವರು' ಎಂದು ಹೇಳಿ ಲಕೋಟೆಯನ್ನು ಅವನಿಗೆ ಕೊಟ್ಟಳು.

ಗೋವರ್ಧನರಾಯನು ಲಕೋಟೆಯನ್ನು ಒಡೆದನು. ತಂತಿ ಸಮಾಚಾರವನ್ನು ಓದಿದನು. ಗುಲಾಬಿಯು, 'ಏನು, ಏನು ಸಮಾಚಾರ? ಯಾರು ಸತ್ತರು?' ಎಂದು ಕೇಳುವಷ್ಟರೊಳಗೆ ಅವನು ಒಂದು ದೊಡ್ಡ ಅರಚನ್ನು ಹಾಕಿ, ಅವಳಿದ್ದೆಡೆಗೆ ಹಾರಿ, ಅವಳನ್ನು ಬಿಗಿಯಾಗಿ ಹಿಡಿದು ಕೊಂಡು ಕೆಂಬಣ್ಣದ ಅವಳೆರಡು ಕೆನ್ನೆಗಳಲ್ಲಿಯೂ ಎರಡು ಸಲ ಮುದ್ದಿಟ್ಟನು.

ಗೋವರ್ಧನರಾಯನು ಅವಳನ್ನು ಮುದ್ದಿಟ್ಟದ್ದು ಇದೇ ಮೊದಲನೆಯ ಸಾರಿ. ಮಿತಿಮೀರಿದ ಸಂತೋಷವು ದೊಡ್ಡವರನ್ನೂ ಕೂಡ ಎಂತಹ ಹುಚ್ಚರನ್ನಾಗಿ ಮಾಡಿಬಿಡುತ್ತದೆ! ಗೋವರ್ಧನರಾಯನಿಗೆ ಗೋವೆಯ ಸೋಡ್ತಿಯಲ್ಲಿ (ಲಾಟರಿ) ರೂ. ೮೦೦೦ ಸಿಕ್ಕಿದೆಂಬುದೇ ಆ ತಂತಿಯ ಸಮಾಚಾರವಾಗಿತ್ತು.

ಕಣ್ಣಣ್ಣನು ಗೋವರ್ಧನರಾಯನನ್ನು ಊರಲ್ಲೆಲ್ಲ ಹುಡುಕುತ್ತ, ಅವನು ಸಿಕ್ಕದೆ ಬೇಸತ್ತು, ಯಜಮಾನನನ್ನು ಕಳೆದುಕೊಂಡ ನಾಯಿಯಂತೆ ಹತಾಶನಾಗಿ, ಕಟ್ಟಕಡೆಗೆ ತನ್ನ ಯಜಮಾನನ ಮನೆಗೇ ಬಂದು ಸೇರಿದನು. ತನ್ನ ಯಜಮಾನನು ಮನೆಯಲ್ಲಿರುವನೆಂದು ತಿಳಿದೊಡನೆ ಅವನು ಮಿತಿಮೀರಿ ಸಂತೋಷಪಟ್ಟು ನೆಟ್ಟಗೆ ಅವನಿದ್ದ ಕೊಠಡಿಗೆ ಹೋದನು.

ಗೋವರ್ಧನರಾಯನು ಆಗ ತಾನೇ ಗುಲಾಬಿಯನ್ನು ಪಿತೃಭಾವದಿಂದ ಮುದ್ದಿಸಿ ಬಿಟ್ಟಿದ್ದನು. ಗುಲಾಬಿಯು ತನ್ನ ಮುದ್ದಿಸಲ್ಪಟ್ಟ ಕೆನ್ನೆಗಳನ್ನು ಒರಸಿಕೊಳ್ಳುತ್ತಾ ಕೊಠಡಿಯಿಂದ ಹೊರಗೆ ಹೋಗುವುದರಲ್ಲಿದ್ದಳು. ಕಣ್ಣಣ್ಣನು ಕೊಠಡಿಯೊಳಗೆ ಒಂದು ನಿಮಿಷಕ್ಕೆ ಮೊದಲು ಹೋಗಿದ್ದರೆ ಎಲ್ಲವೂ ವಿಪರೀತಾವಸ್ಥೆಗೆ ಬರುತ್ತಿತ್ತು. ಅವನಿಗೆ ಕೂಡಲೇ ಹುಚ್ಚು ಹಿಡಿದು ಅವನೇನಾದರೊಂದು ಅನಾಹುತವನ್ನು ಮಾಡುತ್ತಿದ್ದ

ನೆಂಬುದರಲ್ಲಿ ಸಂಶಯವಿದ್ದಿಲ್ಲ. ಆದರೆ ವಿಶ್ವನಾಯಕನಿಗೆ ಎಲ್ಲವೂ ಗೊತ್ತಿದೆಯಲ್ಲವೆ? ಯಾವ ತರದ ವಿಷಮಾವಸ್ಥೆಗಾದರೂ ಎಡೆ ಕೊಡ ಬಾರದೆಂದೇ ಅವನು ಕಣ್ಣನ್ನನು ಆ ಕೊಠಡಿಯೊಳಗೆ ಔಚಿತ್ಯದ ಸಮಯ ದಲ್ಲಿಯೇ ಹೋಗುವಂತೆ ಮಾಡಿದ್ದನು. ಕಣ್ಣನ್ನನಾದರೋ ತನ್ನ ಯಜ ಮಾನನ ಮುಖದಲ್ಲಿರುವ ಸಂತೋಷದ ಚಿಹ್ನೆಗಳನ್ನು ಕಂಡು ಶ್ರೀನಿ ವಾಸನು ಗುಲಾಬಿಯ ಮೇಲೆ ನಡೆಸಿದ ಅಕೃತ್ಯವನ್ನು ಅವನಿಗೆ ತಿಳಿಸಲಿಕ್ಕೆ ಇದೇ ಸುಸಂಧಿಯೆಂದು ತಿಳಿದುಕೊಂಡನು. ಒಮ್ಮೆ ಶ್ರೀನಿವಾಸನನ್ನು ಆ ಮನೆಯಿಂದ ಓಡಿಸಿದರಾಯಿತು, ಆ ಮೇಲೆ ಗುಲಾಬಿಯು ತನ್ನ ಪದರಿನಲ್ಲಿ ಸಹಜವಾಗಿ ಬೀಳುವಳೆಂದು ಅವನು ನಂಬಿಕೊಂಡಿದ್ದನು.

ಗೋವರ್ಧನರಾಯನು ಹಸನ್ಮುಖನಾಗಿ ತನ್ನೊಡನೆ ಕೆಲಸವೇ ನೆಂದು ಕಣ್ಣನ್ನನೊಡನೆ ವಿಚಾರಿಸಿದನು. ಮನಸ್ಸಿನೊಳಗೆ ಅನೇಕ ಮಂಡಿಗೆಗಳನ್ನು ಕಲ್ಪಿಸಿ ತಿನ್ನುತ್ತಿದ್ದ ಕಣ್ಣನ್ನನು ತನ್ನ ನಾರುವ ಗಂಟನ್ನು ಅವನ ಮುಂದೆ ಬಿಚ್ಚತೊಡಗಿದನು........

ಇತ್ತ ಶ್ರೀನಿವಾಸನ ಕೋಪಾಗ್ನಿಯು ಒಂದು ಗಂಟೆಯ ಹಿಂದೆಯೇ ನಂದಿಹೋಗಿ ಈಗ ಅವನು ತನ್ನ ಕೊಠಡಿಯೊಳಗೆ ವಿಚಾರಪರನಾಗಿಯೂ ಖಿನ್ನಮನಸ್ಕನಾಗಿಯೂ ಕುಳಿತಿರುವನು. ಅವನು ಒಂದು ಗಂಟೆಯ ಹಿಂದಿನ ತನ್ನ ವರ್ತನೆಗಾಗಿ ವಿಶೇಷವಾಗಿ ದುಃಖಿಸಿದನು. ಇನ್ನು ತನ್ನ ಕಡುವೈರಿಯಾದ ಕಣ್ಣನ್ನನು ಸುಮ್ಮನಿರುವನೇ? ತಾನು ಮಾಡಿದ ಅಕೃತ್ಯವನ್ನು ಅವನು ಈಗಾಗಲೇ ಗೋವರ್ಧನರಾಯನಿಗೆ ಒಂದಕ್ಕೆ ಹತ್ತು ಕೂಡಿಸಿ ಹೇಳದಿರುವನೇ? ಅಂತಹ ಪ್ರಸಂಗದಲ್ಲಿ ತಾನಾದರೂ ಇದನ್ನು ಅಲ್ಲಗಳೆಯುವುದು ಹೇಗೆ? ಇನ್ನು ಗೋವರ್ಧನರಾಯನನ್ನು ತಲೆಯೆತ್ತಿ ನೋಡುವುದು ಹೇಗೆ? ತನ್ನ ಅಕೃತ್ಯದ ಸಮಾಚಾರವು ಊರಲ್ಲೆಲ್ಲ ಹಬ್ಬುವುದೇ ತಡ, ಆ ಮೇಲೆ ಎಲ್ಲರ ಅವಹೇಳನದಿಂದ ಪಾರಾ ಗುವ ಬಗೆ ಹೇಗೆ? ತನ್ನ ಮಿತ್ರರ ಪರಿಹಾಸ್ಯಕ್ಕೆ ಗುರಿಯಾಗದಿರುವುದು ಹೇಗೆ? ಮುಖ್ಯವಾಗಿ ತನ್ನ ವಿದ್ಯಾರ್ಥಿಯರೊಂದಿಗೆ ಇನ್ನು ಗೌರವ ದಿಂದ ವರ್ತಿಸುವ ಬಗೆ ಹೇಗೆ? ಅವರೆಲ್ಲರೂ ನಾನಾ ವಿಕಾರದ ಎರಡು

ಗೊಂಬೆಗಳನ್ನು ತಮ್ಮ ಪಾಠಪುಸ್ತಕಗಳಲ್ಲಿಯೂ ಶಾಲಾ ಬ್ಲ್ಯಾಕ್ ಬೋರ್ಡುಗಳಲ್ಲಿಯೂ ಬಿಡಿಸಿ ಅವುಗಳೊಂದನ್ನು ಶ್ರೀನಿವಾಸನೆಂದೂ ಮತ್ತೊಂದನ್ನು ಗುಲಾಬಿ ಎಂದೂ ಕರೆದು ಪರಿಹಾಸ್ಯವನ್ನು ಮಾಡುವುದನ್ನು ತಪ್ಪಿಸುವ ಬಗೆ ಹೇಗೆ? ಅಹಾ, ಉಪಾಧ್ಯಾಯ ವೃತ್ತಿಯು ನಿಜವಾಗಿಯೂ ಎಷ್ಟು ಪವಿತ್ರವಾದುದು! ಅಂತಹ ಪವಿತ್ರವಾದ ವೃತ್ತಿಯಲ್ಲಿ ಜೀವನವನ್ನು ಸಾಗಿಸಲಿಕ್ಕೆ ಇನ್ನು ತಾನು ಎಷ್ಟರ ಮಟ್ಟಿಗೆ ಯೋಗ್ಯನು? ಇಲ್ಲ, ಎಷ್ಟು ಮಾತ್ರಕ್ಕೂ ಯೋಗ್ಯನಲ್ಲ! ಆ ಪವಿತ್ರವಾದ ವೃತ್ತಿಯಿಂದ ಕಳಂಕಿತನಾದ ತಾನು ನಿವೃತ್ತಿ ಹೊಂದುವುದೇ ತನ್ನ ಅಕೃತ್ಯಕ್ಕಾಗಿ ತಾನೀಗ ಮಾಡಬೇಕಾದ ಪ್ರಾಯಶ್ಚಿತ್ತವು! ಇವೇ ಮೊದಲಾದ ವಿಚಾರಗಳು ಶ್ರೀನಿವಾಸನ ತಲೆಯಲ್ಲಿ ತುಂಬಿಹೋದುವು. ಸ್ವಲ್ಪ ಸಮಯದಲ್ಲಿಯೇ ಅವನು ತನ್ನ ನಿರ್ಧಾರವನ್ನು ಮಾಡಿದನು. ಒಂದು ನೋಟ್‌ಪೇಪರನ್ನು ತೆಗೆದು ಆ ಶಾಲೆಯ ತನ್ನ ಕೆಲಸಕ್ಕೆ ರಾಜಿನಾಮೆಯನ್ನು ಬರೆಯಲು ಉದ್ಯುಕ್ತನಾದನು.

ಅವನು ಅದನ್ನು ಬರೆದು ಪೂರೈಸುವಷ್ಟರೊಳಗೆ ಗೋವರ್ಧನರಾಯನು ಅವನ ಕೊಠಡಿಗೆ ಬಂದೇ ಬಿಟ್ಟನು. ಶ್ರೀನಿವಾಸನು ವಿನಯದಿಂದ ಎದ್ದುಬಿಟ್ಟನು. ಆದರೆ ತಲೆಯನ್ನೆತ್ತಿ ಗೋವರ್ಧನರಾಯನನ್ನು ನೋಡಲು ಅವನಿಗೆ ಧೈರ್ಯ ಬರಲಿಲ್ಲ. ಗೋವರ್ಧನರಾಯನು ಹೇಳಬಹುದಾದ ಯಾವ ಮಾತನ್ನಾದರೂ ಶಾಂತತೆಯಿಂದಲೇ ಕೇಳುವೆನೆಂದು ಮಾತ್ರ ಮನಸ್ಸಿನಲ್ಲಿಯೇ ನಿರ್ಧರಿಸಿದನು.

'ನೋಡಿದೆಯಾ, ಶ್ರೀನಿವಾಸಾ!' ಎಂದು ಗೋವರ್ಧನರಾಯನು ಪ್ರಾರಂಭಿಸಿದನು, 'ಕಣ್ಣಿನ್ನನ ಉದ್ಧಟತನವನ್ನು? ನಿನ್ನ ವಿಷಯವಾಗಿ ಏನೇನೆಲ್ಲ ಅರ್ಥವಿಲ್ಲದ ಚಾಡಿಯನ್ನು ನನ್ನೊಡನೆ ಹೇಳಲಿಕ್ಕೆ ಪ್ರಾರಂಭಿಸಿದನು! ನೀನು ಗುಲಾಬಿಯನ್ನು ಚುಂಬಿಸಿದೆಯಂತೆ. ಆದರೆ ನಾನು ಆ ಸೊಟ್ಟಮೋರೆಯವನ ಮಾತನ್ನು ಕೇಳುವೆನೇ? ಅವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ನಾನೀಗಾಗಲೇ ಕೊಟ್ಟು ಬಂದಿದ್ದೇನೆ. ಕುತ್ತಿಗೆಗೆ ಕೈ ಹಾಕಿ ಹೊರ ಅಟ್ಟಿದ್ದೇನೆ. ಅವನು ಗುಲಾಬಿಯನ್ನು ಅನೇಕ ವಿಧದಿಂದ

ಪೀಡಿಸುತ್ತಿದ್ದನೆಂದೂ ನಾನೀಗ ಅವಳ ಬಾಯಿಂದ ಕೇಳಿದೆ. ಪಾಪದ ಹುಡುಗಿ, ಚಿಕ್ಕಂದಿನಿಂದ ಇಲ್ಲೇ ಬೆಳೆದವಳು! ಆಹಾ, ಅವನಿಗೆ ಬಂದ ಧೈರ್ಯವೇ? ಅವನನ್ನು ಶಾಲೆಯ ಕೆಲಸದಿಂದ ನಿವೃತ್ತಮಾಡಬೇಕೆಂದೂ ನಿಶ್ಚೈಸಿದ್ದೇನೆ....ಆ ನಾ..ಂಡೆ..ಸೆಯು ಸಾಯಲಿ! ನಾನೊಂದು ಸಂತೋಷದ ಸುದ್ದಿಯನ್ನು ನಿನಗೆ ತಿಳಿಸಲು ಬಂದಿರುವೆನು. ಇಗೋ, ಇಲ್ಲಿ ನೋಡು!' ಎಂದು ಗೋವೆಯ ಸೋಡ್ತಿಯಲ್ಲಿ ತನಗೆ ಸಿಕ್ಕಿದ ಬಹುಮಾನವನ್ನು ತಿಳಿಸಿದ ತಂತಿವಾರ್ತೆಯನ್ನು ಶ್ರೀನಿವಾಸನ ಮುಂದಿಟ್ಟನು.

ಶ್ರೀನಿವಾಸನ ಅಕೃತ್ಯದ ಚರಿತ್ರೆಯನ್ನು ನಿಮಗೆ ಹೇಳಿ ಮುಗಿಸಿದುದಾಯಿತು ಆದರೆ ನನ್ನ ಮನಸ್ಸಿನಲ್ಲಿದ್ದುದನ್ನು ನಿಜವಾಗಿ ಹೇಳುವುದಾದರೆ ಅವನ ಅಕೃತ್ಯವು ಅವನು ಗುಲಾಬಿಯನ್ನು ಚುಂಬಿಸಿದ್ದುದರಲ್ಲಿ ಇರಲಿಲ್ಲ; ಅವನು ಕಣ್ಣನ್ನನನ್ನು ಕೋಪಾಗ್ನಿಯಿಂದ ತನ್ನ ಕೊಠಡಿಯ ಹೊರಗೆ ಒದೆದುದರಲ್ಲಿಯೂ ಇರಲಿಲ್ಲ. ಅವನು 'ವೀರಕೇಸರಿ'ಯಲ್ಲಿ ಬರೆದ 'ನಿಶ್ಚಯತಾಂಬೂಲ'ದಂತಹ ತಿರುಳಿಲ್ಲದ ಅನೇಕಾನೇಕ ಕಥೆಗಳನ್ನು ಬರೆದು ನಮ್ಮ ಬಡ ವಾಚಕವೃಂದವನ್ನು ಪೀಡಿಸುವುದೇ ಅವನ ಅತಿ ದೊಡ್ಡದಾದ ಅಕೃತ್ಯವೆಂದು ನನ್ನ ಮತ. ಆದರೆ ನಿಮ್ಮ ಅಭಿಪ್ರಾಯವು ಬೇರೆ ಇರಬಹುದು.



# ಚಿಕ್ಕ ರಾಮು ಅಜ್ಜಿಗೆ ಹೇಳಿದ ಕಥೆ ... ... ...

'ಮಗು, ರಾಮೂ, ಬಾ, ಸಂಜೆಯಾಯಿತು. ನಿನಗೊಂದು ಕಥೆಯನ್ನು ಹೇಳುತ್ತೇನೆ.'

'ಬೇಡ, ಅಜ್ಜೀ. ಈಹೊತ್ತು ನಾನೇ ನಿನಗೊಂದು ಕಥೆಯನ್ನು ಹೇಳುವೆನು.'

'ಯಾರ ಕಥೆ, ಅಪ್ಪಾ?'

'ನನ್ನದೇ ಕಥೆ, ಅಜ್ಜೀ!'

'ಹಾಗಾದರೆ ಹೇಳು ಮಗು, ಕಿವಿಗೊಟ್ಟು ಕೇಳುತ್ತೇನೆ.'

'ಅಜ್ಜೀ, ನೀನು ಇವತ್ತು 'ಹುಡಿಮುಲ್ಲರ ಅಂಗಡಿಯಿಂದ ಸ್ವಲ್ಪ ಹುಡಿಯನ್ನು ತೆಗೆದುಕೊಂಡು ಬಾರೆ' ಎಂದು ಒಂದು ಪಾವಾಣೆಯನ್ನು ಕೊಟ್ಟಿದ್ದೆಯಷ್ಟೇ?—'

'ಹೌದು, ಮಗು. ನೀನು ಈ ಸಾರಿ ಹುಡಿಯನ್ನು ತಂದಿದ್ದೀ–'

'ಅಜ್ಜೀ, ಕಥೆಯನ್ನು ಕೇಳುವಾಗ್ಗೆ ಮಧ್ಯದಲ್ಲಿ ಮಾತು ಬೆಳೆಯಿಸಬಾರದು; ಸುಮ್ಮನಿರಬೇಕು.... ನೀನು ಕೊಟ್ಟ ಪಾವಾಣೆಯನ್ನು ತೆಗದುಕೊಂಡು ಹುಡಿಮುಲ್ಲರ ಅಂಗಡಿಗೆ ಹೋಗುತಿದ್ದೆನು. ದಾರಿಯಲ್ಲಿ ನೆರೆಮನೆಯ ಲಕ್ಷ್ಮಮ್ಮ ಸಿಕ್ಕಿದಳು. ಅವಳ ಹತ್ತಿರ ಒಂದು ಚಲೋದಾದ ಕೋಳಿಮೊಟ್ಟೆಯಿತ್ತು. ಆಗ ಅವಳು, 'ರಾಮೂ, ಈ ಕೋಳಿಮೊಟ್ಟೆಯನ್ನು ನಿನಗೆ ಕೊಡುತ್ತೇನೆ. ಅದನ್ನು ಭದ್ರವಾಗಿಡು. ಐದು ದಿವಸಗಳ ನಂತರ ಅದರಿಂದ ಒಂದು ಚಲೋದಾದ ಪಂಚವರ್ಣದ ಗಿಳಿಯು ಹೊರಗೆ ಬರುವುದು' ಎಂದು ತತ್ತಿಯನ್ನು ನನಗೆ ಕೊಟ್ಟಳು.

'ಹುಚ್ಚು ಮಗು! ಕೋಳಿಮೊಟ್ಟೆಯಿಂದ ಗಿಳಿಯು ಬರುವುದೇ?'

'ಅಜ್ಜೀ, ನೀನು ಕಥೆಯನ್ನು ಹೇಳುವಾಗ್ಗೆ ನಾನು ಮಾತ್ರ ಮಾತ ನಾಡಬಾರದು, ಸದ್ದುಮಾಡಬಾರದು, ಪ್ರಶ್ನೆ ಕೇಳಬಾರದು. ಬಂಡೆಕಲ್ಲಿನಿಂದ ಅಹಲ್ಯೆ ಬಂದಳೆಂದು ನೀನು ಹೇಳುವಾಗ್ಗೆ ನಾನು ಸುಮ್ಮನಿರಬೇಕು; ರಾವಣನು ಸೀತೆಯನ್ನು ಕೊಂಡುಹೋದನು ಎಂದು ನೀನು ಹೇಳುವಾಗ್ಗೆ 'ಅದು ನಿಜವಾಗಿದ್ದರೆ ರಾವಣನು ಅಮ್ಮನನ್ನು ಏತಕ್ಕೆ ಕೊಂಡು ಹೋಗುವುದಿಲ್ಲ?' ಎಂದು ನಾನು ಕೇಳಬಾರದು. ನೀನು ಮಾತ್ರ.... '

'ಇಲ್ಲ, ಮಗು, ಇನ್ನು ಮಾತಾಡುವುದಿಲ್ಲ, ನಿನ್ನ ಕಥೆಯನ್ನು ಮುಂದರಿಸು; ಕಿವಿಗೊಟ್ಟು ಕೇಳುತ್ತೇನೆ.'

'ನಾನು ಆ ಪೊಟ್ಟಣವನ್ನು ಬಹಳ ಭದ್ರತೆಯಿಂದ ಹಿಡಿದುಕೊಂಡು ಹುಡಿಮಲ್ಯರ ಅಂಗಡಿಯನ್ನು ಸಮೀಪಿಸಿದೆನು. 'ಮಲ್ಯರೇ, ಅಜ್ಜಿಗೋಸ್ಕರ ಸ್ವಲ್ಪ ಹುಡಿಯನ್ನು ಕೊಡಿ' ಎಂದು ಅವರ ಕೈಯಲ್ಲಿ ನೀನು ಕೊಟ್ಟ ಪಾವಾಣೆಯನ್ನು ಕೊಟ್ಟೆನು. ಅಷ್ಟರೊಳಗೆ, ಅಜ್ಜೀ ಏನು ಹೇಳಲಿ? ನಾನು ಅಷ್ಟು ಭದ್ರತೆಯಿಂದ ತಂದ ಕೋಳಿಪೊಟ್ಟಣವು ನನ್ನ ಕೈಯಿಂದ ಫಕ್ಕನೆ ಮಾಯವಾಯಿತು. ಎಲ್ಲಿ ನೋಡಿದರೂ ಸಿಗಲಿಲ್ಲ. ಇನ್ನು ನನಗೆ ಪಂಚವರ್ಣದ ಗಿಳಿಯೆಲ್ಲಿಯದು ಎಂದು ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದೆನು.... '

'ಹುಚ್ಚು ಮಗು!'

'.... ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದೆನು. ಅಲ್ಲಿದ್ದವರೆಲ್ಲರೂ ನನಗೋಸ್ಕರ ಬಹಳವಾಗಿ ಕನಿಕರಪಟ್ಟರು. ಕೊನೆಗೆ ಹುಡಿಮಲ್ಯರು ಅಲ್ಲಿ ಓಡಾಡುತ್ತಿರುವ ಒಂದು ಇಲಿಯ ಬೆನ್ನಿನ ಮೇಲೆ ಒಂದು ಗುಂಡುಸೂಜಿಯನ್ನು ನೀಟಾಗಿ ಹೂತಿಟ್ಟು, 'ಮಗೂ, ಅಳಬೇಡ. ಈ ಸೂಜಿಯ ಮೇಲಾದರೂ ಹತ್ತಿಕೊಂಡು ನಿನ್ನ ತತ್ತಿಯು ಎಲ್ಲಿರುವುದೆಂದು ನೋಡು' ಎಂದರು. ನಾನು ಕೂಡಲೇ ಆ ಸೂಜಿಯನ್ನು ಹತ್ತಲಿಕ್ಕೆ ಪ್ರಾರಂಭಿಸಿದೆನು. ಆದರೆ, ಅಜ್ಜೀ, ಹೇಳುವುದೇನು? ನಾನು ಆ ಸೂಜಿಯ ಮೇಲೆ ಎಷ್ಟು ಹತ್ತಿದರೂ ಆ ಸೂಜಿಯ ತಲೆಯು ಕಾಣ

ಬರಲೇ ಇಲ್ಲ. ಆದರೂ ನಾನು ಸೂಜಿಯನ್ನು ಹತ್ತುವುದನ್ನು ಬಿಡಲಿಲ್ಲ. ಕಟ್ಟಕಡೆಗೆ ಹೇಗಾದರೂ ಮಾಡಿ ಸೂಜಿಯ ತಲೆಯವರೆಗೆ ಹತ್ತಿಕೊಂಡು, ಅದರ ಮೇಲೆ ನಿಂತು, ನಾನು ಕಳಕೊಂಡ ತತ್ತಿಗಾಗಿ ಸುತ್ತುಮುತ್ತಲೂ ನೋಡಿದೆನು.... '

' ತತ್ತಿಯು ಕಂಡುಬಂತೇ ? '

' ತತ್ತಿಯು ಕಂಡುಬರಲಿಲ್ಲ. ಆದರೆ, ಅಜ್ಜೀ, ಸೂಜಿಯ ತಲೆಯ ಮೇಲೆ ನಿಂತು ಸುತ್ತುಮುತ್ತಲೂ ನೋಡುವಾಗ್ಗೆ, ಹತ್ತುಮೈಲು ದೂರ ದಲ್ಲಿ ಒಂದು ಹೊಲವು ಕಂಡುಬಂತು. ಆ ಹೊಲದಲ್ಲಿ ಒಂದು ಹಂಚಿನ ಮಾಳಿಗೆಯ ಮನೆಯಿರುವುದನ್ನು ನೋಡಿದೆನು. ಆ ಮನೆಯಲ್ಲಿ ಒಂದು ಕೋಣೆಯಿತ್ತು. ಆ ಕೋಣೆಯ ಒಂದು ಮೂಲೆಯಲ್ಲಿ ಒಂದು ಚಲೋ ಪಂಜರವು ನೇತಾಡುವುದನ್ನು ಕಂಡೆನು. ಅಜ್ಜೀ, ಆ ಪಂಜರದಲ್ಲಿಯೇ ನನ್ನ ಕೋಳಿಮೊಟ್ಟೆಯಿಂದ ಹೊರಬಂದ ಪಂಚವರ್ಣದ ಗಿಳಿಯು ಸನ ಗಾಗಿ ಕಾದುಕೊಂಡಿತ್ತು ! ಆಗ ನಾನು ಪಟ್ಟ ಸಂತೋಷವನ್ನು ಹೇಗೆ ತಿಳಿಸಲಿ !....

' ಕೂಡಲೇ ಸೂಜಿಯಿಂದ ನೆಲದ ಮೇಲೆ ಧುಮುಕಿದೆನು. ' ಅಜ್ಜಿ ಗೋಸ್ಕರ ಹುಡಿಮಲ್ಕುರು ತಯಾರಿಸಿದ ಹುಡಿಕಟ್ಟನ್ನು ಮತ್ತೆ ತೆಗೆದು ಕೊಂಡು ಹೋಗುವೆನು. ಈಗ ಹೇಗಾದರೂ ಮಾಡಿ ನನ್ನ ಗಿಳಿಯನ್ನು ಮುಂಚೆ ತೆಕ್ಕೊಂಡು ಬರಬೇಕು ' ಎಂದು ನನ್ನಷ್ಟಕ್ಕೇ ಹೇಳಿಕೊಂಡು ಅಲ್ಲಿ ಹಾರಾಡುವ ಒಂದು ಚಿಟ್ಟೇಹುಳದ ಬೆನ್ನಿನ ಮೇಲೆ ಕೂಡಲೇ ಹಾರಿ ಆ ಹೊಲಕ್ಕೆ ಒಂದಿಳಿದೆನು. ಆಗ ಆ ಹೊಲದ ರೈತನನ್ನು ನೋಡಿ, 'ಅಯ್ಯಾ, ನೀವು ಸಾಕಿದ ಗಿಳಿ ನನ್ನದು. ನನ್ನ ಕೋಳಿಮೊಟ್ಟೆಯಿಂದ ಹೊರಬಂದ ಗಿಳಿಯು. ಆದುದರಿಂದ ಅದನ್ನು ನನಗೆ ಬೇಗನೇ ಕೊಟ್ಟುಬಿಡಿ ' ಅಂದೆನು. ಆದರೆ ರೈತನು ಗಿಳಿಯನ್ನು ಕೊಡಲಿಕ್ಕೆ ಒಪ್ಪಲಿಲ್ಲ. ನಾನು ಹಟಹಿಡಿದೆನು, ಬೇಡಿದೆನು. ಆದರೂ ಒಪ್ಪಲಿಲ್ಲ. ಆಗ ನಾನು ಬಾಯಿಯನ್ನು ಉದ್ದ ವಾಗಿ ತೆರೆದು, ' ಊಂ ' ಎಂದು ಗಟ್ಟಿಯಾಗಿ ಅಳಲಿಕ್ಕೆ ಪ್ರಾರಂಭಿಸಿದೆನು. ಇದನ್ನು ಕೇಳಿ ರೈತನು ಗಿಳಿಯನ್ನು ನನಗೆ ಕೊಟ್ಟನು. ಗಿಳಿಯನ್ನು

ನಾನು ಕೇಳಿದಾಕ್ಷಣವೇ ಕೊಡದೆ ಇದ್ದುದರಿಂದ ನನಗೆ ಸಿಟ್ಟಾಗಿತ್ತು. ರೈತನನ್ನು ನೋಡಿ, 'ನೀವು ನನ್ನ ಗಿಳಿಯನ್ನು ಸಾಕಿ ಅದರಿಂದ ಇಷ್ಟರ ತನಕ ಯಥೇಷ್ಟ ಆನಂದವನ್ನು ಪಡೆದಿದ್ದೀರಿ. ಆದುದರಿಂದ ನೀವು ನನಗೆ ನೂರು ಸೇರು ಬತ್ತವನ್ನಾದರೂ ಕೊಡಬೇಕು.' ಎಂದು ಹಟಹಿಡಿದೆನು. ಬಹಳ ಚರ್ಚೆಯಾದ ಮೇಲೆ ರೈತನು ಇದಕ್ಕೂ ಸಮ್ಮತಿಸಿ, ಸನಗೋಸ್ಕರವಾಗಿ ನೂರು ಸೇರು ಬತ್ತವನ್ನು ಅಳತೆ ಮಾಡಿ ನನ್ನ ಬದಿಗೆ ರಾಶಿಯಾಗಿಟ್ಟನು.....

'ಆದರೆ, ನೂರು ಸೇರು ಬತ್ತವನ್ನು ಮನೆಗೆ ಹೇಗೆ ತರಲಿ, ಅಜ್ಜೀ? ನನ್ನ ಹತ್ತಿರ ಗೋಣೀಚೀಲವೇನೂ ಇರಲಿಲ್ಲ. ಆದರೆ ಆಗ ತಾನೇ ನನ್ನ ಕಾಲಿಗೊಂದು ದೊಡ್ಡ ನೊಳ್ಳೆಯು ಕಚ್ಚಿ ಹಿಡಕೊಂಡಿತ್ತು. ಅದನ್ನು ಕೂಡಲೇ ಒಂದು ಪೆಟ್ಟಿನಿಂದ ಕೆಡವಿ, ಅದರ ಬೆನ್ನಿನ ಚರ್ಮದಿಂದ ಒಂದು ಚೀಲವನ್ನು ಮಾಡಿದೆನು. ಮತ್ತು ನನ್ನ ನೂರು ಸೇರು ಬತ್ತವನ್ನೆಲ್ಲಾ ಆ ಚೀಲದಲ್ಲಿ ಹಾಕಿ, ಅದನ್ನು ಗಿಳಿಯ ಬೆನ್ನಿನ ಮೇಲಿಟ್ಟು, ಗಿಳಿಯ ಕುತ್ತಿಗೆಗೆ ಒಂದು ಹಗ್ಗವನ್ನು ಹಾಕಿ, ಅದನ್ನು ಹಿಡಿದುಕೊಂಡು ಇಲ್ಲಿಗೆ ಪ್ರಯಾಣವನ್ನು ಬೆಳೆಸಿದೆನು.'

'ಕಥೆ ಮುಗಿಯಿತೇ?'

'ಇಲ್ಲ, ಅಜ್ಜೀ, ಇಲ್ಲಿಯೇ ಮುಗಿಯುತ್ತಿತ್ತು. ಆದರೆ ಮಾಡುವುದೇನು? ಹೀಗೆ ಐದು ಮೈಲು ಬರುತ್ತಲೇ ಗಿಳಿಯ ಬೆನ್ನಿಗೆ ಒಂದು ತೀಕ್ಷ್ಣವಾದ ನೋವು ಹಿಡಿಯಿತು. ಅಲ್ಲಿಯ ವರೆಗೆ ಬರಲಿಕ್ಕೆ ನಮಗೆ ಎರಡು ದಿನಗಳು ತಾಗಿದ್ದುವು. ಹತ್ತಿರವಿದ್ದ ಒಂದು ಹಳ್ಳಿಯನ್ನು ಮುಟ್ಟಲಿಕ್ಕೆ ಇನ್ನೂ ಒಂದು ಮೈಲು ಇತ್ತು. ಆದರೆ ಗಿಳಿಯು ನೋವಿನಿಂದ ಒಂದು ಹೆಜ್ಜೆಯನ್ನಾದರೂ ಮುಂದಿಡಲಾರದೆ ಹೋಯಿತು. ಅಷ್ಟರೊಳಗೆ ರಾತ್ರಿಯಾದುದರಿಂದ ಅಲ್ಲಿಯೇ ಉಳಕೊಳ್ಳಬೇಕಾಯಿತು. ಗಿಳಿಯು ಬೆನ್ನಿನ ನೋವಿನಿಂದ ಅಲ್ಲಿಯೇ ಹೊರಳಾಡುವುದಕ್ಕೆ ಪ್ರಾರಂಭಿಸಿತು. ಆಗ ಅಲ್ಲಿ ಹಾದುಹೋಗುತ್ತಿದ್ದ ಕೆಲವು ಹಳ್ಳಿಯ ಜನರು ಗಿಳಿಯು ಪಡುತ್ತಿದ್ದ ಸಂಕಟವನ್ನು ನೋಡಿ, 'ಒಂದು ಮಾವಿನ ಗೆರಟೆಯನ್ನು ತಂದು, ಅದನ್ನು

ಸುಟ್ಟು, ಅದರ ಬೂದಿಯಿಂದ ಗಿಳಿಯ ಬೆನ್ನನ್ನು ಚೆನ್ನಾಗಿ ಒರಸು, ಆಗ ಗಿಳಿಯ ನೋವು ಉಪಶಮನವಾಗುವುದು' ಎಂದು ನನಗೆ ಹೇಳಿದರು. ನಾನು ಅವರು ಹೇಳಿದ ಹಾಗೆಯೇ ಮಾಡಿ, ಆ ರಾತ್ರಿ ಗಿಳಿಯೊಂದಿಗೆ ಅಲ್ಲಿಯೇ ಮಲಗಿದೆನು.....

'ಮಾರನೇ ದಿನ ಬೆಳಗ್ಗೆ ಎದ್ದು ನೋಡುವಾಗ್ಗೆ ಏನು ಹೇಳಲಿ? ಗಿಳಿಯ ಬೆನ್ನಿನ ಮೇಲೆ ಒಂದು ಅದ್ಭುತವಾದ ಮಾವಿನ ಮರವು ಬೆಳೆದಿತ್ತು. ಮರದಲ್ಲೆಲ್ಲಾ ಲೆಕ್ಕವಿಲ್ಲದ ಮಾವಿನ ಹಣ್ಣುಗಳು ಗೊಂಚಲು ಗೊಂಚಲುಗಳಾಗಿ ನೇತಾಡುತಿದ್ದುವು. ಮತ್ತು ಪಕ್ಕದಲ್ಲಿರುವ ಹಳ್ಳಿಯ ಹೆಣ್ಣು-ಗಂಡು ಹುಡುಗರೆಲ್ಲಾ ಮರದ ಸುತ್ತುಗೂಡಿ ಕ್ಷಣಮಾತ್ರ ನಿಲ್ಲಿಸದೆ ಹಣ್ಣಿಗಾಗಿ ಕಲ್ಲುಗಳನ್ನು ಎಸೆಯುತ್ತಾ ನಿಂತಿದ್ದರು. ನಾನು ಕೂಡಲೇ ಆ ಮರವನ್ನು ಹತ್ತಿ ಒಂದು ಕೊಂಬೆಯ ಮೇಲೆ ಬಂದು ನಿಂತೆನು. ಹುಡುಗರು ಹಣ್ಣಿಗೋಸ್ಕರ ಬಿಸಾಡಿದ ಕಲ್ಲುಗಳು ಆ ಕೊಂಬೆಯ ಮೇಲೆ ನಮ್ಮ ಅಂಗಳದಷ್ಟು ದೊಡ್ಡ ಸ್ಥಳವನ್ನು ಆವರಿಸಿ ಕೊಂಡಿದ್ದುವು. ಇದನ್ನು ನೋಡಿ ಒಬ್ಬ ಕಲ್ಲುಕುಟ್ಟಿಗನನ್ನು ಕರೆದು ತಂದು ಅವನಿಂದ ಆ ಕಲ್ಲುಗಳನ್ನೆಲ್ಲ ಪುಡಿಪುಡಿಮಾಡಿಸಿದೆನು. ಹೀಗೆ ಮಾಡಿಸಿದ್ದರಿಂದ ನನಗೆ ಆ ಕೊಂಬೆಯ ಮೇಲೆ ಬೀಜ ಬಿತ್ತಲಿಕ್ಕೆ ಯೋಗ್ಯವಾದ ಮತ್ತು ಧಾರಳವಾದ ಸ್ಥಳ ಸಿಕ್ಕಿತು. ಆದುದರಿಂದ ಕೂಡಲೇ ಅಲ್ಲಿ ಕುಂಬಳಕಾಯಿಯ ಮತ್ತು ಕಲ್ಲಂಗಡಿಯ ಬೀಜವನ್ನು ಬಿತ್ತಿ ಆ ರಾತ್ರಿಯನ್ನು ಅಲ್ಲಿಯೇ ಕಳೆದೆನು..

'ಬೆಳಗ್ಗೆ ಎದ್ದು ನೋಡುವಾಗ್ಗೆ ಎಲ್ಲೆಲ್ಲಿಯೂ ಬೆಳೆದ ಬಲಿತ ಕುಂಬಳಕಾಯಿ ಮತ್ತು ಕಲ್ಲಂಗಡಿಗಳೇ! ಹಸಿವೆಯೂ ಬಾಯಾರಿಕೆಯೂ ಆಗಿದ್ದುದರಿಂದ ಅವುಗಳಲ್ಲಿ ಅತಿ ದೊಡ್ಡದಾದ ಒಂದು ಕಲ್ಲಂಗಡಿಯನ್ನು ಆರಿಸಿ ತೆಗೆದು ಅದನ್ನು ಹೋಳುಹೋಳಾಗಿ ಮಾಡುವುದಕ್ಕೆ ಪ್ರಾರಂಭಿಸಿದೆನು. ಆದರೆ ನನ್ನ ದುರದೃಷ್ಟದಿಂದ ಅದನ್ನು ಎರಡು ಹೋಳಾಗಿ ಮಾಡುವಷ್ಟರಲ್ಲಿಯೇ ನನ್ನ ಚೂರಿಯು ಆ ಕಲ್ಲಂಗಡಿಯ ಒಂದು ಹೋಳಿನಲ್ಲಿ ಫಕ್ಕನೆ ಕೈಜಾರಿ ಬಿತ್ತು. ಕೂಡಲೇ ನನ್ನ ಮೈಮೇಲಿದ್ದ ವಸ್ತ್ರಗಳನ್ನೆಲ್ಲ ತೆಗೆದು ಒಂದು ಒದಿಗಿಟ್ಟು, ಚೂರಿಗಾಗಿ ಆ ಹಣ್ಣಿನ ಹೋಳಿನಲ್ಲಿ

ಧುಮುಕಿದೆನು. ಆದರೆ ಬಹಳ ಹೊತ್ತು ಆ ಹೋಳಿನಲ್ಲಿ ಈಜಾಡಿ ತೇಗುವಮುಳುಗಾದರೂ ಚೂರಿಯು ನನಗೆ ಸಿಗಲಿಲ್ಲ. ಬಹಳ ಆಯಾಸ ವಾಯಿತು. ಚೂರಿಯ ಆಸೆಯನ್ನೇ ಬಿಟ್ಟೆನು. ಸುರಕ್ಷಿತವಾಗಿ ದಡವನ್ನು ಮುಟ್ಟಿದರೆ ಸಾಕೆಂದು ಯೋಚಿಸಿದೆನು. ಕಟ್ಟಕಡೆಗೆ ಹೇಗಾದರೂ ಮಾಡಿ ಬಹಳ ಆಯಾಸಪಟ್ಟು ಸುರಕ್ಷಿತವಾಗಿ ದಡವನ್ನು ಮುಟ್ಟಿದೆನು. . . .

ಅಲ್ಲಿ ನೋಡಿದರೆ ಅದೊಂದು ಬಹಳ ಚಲೋದಾದ ನಗರವೆಂದು ಕಂಡುಬಂತು. ಎಲ್ಲೆಲ್ಲಿಯೂ ಮೋಟರ್‌ಕಾರುಗಳು ಮತ್ತು ಮೋಟರ್ ಬಸ್ಸುಗಳು ಮಾರ್ಗದ ಧೂಳಿಯನ್ನೆಲ್ಲಾ ದಿಕ್ಕಾಪಾಲಾಗಿ ಚದರಿಸು ತಿದ್ದುವು. ಎಲ್ಲಿ ನೋಡಿದರೂ ಮನೋಹರವಾದ ವಸ್ತುಗಳಿರುವ ಅಂಗಡಿ ಗಳೇ. ಹೀಗೆಯೇ ಅಲ್ಲಿರುವ ನಾನಾ ಚೋದ್ಯದ ವಸ್ತುಗಳನ್ನೆಲ್ಲಾ ನೋಡುತ್ತಾ ಇಡೀ ಪ್ರಾತಃಕಾಲವನ್ನು ಕಳೆದೆನು. ಕಟ್ಟಕಡೆಗೆ ಮೈಯಲ್ಲಿ ಆಯಾಸವೂ ಹೊಟ್ಟೆಗೆ ಹಸಿವೆಯೂ ಆದುವು. ಕಣ್ಣಿನಲ್ಲಿ ನಿದ್ದೆಯೂ ಹಿಡಿಯಿತು. ಬೇಸರದಿಂದ 'ಆ—ಆ—ಆ. . ಹಾ!' ಎಂದು ದೊಡ್ಡ ಸ್ವರ ದಿಂದ ಬಾಯಾಕಳಿಸಿದೆನು. ಆಕಳಿಸುವುದಕ್ಕೆ ಬಾಯಿಯನ್ನು ದೊಡ್ಡ ದಾಗಿ ತೆರೆದು ಮುಚ್ಚುವಷ್ಟರೊಳಗೆ ಎರಡು ಖಂಡಿ ಧೂಳಿಯೂ, ಎರಡು ಮೋಟರ್‌ಕಾರುಗಳೂ, ಒಂದು ಮೋಟರ್‌ಬಸ್ಸೂ, ಮೂರು ಎತ್ತಿನ ಗಾಡಿಗಳೂ, ಹತ್ತು ಬೈಸಿಕಲ್ಲುಗಳೂ, ಮೂರು ಮಂದಿ ಮುದುಕಿಯರೂ, ಆರು ಕುಂಟರೂ, ನಾಲ್ಕು ಮಂದಿ ಬೇಡುವವರೂ, ಬೀದಿಯಲ್ಲಿ ಜಗಳಾ ಡುತ್ತಿದ್ದ ಒಂಭತ್ತು ಮಂದಿ ಹುಡುಗರೂ ಹಠಾತ್ತಾಗಿ ನನ್ನ ಬಾಯಿ ಯೊಳಗೆ ನುಸುಳಿಬಿಟ್ಟರು. . . .

'ಹೊಟ್ಟೆಯೊಳಗೆ ಇಷ್ಟೆಲ್ಲವಿದ್ದರೂ ನನ್ನ ಹಸಿವೆಯು ತೀರಿದಂತೆ ಕಂಡುಬರಲಿಲ್ಲ. ಆದುದರಿಂದ ಹತ್ತಿರದಲ್ಲಿದ್ದ ಒಂದು ಮಿಠಾಯಿ ಅಂಗ ಡಿಗೆ ಹೋಗಿ ಸ್ವಲ್ಪ ತಿಂಡಿಯನ್ನು ಕೇಳಿದೆನು. ಆಗ ಅಂಗಡಿಕಾರನು ಗಿಲಾವು ತೀರಾ ಹೋದ ಒಂದು ಕಬ್ಬಿಣದ ಬಟ್ಟಲಿನಲ್ಲಿ ಪಾಯಸವನ್ನು ಹಾಕಿ ನನ್ನ ಮುಂದಿಟ್ಟನು. ಪಾಯಸವು ಆ ಬಟ್ಟಲಿನಲ್ಲಿ ನಿಜವಾಗಿಯೂ ಇತ್ತೆಂದು ಒಂದು ಭೂತಗನ್ನಡಿಯಿಂದ ನೋಡಿ ಸಮಾಧಾನಪಟ್ಟೆನು. ಕೂಡಲೇ ಪಾಯಸಕ್ಕೋಸ್ಕರ ಬಟ್ಟಲನ್ನು ನೆಕ್ಕಲಿಕ್ಕೆ ಪ್ರಾರಂಭಿಸಿದೆನು.

ಪಾಯಸವು ಅಷ್ಟು ಚೆನ್ನಾಗಿತ್ತು ! ನಾನು ಪಾಯಸಕ್ಕೋಸ್ಕರ ಬಟ್ಟಲಿನ ಅಡಿಯನ್ನು ನೆಕ್ಕುವಾಗಲೆಲ್ಲ ಅದು ತುಂಡುತುಂಡಾಗಿ ಹೋದುದು ನನಗೆ ಬಹಳ ಸಮಯದ ವರೆಗೆ ತಿಳಿಯಲೇ ಇಲ್ಲ !....

'ಅದರ ಒಂದು ತುಂಡನ್ನು ನಾನು ಹೀಗೆಯೆ ನೆಕ್ಕುವಾಗ ಅದರಲ್ಲಿ ಒಂದು ಕೂದಲಿನ ತುದಿಯನ್ನು ಕಂಡೆನು. ಆ ತುದಿಯನ್ನು ಹಿಡಿದು ಕೂದಲನ್ನು ಎಳೆದು ಬಿಸಾಡಲಿಕ್ಕೆ ಪ್ರಯತ್ನಿಸಿದೆನು. ಅದು ಸಾಧ್ಯವಾಗಲಿಲ್ಲ. ಆದುದರಿಂದ ಆ ಕೂದಲಿನ ಇನ್ನೊಂದು ತುದಿಯು ಎಲ್ಲಿರಬಹುದೆಂದು ಆಲೋಚಿಸಿದೆನು. ಹೆಚ್ಚು ಹೊತ್ತು ಕಳೆಯದೆ ಆ ಕೂದಲನ್ನು ಹಿಡಿದುಕೊಂಡು ಅದನ್ನು ಹಿಂಬಾಲಿಸಿ ಹೋದೆನು. ಹೀಗೆ ಎರಡು ಮೈಲು ದೂರ ಹೋಗುತ್ತಲೇ ಆ ಕೂದಲಿನ ಇನ್ನೊಂದು ತುದಿಯೂ ದೊರಕಿತು. ಆದರೆ ಅದಕ್ಕೊಂದು ತೋರವಾದ ಹಗ್ಗವು ಕಟ್ಟಲ್ಪಟ್ಟಿತ್ತು. ಆ ಮೇಲೆ ಆ ಹಗ್ಗವನ್ನು ಹಿಡಿದುಕೊಂಡು ಅದರ ಮಾರ್ಗವಾಗಿಯೇ ಮುಂದೆ ಹೋದೆನು. ಸ್ವಲ್ಪ ದೂರ ಹೀಗೆ ಹೋಗುತ್ತಲೇ ಆ ಹಗ್ಗವು ಏಳು ಅತಿ ದೊಡ್ಡ ಆನೆಗಳನ್ನು ಸಾಲಾಗಿ ಎಳೆದುಕೊಂಡು ಬರುವುದನ್ನು ನೋಡಿದೆನು. ಪ್ರತಿ ಒಂದು ಆನೆಯ ಮೇಲೆಯೂ ಒಬ್ಬ ಮಾವುತನು ಮತ್ತು ಒಬ್ಬ ಅರಸನು ಇದ್ದನು. ಈ ಏಳು ಆನೆಗಳೂ ತಮ್ಮ ತಮ್ಮ ಮಾವುತನನ್ನೂ ಅರಸನನ್ನೂ ಹೊತ್ತುಕೊಂಡು ನನ್ನ ಮುಂದೆ ಸಾಲಾಗಿ ಹೋದುವು.....

'ಏಳನೆಯ ಆನೆಯ ಬಾಲಕ್ಕೆ ಯಾವುದೋ ಒಂದು ಚಿಕ್ಕ ವಸ್ತುವು ಕಟ್ಟಲ್ಪಟ್ಟಂತೆ ತೋರಿತು. ಕೂಡಲೇ ನಾನು ಅದರ ಕಡೆಗೆ ಹಾರಿ ಆನೆಯ ಬಾಲದಿಂದ ಅದನ್ನು ತೆಗೆದುಬಿಟ್ಟೆನು. ಅಜ್ಜೀ, ಆ ಚಿಕ್ಕ ವಸ್ತುವು ಏನಾಗಿತ್ತೆಂದು ಹೇಳಬಲ್ಲೆಯಾ ?'

'ನೀನು ಕಳಕೊಂಡ ಚೂರಿ.'

'ಅಲ್ಲ, ಅಜ್ಜೀ! ಹುಡಿಮುಲ್ಯರು ನಿನಗೋಸ್ಕರವೆಂದು ನನ್ನ ಹಿಂದೆಯೇ ಕಳುಹಿಸಿದ ಪಾವಾಣೆಯ ಹುಡಿಕಟ್ಟು !'

---



“ ಏಳನೆಯ ಆನೆಯ ಬಾಲಕ್ಕೆ ಯಾವುದೋ ಒಂದು ಚಿಕ್ಕ ವಸ್ತು ಕಟ್ಟಲ್ಪಟ್ಟಂತೆ ತೋರಿತು.”

## ನನ್ನ ಭಾವ

ನನಗೊಬ್ಬ ಭಾವನಿರುವನು. ಮದುವೆಯಾದ ಪ್ರತಿಯೊಬ್ಬನಿಗೆ ಒಬ್ಬ ಭಾವನಿರಬೇಕಷ್ಟೇ! ಮದುವೆಯ ಸಮಯದಲ್ಲಿ ಪುರೋಹಿತರಿಲ್ಲ ದಿದ್ದರೂ ಮದುವೆಯಾಗಬಹುದು. ಮದುಮಗಳಿಲ್ಲದಿದ್ದರೂ ಒಂದು ವೇಳೆ ಮದುವೆಯಾಗಬಹುದೊ ಏನೋ! ಆದರೆ ಭಾವನೆಂದು ಒಬ್ಬನಿಲ್ಲ ದಿದ್ದರೆ ಯಾವ ಮದುವೆಯೂ ಆಗಲಾರದೆಂಬುದೇ ನನ್ನ ಅಭಿಪ್ರಾಯವು. ಮದುಮಗಳಿಗೆ ಖಾಸಾ ಅಣ್ಣನಾಗಲಿ ತಮ್ಮನಾಗಲಿ ಇಲ್ಲದೆ ಇದ್ದರೂ ಚಿಂತೆಯಿಲ್ಲ. ಮದುವೆಯ ಸಮಯದಲ್ಲಿ ಭಾವನೊಬ್ಬನು ಇದ್ದೇ ಇರು ವನು. ಮದುವೆಯ ಸಮಾರಂಭಕ್ಕೆ ಅತ್ಯಗತ್ಯವಾದ ಸಾಮುಗ್ರಿಗಳಲ್ಲಿ ಅವನೂ ಒಂದಾಗಿರುವನು. (ಅಥವಾ ಒಬ್ಬನಾಗಿರುವನು. ನಿಮಗೆ ಇಷ್ಟವಿದ್ದ ಹಾಗೆ ಓದಬಹುದು.)

ನನ್ನ ಮದುವೆಯ ವಿಷಯ ಬರೆಯಲಿಕ್ಕೆ ನಾನೀ ಲೇಖನಿಯನ್ನು ಹಿಡಿದುಕೊಳ್ಳಲಿಲ್ಲ. ನನ್ನ ಮದುವೆ ಆಗಿ ಎಷ್ಟೋ ಕಾಲವಾಯಿತು. ಬೇಕಾ ದರೆ ಲೆಕ್ಕಮಾಡಿ ಹೇಳುವೆನು....ಹೌದು, ಇಂದಿಗೆ ಹತ್ತು ವರ್ಷಗಳಾ ದುವು. ಈ ಹತ್ತು ವರ್ಷಗಳಲ್ಲಿ ನನಗೆ ಎಷ್ಟೋ ಸಂಗತಿಗಳು ಸಂಭವಿಸಿವೆ. ಎಷ್ಟೋ ತರದ ಅನುಭವವನ್ನು ಸಂಪಾದಿಸಿದ್ದೇನೆ. ಆದರೆ ಇದೆಲ್ಲವೂ ಸಧ್ಯಕ್ಕೆ ಒಂದು ಬದಿಗಿರಲಿ. ನನ್ನ ವಿಷಯ ನನ್ನ ಸಧ್ಯದ ಕಾರ್ಯಕ್ಕೆ ಬೇಕಾದುದಷ್ಟನ್ನೇ ನಿಮಗೆ ತಿಳಿಸುವೆನು....ನಾನು ಮದ್ರಾಸು ವಿಶ್ವವಿದ್ಯಾಲಯದ ಎಂ. ಬಿ. ಬಿ. ಎಸ್. ಡಿಗ್ರಿ ಪಡೆದುಕೊಂಡು ಬೆಂಗ ಳೂರಿನಲ್ಲಿ ಒಬ್ಬ ಖಾಸಗಿ ಡಾಕ್ಟರನಾಗಿ, ಸಾಧಾರಣವಾದ ಒಂದು ಪ್ರೈವೇಟ್ ಪ್ರಾಕ್ಟಿಸನ್ನು ಬೆಳಸಿಕೊಂಡು ಇದ್ದು ಇಂದಿಗೆ ಐದು ವರ್ಷ ಗಳಾಗಿವೆ. ಕಳೆದ ಎರಡು ವರ್ಷಗಳಿಂದ ನನ್ನ ಹತ್ತಿರ ಒಂದು ಮೋಟಾರು

ಕಾರೂ ಉಂಟು. ನನ್ನ ಮನೆಯಲ್ಲಿ ನಾವಿಬ್ಬರೇ. ನನ್ನ ಪ್ರಿಯತಮೆ ಯಾದ ಅಹಲ್ಯೆ, ಮತ್ತು ನಾನು. ನಾನು ಡಾಕ್ಟರನೆಂಬುದೇನೋ ನಿಜ, ಆದರೆ ನಮಗೆ ಇನ್ನೂ ಮಕ್ಕಳಾಗಿದ್ದಿಲ್ಲ. ಅಹಲ್ಯೆಯಾದರೋ ತನಗೆ ಗೊತ್ತಿದ್ದ ದೇವತೆಗಳಿಗೆಲ್ಲ ಹರಕೆ ಹೇಳುವುದನ್ನೂ ಬಿಟ್ಟಿದ್ದಿಲ್ಲ. . ನನ್ನ ವಿಷಯವಾಗಿ ಸಧ್ಯಕ್ಕೆ ಇಷ್ಟೇ ಸಾಕು.

ಒಂದು ದಿನ ನಾನು ನನ್ನ ಬೆಳಗಿನ ಕಾರ್ಯವನ್ನು ಮುಗಿಸಿ ಮನೆಗೆ ಬಂದು ನನ್ನ ಉಡುಪನ್ನು ಬದಲಾಯಿಸುತ್ತಿದ್ದೆನು. ಅಹಲ್ಯೆಯು ನನ್ನ ಹತ್ತಿರ ಬಂದು, 'ನಮ್ಮ ರಮೇಶ, ಬರುವ ತಿಂಗಳಲ್ಲಿ ಇಲ್ಲಿಗೆ ಬರು ತ್ತಾನಂತ! ಕಾಗದ ಬಂದಿದೆ.' ಎಂದು ಹೇಳಿದಳು.

ಆ ಕಾಗದವನ್ನು ಓದಲಿಕ್ಕೆ ವಿಶೇಷ ಕುತೂಹಲಪಡಲಿಲ್ಲ. ನಾನು ದಿಗಿಲು ಬಿದ್ದೆನು.

'ಅವನು ತನ್ನ 'ಸಮ್ಮರ್‌ವೆಕೇಶನ್ನೆಲ್ಲ' ಇಲ್ಲಿಯೇ ಕಳೆಯುತ್ತಾ ನಂತೆ'

'ಏನು ಮೂರು ತಿಂಗಳು!' ಎಂದು ನಾನು ಸ್ವಲ್ಪ ಭ್ರಾಂತನಾಗಿ ಅರಚಿಬಿಟ್ಟೆನು.

ಒಂದೆರಡು ದಿವಸಗಳಾದರೆ ಚಿಂತೆಯಿದ್ದಿಲ್ಲ. ಹೋಗಲಿ, ಒಂದು ವಾರಕ್ಕಾದರೂ ಚಿಂತೆ ಇದ್ದಿಲ್ಲ. ಆದರೆ ಮೂರು ತಿಂಗಳು! ನನಗೆ ಬೇರೆ ಮಾತೆತ್ತಲು ಸಾಧ್ಯವಾಗಲಿಲ್ಲ.

'ಇದೇನು? ರಮೇಶನು ನಮ್ಮಲ್ಲಿಗೆ ಬಂದು ನಿಲ್ಲುವುದು ನಿಮಗೆ ಮನಸ್ಸಿಲ್ಲವೇ?'

'ಮನಸ್ಸು. . . . ಮನಸ್ಸು. . . . ಹುಂ. . . . ಇರಲಿ; . . ಉಂಟು, ಬರಲಿ; ಬಂದು ನಿಂತುಕೊಳ್ಳಲಿ. . . .'ಎಂದೆನು.

* * * *

ಎಪ್ರಿಲ್ ತಿಂಗಳು ಬಂದಿತು. ಅದರೊಂದಿಗೆ ನನ್ನ ಭಾವನೂ ಬಂದನು. ಅವನನ್ನು ಎದುರುಗೊಳ್ಳಲಿಕ್ಕೆ ನಾವಿಬ್ಬರೂ ರೈಲ್ವೆ ಸ್ಟೇಷನ್ನಿಗೆ ಹೋಗಿ ದ್ದೆವು. ರೈಲುಗಾಡಿಯು ಬಂದು ನಿಂತಿತು. ನನ್ನ ಭಾವನು ಗಾಡಿಯಿಂದ

ಕೆಳಗಿಳಿದನು; ನಮ್ಮಿಬ್ಬರನ್ನೂ ನೋಡಿದನು. 'ನೀವು ಬಂದಿದ್ದೀರಾ?' ಎಂದು ಕೇಳಿದನು.

'ಹೌದು, ನನ್ನ ಕಣ್ಣುಗಳು ನಿಜವಾಗಿಯೂ ಶುಭ್ರವಾಗಿವೆ.' ಎಂದುತ್ತರ ಕೊಡಬೇಕೆಂದಿದ್ದೆನು. ಆದರೆ ಅಹಲ್ಯೆಯು ಇದನ್ನು ತಿಳಿದುಕೊಂಡಳೋ ಏನೋ, ನಾನು ಮಾತೆತ್ತುವಷ್ಟರೊಳಗೆ ಅವನೊಡನೆ ಅವನ ಪ್ರಯಾಣದ ವಿಷಯವಾಗಿ ಮಾತು ಬೆಳೆಯಿಸಿದಳು.

ನಾವು ಮೂವರೂ—ಅಲ್ಲ, ನಾಲ್ವರೂ—ನನ್ನ ಭಾವನ ಸಾಮಾನನ್ನು ಹೆಗಲಮೇಲಿಟ್ಟುಕೊಂಡ ಒಬ್ಬ ಪೋರ್ಟರನೂ ಇದ್ದನು—ಸ್ಟೇಷನ್ನಿನ ಹೊರಗೆ ಬಂದು, ನನ್ನ ಕಾರು ಇದ್ದೆಡೆಗೆ ಹೋದೆವು. ಕಾರಿನಲ್ಲಿ ಅಹಲ್ಯೆಯೂ ನನ್ನ ಭಾವನೂ ಮೊದಲು ಕುಳಿತುಕೊಂಡರು. ನಾನು ಕಾರನ್ನು ಹತ್ತುವುದರಲ್ಲಿದ್ದೆನು. ಆ ಕ್ಷಣ ನನ್ನ ಭಾವನು, 'ಭಾವಯ್ಯಾ, ಇದೇನೆಯೇನೋ ನಿನ್ನ ಕಾರು?' ಎಂದು ಕೇಳಿದನು. 'ಅಲ್ಲ, ನನ್ನ ಕಾರು ಇದು ಅಲ್ಲ. ನಾನು ಬಾಡಿಗೆಗೆ ತೆಗೆದುಕೊಂಡ ಒಂದು ಏರೋಪ್ಲೇನು ಇದು,' ಎಂದು ಹೇಳಲಿಕ್ಕೆ ನಾನು ಬಾಯಿ ತೆರೆದೆನು. ಅಷ್ಟರೊಳಗೆ ಅಹಲ್ಯೆಯು ನನ್ನ ಇಂಗಿತವನ್ನು ತಿಳಿದುಕೊಂಡು, ನನ್ನ ಮೇಲೆ ಒಂದು ಅರ್ಥಗರ್ಭಿತವಾದ ದೃಷ್ಟಿಯನ್ನು ಪಸರಿಸಿದಳು. ನಾನು ತಿಳಿದುಕೊಂಡೆನು. ನಾನು ಹೇಳಬೇಕೆಂದಿದ್ದ ಮಾತುಗಳು ಗರ್ಭದಲ್ಲಿಯೇ ನಾಶವಾದುವು. ನಾನೂ ಕಾರನ್ನು ಹತ್ತಿ ಮನೆಗೆ ಡ್ರೈವ್ ಮಾಡಿದೆನು.

ಸ್ವಲ್ಪ ಸಮಯದಲ್ಲಿಯೇ ಮನೆಯನ್ನು ಮುಟ್ಟಿದೆವು. ಕಾರಿನೊಳಗಿಂದ ಕೆಳಗಿಳಿದು ಮನೆಯನ್ನು ಪ್ರವೇಶಿಸಿದೆವು. ಕೂಡಲೇ ನನ್ನ ಭಾವನು 'ಭಾವಯ್ಯಾ, ಇದೇನೋ ನಿಮ್ಮ ಮನೆ?' ಎಂದು ಕೇಳಿದನು. ನನಗೆ ಮಾತು ತಡೆಯಲಿಕ್ಕಾಗಲಿಲ್ಲ. 'ನಮ್ಮ ಮನೆ? ಇಲ್ಲ, ಅಪ್ಪ ಇದು, ನಮ್ಮ ಮನೆಯಲ್ಲ. ನಾವು ವಾಸಿಸುತ್ತಿರುವ ಒಂದು ಉಡುಪಿ ಹೊಟೇಲು ಇದು' ಎಂದು ಅಹಲ್ಯೆಯನ್ನು ನೋಡದೆಯೇ ಬಾಯಿಬಿಟ್ಟು ಹೇಳಿದೆನು.

ಅಹಲ್ಯೆಯು ತನ್ನ ತಮ್ಮನನ್ನು ಕೈಕಾಲು ತೊಳೆಯಲಿಕ್ಕೆಂದು ಕಳುಹಿಸಿ ನನ್ನ ಬಳಿಗೆ ಬಂದಳು. ಬರುವುದೆಲ್ಲ ಬರಲಿ; ಗೋವಿಂದನ

ದಯೆ ನನಗಿರಲಿ, ಎಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿ ಅವಳ ಕಡೆಗೆ ತಿರುಗಿದೆನು.

. 'ನೀವೇಕೆ ಹಾಗೆ ಮಾಡುತ್ತೀರಿ ?' ಎಂದು ಕೇಳಿದಳು.

'ಅವನೇಕೆ ಹಾಗೆ ಅವಶ್ಯವಿಲ್ಲದ ಹುಚ್ಚು ಹುಚ್ಚಾದ ಪ್ರಶ್ನೆಗಳನ್ನು ಕೇಳುವುದು ?' ಎಂದೆನು.

'ಪಾಪ, ಅವನ ಸ್ವಭಾವ ಅದು.'

'ಸ್ವಭಾವ ? ಸ್ವಭಾವವಲ್ಲ, ಒಂದು ರೋಗ !'

'ರೋಗವಾದರೆ ಅದನ್ನು ಗುಣಪಡಿಸಬಹುದಲ್ಲವೇ ?'

'ಹೌದು, ಗುಣಪಡಿಸಬಹುದು. ಅದನ್ನೇ ನಾನು ಯತ್ನಿಸುತ್ತೇನೆ. ಆದರೆ ನೀನು ಸುಮ್ಮನೆ ಇರುವುದಿಲ್ಲ.'

ಹತ್ತು ನಿಮಿಷ ಕಳೆಯಿತು.

'ಎಷ್ಟಾದರೂ ಅವನು ಚಿಕ್ಕವನು—'

'ಚಿಕ್ಕವನು ? ನಾಲ್ಕು ವರ್ಷ ಮುಂಚೆ ಅವನಿಗೆ ಮದುವೆ ಮಾಡಿದ್ದರೆ ಇಂದಿಗೆ ಅವನಿಗೆ ನಾಲ್ಕು ಮಕ್ಕಳಾಗುತ್ತಿದ್ದುವು.'

'ನಮಗೆ....ಆಗಿ..ಇಂದಿಗೆ..ಹತ್ತು ವರ್ಷಗಳಾದುವು..'

ನಾನು ಸುಮ್ಮಗಾದೆನು.

ನನ್ನ ಭಾವನ ಮೇಲೆ ನನಗೆ ದ್ವೇಷ ಇದೆ ಎಂತಲ್ಲ. ಅವನು ಇತರ ಸಂಗತಿಗಳಲ್ಲಿ ನಿಜವಾಗಿಯೂ ಬಹಳ ಚುರುಕಾಗಿರುವನು. ಹುಚ್ಚು ಹುಚ್ಚಾದ ಅಗತ್ಯವಿಲ್ಲದ ಪ್ರಶ್ನೆಗಳನ್ನು ಕೇಳುವ ದುರಭ್ಯಾಸವೊಂದು ಅವನಿಗೆ ಇರುವಂತಿಲ್ಲವಾಗಿದ್ದರೆ ಅವನು ನಮ್ಮೊಂದಿಗೆ ಇರುವುದು ನನಗೆ ನಿಜವಾಗಿಯೂ ಬಹಳ ಸಂತೋಷವಾಗುತ್ತಿತ್ತು. ಆದರೆ ಅವನ ಈ ಒಂದು ದುರಭ್ಯಾಸವು ಮಾತ್ರ ಅವನ ಎಲ್ಲ ಒಳ್ಳೇ ಗುಣಗಳನ್ನು ನುಂಗುವ ಮಸಿಯಾಯಿತು.

ನನ್ನ ಭಾವನು ನಮ್ಮಲ್ಲಿಗೆ ಬಂದು, ಒಂದು ವಾರ ಕಳೆಯಿತು. ದಣಿದು ಸಂಜೆಗೆ ಮನೆಗೆ ಬರುವ ನನಗೆ, ನನ್ನ ಪ್ರೀತಿಯ ಆರಾಮು ಕುರ್ಚಿಯು ಸಿಕ್ಕುವುದು ದುರ್ಲಭವಾಯಿತು. ನನ್ನ ಸಿಗಾರು ಪೆಟ್ಟಿಗೆ

ಯಲ್ಲಿ ಸಿಗಾರುಗಳು ಒಂದೊಂದಾಗಿಯೇ ಮಾಯವಾಗಲಿಕ್ಕೆ ಪ್ರಾರಂಭಿಸಿದುವು. ನಾನು ಬರೆಯುವ ಮೇಜಿನ ಮೇಲೆ, ರೈನಾಲ್ಡ್ಸ್‌ನ ನಾವೆಲುಗಳೂ ಸೆಕ್ಸ್‌ಟನ್ ಬ್ಲೇಕನ ಪತ್ತೇದಾರಿ ಪುಸ್ತಕಗಳೂ ಬಿದ್ದುಕೊಂಡು ಮೇಜಿನ ಮೇಲೆ ನನಗೊಂದು ಕಾರ್ಡು ಬರೆಯಲಿಕ್ಕೆ ಕೂಡ ಅನುಕೂಲವಾಗದೆ ಹೋಯಿತು. ನಾನು ಪ್ರತಿ ಸಂಜೆಯಲ್ಲಿ ಒಂದರ್ಧಗಂಟೆ ಬಾರಿಸುತ್ತಿರುವ ನನ್ನ ದಿಲ್‌ರುಬದ ತಂತಿಗಳು ನಾನು ದಿನಾಲೂ ಸರಿಮಾಡಿಟ್ಟಿದ್ದರೂ ಇಟ್ಟಹಾಗೆಯೇ ತುಂಡಾಗಿ ಹೋಗಲಿಕ್ಕೆ ಪ್ರಾರಂಭಿಸಿದುವು. ಚುಟುಕಾಗಿ ಹೇಳುವುದಾದರೆ, ಬರೀ ಒಂದು ವಾರದೊಳಗೆ ನನ್ನ ಭಾವನು ನನ್ನ ಮನೆಯೊಳಗೆಲ್ಲ ಪಸರಿಸಿಕೊಂಡನು; ವಾಸನೆಯಂತೆ ಹಬ್ಬಿಕೊಂಡನು. ಹತ್ತಿಯಂತೆ ಹರಡಿಕೊಂಡನು; ವ್ಯಾಧಿಯಂತೆ ವ್ಯಾಪಿಸಿಕೊಂಡನು; ಮೊಗಲಾಯರಂತೆ ಒಂದು ಸಾಮ್ರಾಜ್ಯವನ್ನು ಸ್ಥಾಪಿಸಿದನು.

ನನ್ನ ಭಾವನ ಉಪಟಳವನ್ನು ಕುರಿತು ನಾನು ಅಹಲ್ಯೆಯೊಡನೆ ಅನೇಕ ಸಲ ಏಕಾಂತದಲ್ಲಿ ಪ್ರಸ್ತಾಪಿಸಿದೆನು. 'ಹೇಗಾದರೂ ಸಂತಯಿಸಿಕೊಳ್ಳಬೇಕು. ಬರೀ ಮೂರು ತಿಂಗಳುಗಳಿಗಲ್ಲವೇ?' ಎಂಬುದೇ ಅವಳ ಉತ್ತರವಾಗಿತ್ತು. ಮೂರು ತಿಂಗಳು! ಒಂದು ಇಡೀ ಕಾಲು ವರ್ಷ! ನಾನು ಎಷ್ಟು ಪ್ರಯತ್ನಪಟ್ಟರೂ ಅಹಲ್ಯೆಯು ನನ್ನ ವಿಚಾರಪಥವನ್ನು ತಿಳಿಯಲಾರದೆ ಹೋದಳು.

ಒಂದು ದಿನ ಬೆಳಗಿನಲ್ಲಿ ನನಗೆ ಬೇಗನೆ ಊಟಮಾಡಿಕೊಂಡು ಹೊರಗೆ ಹೋಗಬೇಕಾಗಿತ್ತು. ಊಟಮಾಡಿಕೊಂಡು ಅಡಿಗೆಮನೆಯಿಂದ ಹೊರಗೆ ಬಂದೆನು. 'ಊಟಮಾಡಿಕೊಂಡು ಬಂದೆಯಾ?' ಎಂದು ನನ್ನ ಭಾವನು ಹಠಾತ್ತಾಗಿ ಕೇಳಿಬಿಟ್ಟನು. ನಾನು ಊಟಮಾಡುವಾಗಲೂ ಅವನು ನೋಡಿದ್ದನು. 'ಊಟಮಾಡುತ್ತೀಯಾ?' ಎಂದು ಅವನು ಆಗಲೇ ಕೇಳಿದ್ದನು. ಆದರೆ ಅಹಲ್ಯೆಯು ಆಗ್ಗೆ ನನ್ನ ಹತ್ತಿರವಿದ್ದುದರಿಂದ ನಾನು ಸುಮ್ಮನಿದ್ದೆನು. ಆದರೆ 'ಊಟಮಾಡಿಕೊಂಡು ಬಂದೆಯಾ?' ಎಂದು ಅವನು ಈಗ ಕೇಳಿದ ಕೂಡಲೇ ನನಗೆ ಫಕ್ಕನೆ

ಏನೋ ಏನೋ ಸಂಭವಿಸಿತು. ನನ್ನ ತಾಳ್ಮೆಯ ಶಕ್ತಿಯು ಅಡಿಮೇಲಾಯಿತು. ಕೋಪದಿಂದ ಕಿಡಿಯಾದೆನು. ಅವನ ಎರಡೂ ಕಿವಿಗಳನ್ನು ಹಿಡಿದು ಅವನನ್ನು ಮೇಲಕ್ಕೆತ್ತಿ ಬಿಡೋಣವೇ ಎಂದು ಅವನಿದ್ದೆಡೆಗೆ ಹೋದೆನು. ಆದರೆ ಆ ಕ್ಷಣವೇ ಅಹಲ್ಯೆಯು ಕೊಠಡಿಯೊಳಗೆ ಬಂದು, ನನ್ನ ಬಳಿಗೆ ಸರಿದಳು. ನನ್ನ ಕೋಪದ ಪರಿಣಾಮವು ಅವಳ ಮೇಲೆ ಮೊದಲು ಬಂದಿಳಿಯಿತು. ನನ್ನ ಚಾಚಿದ ಕೈಗಳಿಂದ ಅವಳ ಎರಡು ಭುಜಗಳನ್ನೂ ಬಲವಾಗಿ ಹಿಡಿದುಕೊಂಡು ಅವಳನ್ನು ನೆಲದ ಮೇಲಿನಿಂದ ಎತ್ತಿ ಮೂಲೆಯಲ್ಲಿದ್ದ ಒಂದು ಕುರ್ಚಿಯ ಮೇಲೆ ಬಲಾತ್ಕಾರದಿಂದ ಕುಳ್ಳಿರಿಸಿದೆನು. ಮತ್ತು ನನ್ನ ಭಾವನಿದ್ದೆಡೆಗೆ ಹೋಗಿ ಅವನ ಎಡಗಿವಿಯನ್ನು ಹಿಡಿದು, ಕಿವಿಯ ಹತ್ತಿರ ನನ್ನ ಮುಖವನ್ನಿಟ್ಟು, 'ಹೌದು, ಮುಂಡಾಸ ಮೂವತ್ತು ಮೊಳ' ಎಂದು ನನ್ನಿಂದ ಸಾಧ್ಯವಾದಷ್ಟು ಗಟ್ಟಿಯಾಗಿ ಕೂಗಿದೆನು. ಆ ಮೇಲೆ ಕೋಪದಿಂದ ಕಂಪಿಸುತ್ತಾ ನನ್ನ ಕೊಠಡಿಗೆ ಹೋಗಿ ನನ್ನ ಹಾಸಿಗೆಯ ಮೇಲೆ ಕೋಪವು ಶಾಂತವಾಗುವ ವರೆಗೆ ಬಿದ್ದುಕೊಂಡೆನು.

ಅಂದಿನಿಂದ ನನಗೆ, ಏಳು ದಿನಗಳ ವರೆಗೆ ನನ್ನ ಭಾವನ ಪ್ರಶ್ನೆಗಳಿಂದ ಸ್ವಲ್ಪ ಬಿಡುಗಡೆ ಇದ್ದಿತು.

ಎಂಟನೆಯ ದಿನವು ಆದಿತ್ಯವಾರವಾಗಿತ್ತು. ನಾನೊಬ್ಬ ಬರೀ ಖಾಸಗೀ ಡಾಕ್ಟರನಾಗಿದ್ದರೂ ನಾನು ಯಾವಾಗಲೂ ಆದಿತ್ಯವಾರ ಮಧ್ಯಾಹ್ನವನ್ನು ರಜಾ ಸಮಯವೆಂತಲೇ ತಿಳಿದುಕೊಳ್ಳುತ್ತಿದ್ದೆನು.

'ಇಂದು ಮಧ್ಯಾಹ್ನ ನಾವು ಕಂಟೋನ್‌ಮೆಂಟಿಗೆ ಹೋಗಿ ತಿರುಗಾಡಿ ಬರೋಣವೇ?' ಎಂದು ಅಹಲ್ಯೆಯು ಕೇಳಿದಳು. ನನ್ನ ಭಾವನೂ ಅವಳ ಹತ್ತಿರವಿದ್ದನು.

'ಅಡ್ಡಿ ಏನು?' ಅಂದೆನು.

ಅಂದು ಮಧ್ಯಾಹ್ನ ನಮ್ಮ ಕಾಫಿಯು ಎರಡು ಗಂಟೆಗೇ ತೀರಿತು. ಡ್ರೆಸ್ಸು ಹಾಕಿಕೊಂಡು ಹೊರಟೆವು. ನನ್ನ ಕಾರನ್ನು ಗ್ಯಾರೇಜಿನಿಂದ ಹೊರಗೆ ತಂದಿರಿಸಿದೆನು. ಅಹಲ್ಯೆಯೂ ನನ್ನ ಭಾವನೂ ಕಾರನ್ನು ಹತ್ತಿ ಕೂತುಕೊಂಡರು. ನಾನೂ ಕಾರನ್ನು ಹತ್ತಿ ಕೂತುಕೊಳ್ಳುತ್ತಿದ್ದೆನು.

'ಈಗ ಹೋಗೋದು ಕಂಟೋನ್ ಮೆಂಟಿಗೆ ಅಲ್ಲವೇ?' ಎಂದು ನನ್ನ ಭಾವನು ಹಠಾತ್ತಾಗಿ ಕೇಳಿಬಿಟ್ಟನು.

ನಾನು ಅಹಲ್ಯೆಯ ಕಂಠಿನ ಗದರಿಕೆಯನ್ನು ಲೆಕ್ಕಿಸಲಿಲ್ಲ. 'ಕಂಟೋನ್ ಮೆಂಟಿಗೆ? ಕಂಟೋನ್ ಮೆಂಟಿಗೆ ಹೋಗುತ್ತೇವೆಂದು ಯಾರುಹೇಳಿದ್ದಾರೆ? ಈಗ ಹೋಗುವದು ರೇಲ್ವೇ ಸ್ಟೇಷನಿಗೆ. ನಿನ್ನನ್ನು ಅಲ್ಲಿ ಬಿಡಲಿಕ್ಕೆ, ಮಂಗಳೂರಿಗೆ ಹೋಗುವ ಒಂದು ಟ್ರೈನು ಈಗ ಉಂಟಂತೆ.' ಎಂದು ಒತ್ತರದಿಂದ ಹೇಳಿ ನಾನೂ ಕಾರನ್ನು ಹತ್ತಿ ಸ್ಟಿಯರಿಂಗ ವ್ಹೀಲನ್ನು ಹಿಡಿದೆನು. ಕಾರು ನಮ್ಮ ಮನೆಯ ಬಾಗಿಲಿನಿಂದ ಮೂವತ್ತು ಹೆಜ್ಜೆಗಳಷ್ಟು ಮುಂದೆ ಹೋಗಿತ್ತೋ ಇಲ್ಲವೋ, ಫಕ್ಕನೆ ಅಲ್ಲಿಯೇ ನಿಂತುಬಿಟ್ಟಿತು.

'ಏನು ನಿಂತುಬಿಟ್ಟಿತೆ?'

ಪ್ರಶ್ನೆ ಕೇಳಿದವನು ನನ್ನ ಭಾವನೆಂದು ನಾನು ಪುನಃ ಹೇಳಬೇಕಾದುದಿಲ್ಲ. ಒಂದು ಕಡೆಗೆ ಕಾರಿಗೆ ಏನು ಕೆಡಕುಂಟಾಯಿತೋ ಎಂಬ ಭಯ. ಇನ್ನೊಂದು ಕಡೆಗೆ ನನ್ನ ಭಾವನ ಅರ್ಥವಿಲ್ಲದ ಪ್ರಶ್ನೆ. ಇವುಗಳ ಮಧ್ಯೆ ನಾನು ಹುಚ್ಚನಾದಂತಾದೆನು. ಅಹಲ್ಯೆಯ ಹತ್ತಿರ ಹೋಗಿ, 'ನನಗೆ ನಿಜವಾಗಿ ಹೇಳು, ಈ ಕಾರು ನಿಂತುಬಿಟ್ಟಿದೆಯೇ?' ಎಂದು ಕೇಳಿದೆನು.

ಅಹಲ್ಯೆಯು ಉತ್ತರ ಕೊಡಲಿಲ್ಲ.

ನನ್ನ ಕ್ಲೀನರ ಬೊಯಿಯನ್ನು ಕರೆದು, ಅವನ ಕೂಡೆಯೂ ಇದೇ ಪ್ರಶ್ನೆಯನ್ನು ಕೇಳಿದೆನು. ಅವನೂ ಉತ್ತರಕೊಡಲಿಲ್ಲ.

ದಾರಿಯಲ್ಲಿ ಹೋಗುತ್ತಿದ್ದ ನನ್ನ ಸ್ನೇಹಿತನಾದ ವ್ಯಾಸರಾಯನನ್ನು ಕರೆದು 'ನನ್ನ ಈ ಕಾರು ಈಗ ಇಲ್ಲಿ ನಿಂತಿದೆಯೋ ಅಥವಾ ಚಲಿಸುತ್ತಿದೆಯೋ? ಏನೂ ಮರೆಮಾಜದೆ ಹೇಳು.' ಎಂದೆನು.

ವ್ಯಾಸರಾಯನು ನನ್ನನ್ನು ಒಂದು ನವೀನ ತರದ ದೃಷ್ಟಿಯಿಂದ ನೋಡಿ ಮಾತೆತ್ತದೆ ಅಲ್ಲಿಂದ ಬೇಗಬೇಗನೆ ಹೋದನು. ನಾನು ನನ್ನ ಭಾವನ ಕಡೆಗೆ ತಿರುಗಿದೆನು.

'ನೋಡಿದೆಯಾ, ನನ್ನ ಮುದ್ದು ಅರಗಿಣೀ! ಈ ಕಾರು ನಿಂತಿದೆಯೋ ಇಲ್ಲವೋ ಎಂದು ನಾನು ಮೂರು ಜನರ ಹತ್ತಿರ ನಿನ್ನ ಎದುರಿಗೇ ಕೇಳಿದೆನು. ಒಬ್ಬರೂ ಅದು ನಿಂತಿದೆ ಎಂದು ಹೇಳುವುದಿಲ್ಲ. ಇಲ್ಲ, ಈ ಕಾರು ನಿಂತಿಲ್ಲ. ನಾಗಾಲೋಟದಿಂದ ಹೋಗುತ್ತದೆ. ಈಗಲಾದರೂ ತಿಳಿಯಿತೇ?'

ಅಹಲ್ಯೆಯು ತನ್ನ ಮುಖವನ್ನು ತನ್ನ ಎರಡೂ ಕೈಗಳೊಳಗೆ ಅಡಗಿಸಿಕೊಂಡಳು. ನಾನು ನನ್ನ ಕೋಟನ್ನು ತೆಗೆದಿಟ್ಟು, ಕಾರಿನ ಎಂಜಿನನ್ನು ಪರೀಕ್ಷಿಸಿದೆನು. ಅದನ್ನು ಸರಿಪಡಿಸುವ ಉಪಕರಣಗಳನ್ನೆಲ್ಲ ಹೊರಗೆ ತೆಗೆದು ಅದರ ಸುತ್ತುಮುತ್ತು ತಿರುಗಾಡಿ ನೋಡಿದೆನು. ಅದು ಎಲ್ಲಿ ಹಾಳಾಗಿದೆಯೆಂಬುದು ಕೂಡಲೆ ತಿಳಿದುಬಂದಿತು. ಅದನ್ನು ಸರಿಪಡಿಸಲಿಕ್ಕೆಂದು ಕಾರಿನ ಕೆಳಗೆ ಹೋಗಿ, ನೆಲದ ಮೇಲೆ ಬೆನ್ನು ಹಾಕಿ ಮಲಗಿಕೊಂಡೆನು. ಮಲಗಿದ್ದಲ್ಲಿಂದ ಕಾಲುಗಂಟೆಯ ವರೆಗೆ ಕಾರನ್ನು ಸರಿಪಡಿಸುವ ಕೆಲಸದಲ್ಲಿ ಉದ್ಯುಕ್ತನಾದೆನು. ನಾನು ಉಟ್ಟುಕೊಂಡಿದ್ದ ವಸ್ತ್ರವೆಲ್ಲ ಧೂಳಿನಿಂದಲೂ ಮೊಬಿಲ್ ಆಯಿಲಿನಿಂದಲೂ ಮಲಿನವಾಯಿತು. ಕಾರಿನ ಎಂಜಿನು ಸರಿಯಾಗುತ್ತ ಬಂದಿತು.

ಅಷ್ಟರೊಳಗೆ ಕಾರಿನಲ್ಲಿ ಕುಳಿತುಕೊಂಡಿದ್ದ ನನ್ನ ಭಾವನು ಕೆಳಗೆ ಧುಮುಕಿದನು. ಅಹಲ್ಯೆಯು ಅವನನ್ನು ತಡೆದಳೆಂದು ಕಾಣುತ್ತದೆ. ಆದರೆ ಅವನು ಕೇಳಲಿಲ್ಲ. ಕಾರಿನ ಬದಿಗೆ ಬಗ್ಗಿ ನಿಂತುಕೊಂಡು ನನ್ನನ್ನು ಒಂದು ಕ್ಷಣ ದೃಷ್ಟಿಸಿ ನೋಡಿ, 'ಭಾವಯ್ಯ, ಏನಾದರೂ ಹಾಳಾಗಿದೆಯೇ?' ಎಂದು ಕೇಳಿಯೇ ಬಿಟ್ಟನು.

ಒಂದೇ ಮಧ್ಯಾಹ್ನ, ಒಬ್ಬನ ಮೇಲೆ ಮೂರು ಸಲ ರೇಗಿಬೀಳುವುದು ಯಾರಿಗೂ ಸಾಧ್ಯವಿಲ್ಲ. ನನ್ನ ಕೋಪಾಗ್ನಿಯು ಆಗಲೇ ನಂದಿ ಹೋಗಿದ್ದಿತು.

'ಛೇ, ಹಾಳಾಗುವುದು? ನನ್ನ ಕಾರು ಎಂದೂ ಹಾಳಾಗುವುದಿಲ್ಲ. ಮಹಾತ್ಮಾ ಗಾಂಧಿಯವರು ಆರೋಗ್ಯದ ವಿಷಯದಲ್ಲಿ ಬರೆದ ಪುಸ್ತಕವನ್ನು ಓದಿದ್ದಿಯೇನೋ? ಮಣ್ಣಿನ ಉಪಯುಕ್ತವಾದ ಲಕ್ಷಣಗಳನ್ನು

ಅವರು ಎಷ್ಟೋ ವಿಸ್ತಾರವಾಗಿ ಅದರಲ್ಲಿ ಬರೆದಿರುತ್ತಾರೆ. ವಾತರೋಗಕ್ಕೆ ಮಣ್ಣು ದಿವ್ಯೌಷಧವು. ನನಗೆ ಸಿನ್ನೆಯಿಂದ ಸ್ವಲ್ಪ ವಾತರೋಗದ ಸ್ಪರ್ಶ ವುಂಟಾಗಿದೆ. ಅದಕ್ಕಾಗಿಯೇ ನಾನು ಈಗ ಕಾಲುಗಂಟೆಯಿಂದ ಈ ಮಣ್ಣಿನಲ್ಲಿ ಹೊರಳಾಡುತ್ತಿದ್ದೇನೆ. ತಿಳಿಯಿತೇನು?. . . . ಈಗ ಹೋಗು, ಕಾರಿನೊಳಗೆ ಕುಳಿತುಕೊ. ಮಣ್ಣಿನ ಲೇಪನ ಸಾಕೆಂದಾದ ಕೂಡಲೆ ನಾನೂ ಬರುತ್ತೇನೆ' ಎಂದು ಹೇಳಿದೆನು.

ಇದಾದ ಐದು ನಿಮಿಷಗಳಲ್ಲಿಯೇ ಕಾರು ಸರಿಯಾಯಿತು. ಮನೆಗೆ ಹೋಗಿ ನನ್ನ ಉಡುಪನ್ನು ಬದಲಾಯಿಸಿಕೊಂಡು ಬಂದೆನು. ಕಾರು ಹತ್ತುವ ಮೊದಲು ನನ್ನ ಭಾವನ ಹತ್ತಿರ ಹೋಗಿ, 'ಜಾಗ್ರತೆ! ಈಗ ಕಾರು ಸರಿಯಾಯಿತೇ? ಎಂದು ನೀನು ಕೇಳುವುದಾದರೆ ಕಾರು ಓಡು ವಾಗಲೇ ನಿನ್ನನ್ನು ಕುತ್ತಿಗೆಯಿಂದ ಹಿಡಿದು ಹೊರಗೆ ತಳ್ಳುವೆನು' ಎಂದೆನು. ಆ ವೇಳೆ ನನ್ನ ಭಾವನ ಪ್ರಶ್ನೆಗಳಿಲ್ಲದೆ, ಕಾರು ಸರಿಯಾಗಿ ಮುಂದೆ ನಡೆಯಿತು.

ನಾವು ಕಂಟೋನ್‌ಮೆಂಟಿಗೆ ಹೋಗಿ ಮರಳಿ ಬರುವಾಗ ರಾತ್ರಿ ಎಂಟುಘಂಟೆ ಆಗಿತ್ತು. ಮನೆಗೆ ಬಂದ ಕೂಡಲೆ ಅಹಲ್ಯೆಯು ತನ್ನ ತಮ್ಮ ನನ್ನು ತನ್ನ ಕೊಠಡಿಗೆ ಕರೆದುಕೊಂಡು ಹೋದಳು. ಒಂದು ಅರ್ಧ ಘಂಟೆಯ ತನಕ ಅವನಿಗೆ ಅವನ ನಡತೆಯ ವಿಷಯವಾಗಿ ಲೆಕ್ಚರು ಕೊಟ್ಟ ಳೆಂದು ಕಾಣುತ್ತದೆ. ಅದು ಹೇಗೂ ಇರಲಿ. ಮೂರನೆಯ ದಿನದಿಂದ ನನ್ನ ಭಾವನ ಅವಶ್ಯವಿಲ್ಲದ ಪ್ರಶ್ನೆಗಳು ಬಹಳ ಕಡಿಮೆಯಾದುವು. ಹೀಗೆಯೇ ಎರಡು ವಾರಗಳು ಕಳೆದುವು. ನನ್ನ ಭಾವನ ಆ ಹುಚ್ಚು ಅಭ್ಯಾಸವು ನಿಂತುಹೋಯಿತೆಂದು ಸಂತೋಷಪಟ್ಟೆನು. ಮನೆಯಲ್ಲಿ ಅವನ ಸಹ ವಾಸವು ಮನೋರಂಜಕವಾದುದಾಗಿ ಕಂಡುಬಂದಿತು. ಆದರೆ ನಾನು ಹಾಗೆ ನೆನೆದುಕೊಂಡುದು ಸ್ವಲ್ಪ ಮುಂಗಡವಾಯಿತೆಂದು ನನಗೆ ಮರು ದಿನವೇ ತಿಳಿದು ಬಂದಿತು.

ಬೆಳಗಿನ ಕಾಫಿ ತಿಂಡಿಯಾದ ಕೂಡಲೆ ನಾನು ನನ್ನ ಕೊಠಡಿಗೆ ಹೋಗಿ, ಗಡ್ಡ ಬೋಳಿಸಿಕೊಳ್ಳಬೇಕೆಂದು ಅದಕ್ಕೆ ಬೇಕಾದ ಉಪಕರಣ



"ಭಾವಯ್ಯಾ, ನಿನಗೆ ಸಿಟ್ಟು ಬಂದಿದೆಯೋ?"

ಗಳನ್ನೆಲ್ಲ ಸಿದ್ಧಪಡಿಸಿದೆನು. ನನ್ನ ದೊಡ್ಡ ಕನ್ನಡಿಯನ್ನು ಮುಂದಿಟ್ಟು ಕೊಂಡು ಮುಖಕ್ಕೆಲ್ಲ ಸಾಬೂನಿನ ನೊರೆಯನ್ನು ಹಚ್ಚಿಕೊಂಡೆನು. ಕ್ಷೌರದ ಕತ್ತಿಯನ್ನು ಅದರ ಗೂಡಿನಿಂದ ಹೊರಗೆ ತೆಗೆದು, ಮಸೆಯುವ ಚರ್ಮದ ಮೇಲೆ ಚೆನ್ನಾಗಿ ಹದನಮಾಡಿದೆನು. ಎಲ್ಲವೂ ಸರಿಯಾಯಿ ತೆಂದು ತಿಳಿದು ಕುರ್ಚಿಯ ಮೇಲೆ ಕುಳಿತುಕೊಂಡು, ಕನ್ನಡಿಯೊಳಗೆ ನೋಡುತ್ತ ಗಡ್ಡ ಬೋಳಿಸಿಕೊಳ್ಳಲಿಕ್ಕೆಂದು ಕ್ಷೌರದ ಕತ್ತಿಯನ್ನು ಕೆನ್ನೆಯ ಮೇಲೆ ಇಟ್ಟುಕೊಂಡೆನು. ಆ ಕ್ಷಣವೇ ಕೊಠಡಿಯೊಳಗಿಂದ, 'ಏನು ಭಾವಯ್ಯಾ, ಕ್ಷೌರಮಾಡಿಕೊಳ್ಳುತ್ತೀಯಾ?' ಎಂಬ ಪ್ರಶ್ನೆಯು ನನ್ನ ತಲೆಯ ಮೇಲೆ ಹಾರಿಯೇ ಬಂದು ಬಿಟ್ಟಿತು.

ನಾನು ಬೆಗಿಲುಬಿದ್ದೆನು. ಕೆನ್ನೆಗೆ ದೊಡ್ಡದೊಂದು ಗಾಯವಾಗಿ ರಕ್ತವು ಸುರಿಯಲಾರಂಭಿಸಿತು. ಕೂಡಲೇ ಎದ್ದು ನಿಂತೆನು; ಕೋಪ ದಿಂದ ಕಿಡಿಕಿಡಿಯಾದೆನು. ದೇಹವೆಲ್ಲವೂ ಕಂಪಿಸಲಿಕ್ಕೆ ಪ್ರಾರಂಭಿಸಿತು. ನನ್ನ ಬಲಗೈಯಲ್ಲಿ ರಕ್ತಧಾರೆಯಿಂದ ಕೆಂಪಾದ ಕ್ಷೌರಕತ್ತಿಯು ಇತ್ತು.

ನೋಡಿದೆಯಾ ಈ ಕತ್ತಿಯನ್ನು ? ಎಂದು ನಾನು ಕೂಗಿದೆನು. 'ಇದನ್ನು ಕ್ಷೌರಮಾಡಿಕೊಳ್ಳಬೇಕೆಂದು ಹದನಮಾಡಿದ್ದೇನೆಂದು ತಿಳಿದು ಕೊಂಡಿದ್ದೀಯಾ? ತಪ್ಪು! ಶುದ್ಧ ತಪ್ಪು! ಇದು ಕ್ಷೌರಮಾಡಿ ಕೊಳ್ಳುವ ಕತ್ತಿಯಲ್ಲ; ಅನವಶ್ಯಕವಾದ ಪ್ರಶ್ನೆಗಳನ್ನು ಕೇಳುವ ನಿನ್ನಂಥಹ ಭಾವಂದಿರ ಕುತ್ತಿಗೆಯನ್ನು ಕಡಿಯುವಂತಹ ಕತ್ತಿ! ತಿಳಿಯಿ ತೇನು? .... ನನ್ನ ಕೆನ್ನೆಯ ಮೇಲಿರುವ ಈ ಗಾಯವನ್ನು ನೋಡು, ನಾನು ಅದನ್ನು ಬೇಕೆಂತಲೇ ಮಾಡಿಕೊಂಡದ್ದು! ತಿಳಿಯಿತೆ? ನನ್ನ ಕತ್ತಿಯ ಹದನವು ಸಾಕಷ್ಟಾಗಿದೆಯೋ ಎಂದು ಪರೀಕ್ಷಿಸಿದುದು! ಈಗ ಲಾದರೂ ತಿಳಿಯಿತೇ?'

ನನ್ನ ಭಾವನು ನನ್ನ ಆರ್ಭಟವನ್ನು ಎರಡು ನಿಮಿಷಗಳವರೆಗೆ ಬಾಯಿ ತೆರೆದು ಕೇಳಿ, ಆ ಮೇಲೆ, 'ಭಾವಯ್ಯಾ, ನಿನಗೆ ಸಿಟ್ಟು ಬಂದಿ ದೆಯೋ?' ಎಂದು ಮೆಲ್ಲಗೆ ಕೇಳಿದನು.

ನಾನು ಪೂರ್ಣ ಹುಚ್ಚನಾದೆನು. ಕೈಯಲ್ಲಿದ್ದ ಕತ್ತಿಯನ್ನು ನನ್ನ

ಕುತ್ತಿಗೆಗೆ ತೆಗೆದುಕೊಂಡು ಹೋದೆನು. ಫಕ್ಕನೆ ಏನೋ ಸಂಭವಿಸಿತು. ಅಹಲ್ಯೆಯ ಮುಖವು ನನ್ನ ಎದುರಿಗೆ ಒಂದು ಕ್ಷಣ ತೇಲುವಂತೆ ತೋರಿತು. ಕೂಡಲೇ ಎಲ್ಲವೂ ಮುಸಕುಮುಸಕಾಯಿತು.

ಕಣ್ಣು ತೆರೆದು ನೋಡುವಾಗ್ಗೆ ನಾನು ನನ್ನ ಹಾಸಿಗೆಯ ಮೇಲೆ ಮಲಗಿದ್ದೆನು. ಹಾಸಿಗೆಯು ನೀರಿನಿಂದ ಒದ್ದೆಯಾಗಿದ್ದಿತು. ರಕ್ತದಿಂದ ಕೆಂಪಾಗಿದ್ದಿತು. ಅಹಲ್ಯೆಯು ಹಾಸಿಗೆಯ ಮೇಲೆ ನನ್ನ ಬಳಿಯಲ್ಲಿ ಕುಳಿತು ಕೊಂಡು ನನ್ನ ಕುತ್ತಿಗೆಯನ್ನು ಸವರುತ್ತಿದ್ದಳು. ನನ್ನ ಭಾವನು ನನ್ನ ಕಾಲಡಿಯಲ್ಲಿ ಅಳುತ್ತಾ ನಿಂತಿದ್ದನು. ನನ್ನ ಕ್ಷೌರಕತ್ತಿಯು ನೆಲದ ಮೇಲೆ ತುಂಡಾಗಿ ಬಿದ್ದಿತ್ತು. ಅದರ ಒಂದು ತುಂಡು ನೆಲಕ್ಕೆ ಬಲವಾಗಿ ಕಚ್ಚಿಕೊಂಡಿತ್ತು.

ಇದೆಲ್ಲ ಕಳೆದ ಮೇ ತಿಂಗಳಲ್ಲಿ ಸಂಭವಿಸಿತು. ನಾವೀಗ ಡಿಸೆಂಬರಿನಲ್ಲಿದ್ದೇವೆ. 'ಹಾಗಾದರೆ ನೀನು ಬಟ್ಟಾರೆ ಸಾಯಲಿಲ್ಲ!' ಎಂದು ನಿಮ್ಮಲ್ಲಿ ಯಾರಾದರೂ ಕೇಳಿ ನನ್ನ ಭಾವನ ಸಾಲಿನಲ್ಲಿ ಬರಲಿಕ್ಕಿಲ್ಲವೆಂದು ನಂಬುತ್ತೇನೆ!

ನನಗೆ ಒಂದು ಸಂಶಯವಿದೆ. ನಾನು ಅಂದು ನಿಜವಾಗಿಯೂ ಪರಲೋಕವನ್ನು ಸೇರಿದ್ದರೆ ಪೋಲೀಸರು ನನ್ನ ಮರಣವು ಆತ್ಮಹತ್ಯೆಯೆಂದು ಹೇಳುತ್ತಿದ್ದರೊ ಅಥವಾ ಖೂನಿ ಎಂದು ಹೇಳುತ್ತಿದ್ದರೊ?



## ಅಂಕು ಡೊಂಕು ಸಂಕಪಾಲ ಌ ಌ ಌ

ನಾನೊಮ್ಮೆ ರೈಲುಬಂಡಿಯಲ್ಲಿ ಕೂತುಕೊಂಡು ಕಾಸರಗೋಡಿಗೆ ಹೋಗುತ್ತಿದ್ದೆ. ಕಾಸರಗೋಡಿಗೆ ಹೋಗುವುದರಲ್ಲಿ ವಿಶೇಷವೇನು? ಎಂದು ನೀವು ಕೇಳಬಹುದು. ಇಲ್ಲ, ವಿಶೇಷವೇನೂ ಇಲ್ಲ; ಖಂಡಿತ ವಾಗಿಯೂ ಇಲ್ಲ. ಆದರೆ ನನಗೆ ಹಿಡಿದಿದ್ದ ಆ ಹುಚ್ಚು ಆ ರೈಲುಬಂಡಿ ಯಲ್ಲಿಯೇ ನನ್ನ ಪಾಲಿಗೆ ಬಂದುದಾಗಿತ್ತು.

ಬಂಡಿಯೊಳಗೆ ನಾನು ಕಿಟಕಿಯ ಬಳಿ ಕುಳಿತುಕೊಂಡು, ಕೈಯಲ್ಲಿ ಒಂದು ನೊವ್ವೆಲನ್ನು ಬಿಡಿಸಿ ಅಡಿ ಮೇಲಾಗಿ ಹಿಡಿದುಕೊಂಡು, ಕಿಟಕಿಯ ಹೊರಗೆ ನೋಡುತ್ತಾ ಅನೇಕಾನೇಕ ಗಾಳಿಗೋಪುರಗಳನ್ನು ಕಟ್ಟುವುದ ರಲ್ಲಿ ಮಗ್ನನಾಗಿದ್ದೆನು. ದೇಹಕ್ಕೆ ಚಲನೆಯಾಗುವುದೇ ತಡ, ಮನಸ್ಸು ಮಿಂಚಿನ ವೇಗದಿಂದ ಅತ್ತಿತ್ತ ಹಾರಾಡುತ್ತದೆ, ಎಂದು ನಿಮ್ಮ ಅನುಭವ ದಲ್ಲಿಯೂ ಇರಬಹುದು. ರೈಲುಬಂಡಿಯು ಚಲನೆಯಾದ ಅರ್ಧ ಗಂಟೆ ಯೊಳಗೆ ನಾನು ಮನಸ್ಸಿನಲ್ಲಿ ಎರಡು ನೊವ್ವೆಲುಗಳನ್ನೂ, ಆರು ಸಣ್ಣ ಕತೆಗಳನ್ನೂ, ಮೂರು ನಾಟಕಗಳನ್ನೂ ಕಲ್ಪಿಸಿಬಿಟ್ಟೆನು. ಮೂರನೆಯ ನೊವ್ವೆಲನ್ನು ಬರೆಯಲಿಕ್ಕೆ ನಾನು ಕೈಹಾಕಿದ್ದೆನು. ಮೂರ್ಖಶಿಖಾಮಣಿ ಯಾದ ಮದಿರೇಂದ್ರನು ಕಥಾನಾಯಕಿಯಾದ ಮಂಗಮತಿಯನ್ನು ಹೇಗೆ ತನ್ನ ಬಲೆಯಲ್ಲಿ ಹಾಕಿಕೊಳ್ಳೋಣವೆಂದು ಯೋಚಿಸುತ್ತಿದ್ದನು. ಅಷ್ಟರೊಳಗೆ ಬಂಡಿಯ ಆಚೆಯ ಕಡೆಯಿಂದ

ಅಂಕು ಡೊಂಕು ಸಂಕಪಾಲ
ಮೂರು ತಲೆ ಹತ್ತು ಕಾಲು

ಎಂಬ ಮಾತು ನನ್ನ ಕಿವಿಯೊಳಗೆ ಫಕ್ಕನೆ ಬಿತ್ತು. ನಾನು ನಿದ್ರೆಯಿಂದ ಎಚ್ಚೆತ್ತಂತಾದೆನು. ಮೆತ್ತಗಾದ ಹಾಸಿಗೆಯಿಂದ ಗಟ್ಟಿಯಾದ ನೆಲಕ್ಕೆ

ದೂಡಲ್ಪಟ್ಟಂತಾದೆನು. ಆಕಾಶದಿಂದ ಕೆಳಗೆ ನೂಕಲ್ಪಟ್ಟಂತಾದೆನು. ಬಾಯಿಗೆ ತಂದ ಅಮೃತದ ಬಟ್ಟಲು ನೆಲಕ್ಕೆ ಕೆಡಪಿದಂತಾಯಿತು. ಮೂರ್ಖಶಿಖಾಮಣಿ ಮದಿರೇಂದ್ರನೂ ಕಥಾನಾಯಕಿ ಮಂಗಮತಿಯೂ ಹುಟ್ಟಿದಲ್ಲೇ ನಾಶಹೊಂದಿದರು. ಮಾತ್ರವಲ್ಲ, ನಾನು ಆಗ ತಾನೇ ಕಲಿಸಿದ ಎರಡು ನೊವ್ಹೆಲುಗಳೂ, ಆರು ಕಥೆಗಳೂ, ಮೂರು ನಾಟಕಗಳೂ ಒಂದಿಷ್ಟು ಪಾದಧೂಳಿಯನ್ನು ಕೂಡ ತಮ್ಮ ಹಿಂದೆ ಬಿಡದೆ ಮಾಯವಾಗಿ ಹೋದುವು. ಇವುಗಳ ಬದಲಾಗಿ ನನ್ನ ಕಿವಿಯೊಳಗೆ

ಅಂಕು ಡೊಂಕು ಸಂಕಪಾಲ
ಮೂರು ತಲೆ ಹತ್ತು ಕಾಲು

ಎಂಬ ಶಬ್ದಗಳೇ ಝೇಂಕರಿಸಲಿಕ್ಕೆ ಪ್ರಾರಂಭಿಸಿದುವು.

ನಾನು ತಲೆಯೆತ್ತಿ ಬಂಡಿಯೊಳಗೆ ನೋಡಿದೆನು. ಬಂಡಿಯ ಆಚೆಯ ಮೂಲೆಯಲ್ಲಿ ನಾಲ್ಕು ಹುಡುಗರು-ಹತ್ತು ಹನ್ನೆರಡು ವರುಷ ಪ್ರಾಯದವರು-ಒಬ್ಬರಿಗೊಬ್ಬರು ಒಗಟುಗಳನ್ನು ಹಾಕುತ್ತಾ ಅವುಗಳನ್ನು ಬಿಚ್ಚುತ್ತಾ ಕೂತುಕೊಂಡಿದ್ದರು. ಬಂಡಿಯೊಳಗೆ ಇತರರಾರೂ ಇರಲಿಲ್ಲ. ಹುಡುಗರನ್ನು ದಿಟ್ಟಿಸಿ ನೋಡಿದೆನು. ಅವರು ಒಗಟಿನ ಸಾಮ್ರಾಜ್ಯದಲ್ಲಿ ತಲ್ಲೀನರಾಗಿದ್ದರು. ಅವರ ಎಳೆಯ ಮೋರೆಗಳೂ ಶುಭ್ರವಾದ ಕಣ್ಣುಗಳೂ ಉತ್ಸಾಹದಿಂದಲೂ ತವಕದಿಂದಲೂ ಹೊಳೆಯುತ್ತಿದ್ದುವು. 'ರಾಷ್ಟ್ರಬಂಧು'ವನ್ನು ಛಾಪಿಸುವಾಗ ನಮ್ಮ ಸಹಕಾರಿ ಮುದ್ರಣಾಲಯವು ಕೆಲಸದ ಎಂತಹ ಗಡಿಬಿಡಿಯಲ್ಲಿರುವುದೋ ಅಂತಹ ಗಡಿಬಿಡಿಯೇ ಈ ಚಿಕ್ಕ ಬಾಲಕರ ಮೆದುಳಿನಲ್ಲಿ ಸಂಭವಿಸುವಂತೆ ತೋರಿತು.

ಒಗಟುಗಳೆಂದರೆ ನನ್ನ ಜೀವ. ಒಗಟುಗಳೆಂದರೆ ನನ್ನ ಪ್ರಾಣ. ಒಗಟುಗಳಿಂದಲೇ ನಾನು ಈ ತನಕ ನಿಸ್ಸಾರವಾದ ಈ ಮರುಭೂಮಿಯಲ್ಲಿ ಜೀವಿಸಿರುತ್ತೇನೆ. ಬಂಡಿಯೊಳಗೆ ದೊಡ್ಡವರಾರೂ ಇಲ್ಲದಿರುವುದನ್ನು ನೋಡಿ ನನಗೆ ಧೈರ್ಯ ಬಂತು. ಕೂಡಲೇ ಆ ಹುಡುಗರಿದ್ದಲ್ಲಿಗೆ ಹೋಗಿ, 'ನಿಮ್ಮ ಆಟದಲ್ಲಿ ನಾನೂ ಸೇರುತ್ತೇನೆ. ಈಗ ಬಿಚ್ಚಬೇಕಾದ ಒಗಟು ಯಾವುದು ?' ಎಂದು ಕೇಳಿದೆನು.

ನಗಬೇಡಿ; ಸ್ತ್ರೀಯರು ಹುಟ್ಟಿದಾರಭ್ಯ ತಾಯಿಗಳಂತೆ ಆದರೆ ನಾವು ಗಂಡಸರು ಎಷ್ಟು ಬೆಳೆದರೇನು, ಎಷ್ಟು ಕಲಿತರೇನು? ಅಳಿದು ಹೋಗುವ ವರೆಗೆ ನಾವು ಮಕ್ಕಳೆ!

ಹುಡುಗರು ನನ್ನನ್ನು ಆಶ್ಚರ್ಯದಿಂದ ನೋಡಿದರು. ಅವರಲ್ಲೊಬ್ಬನು 'ಒಗಟು ಹೇಳಬೇಕೆ? ಕೇಳು—'

ಅಂಕು ಡೊಂಕು ಸಂಕಪಾಲ
ಮೂರು ತಲೆ ಹತ್ತು ಕಾಲು'

ಎಂದನು.

'ಸರಿ ತಿಳಿಯಿತು' ಅಂಕು ಡಂಕು ಸೊಂಕು ಪಾಲ....'

'ಅಲ್ಲ, ಅಲ್ಲ! ಅಂಕು ಡೊಂಕು ಸಂಕ ಪಾಲ'

'ಹೂಂ! ತಿಳಿಯಿತು; ಅಂಕು ಸೊಂಕು ಡಂಕ ಪಾಲ....'

'ಛೆ, ಛೆ, ಛೆ! ಹಾಗಲ್ಲ, ಅಂಕು ಡೊಂಕು ಸಂಕಪಾಲ'

'ಅಂಕು ಡೊಂಕು ಪಂಕ ಸಾಲ........ಮತ್ತೆ?'

'ಅಲ್ಲ, ಅಲ್ಲ. ಅಂಕು ಡೊಂಕು ಸಂಕ ಪಾಲ!'

'ತಿಳಿಯಿತು. ಅಂಕು ಡೊಂಕು ಸಂಕ ಪಾಲ....'

'ಮೂರು ತಲೆ.'

'ಮೂರು ತಲೆ......ಎಷ್ಟು ಕಾಲು ಎಂದು ಹೇಳಿದ್ದು?'

'ಹತ್ತು'

'ಅಂಕು ಡೊಂಕು ಸಂಕ ಪಾಲ. ಹತ್ತು ತಲೆ ಮೂರು ಕಾಲು ....ಅಲ್ಲವೆ?'

'ಅಲ್ಲ ಮೂರು ತಲೆ ಹತ್ತು ಕಾಲು.'

'ತಿಳಿಯಿತು. ಮೂರು ತಲೆ ಹತ್ತು ಕಾಲು, ಅಂಕು ಡೊಂಕು ಸಂಕಪಾಲ ಹತ್ತು ಕಾಲು....ಎಷ್ಟು ತಲೆ?'

'ಮೂರು ತಲೆ.'

'ಈಗ ಪುನಃ ಹೇಳುತ್ತೇನೆ. ಸರಿಯೋ ಎಂದು ನೋಡಿ—

ಅಂಕು ಪಂಕ ಡೊಂಕು ಸಾಲ
ಹತ್ತು ತಲೆ ಮೂರು ಕಾಲು!—ಅಲ್ಲವೇ?'

'ಅಲ್ಲವೇ ಅಲ್ಲ! ಅಂಕು ಡೊಂಕು ಸಂಕ ಪಾಲ, ಮೂರು ತಲೆ ಹತ್ತು ಕಾಲು!' ಎಂದು ಹುಡುಗರೆಲ್ಲರೂ ರಭಸದಿಂದ ಹೇಳಿದರು.

ಅವರು ಆ ಒಗಟನ್ನು ನನಗೆ ಕಲಿಸದೆ ಬಿಡಲಿಲ್ಲ. ಅವರು ಹತ್ತು ಮಿನಿಟುಗಳ ವರೆಗೆ ಕೊಟ್ಟ ಶಿಕ್ಷಣದ ದೆಸೆಯಿಂದ ಹೇಗಾದರೂ ಆ ಒಗಟಿನ ಶಬ್ದಗಳು ನನ್ನ ಮನಸ್ಸಿನಲ್ಲಿ ಮನೆಮಾಡಿಕೊಂಡವು. ಅಂಕು ಡೊಂಕು ಸಂಕ ಪಾಲ ಮೂರು ತಲೆ ಹತ್ತು ಕಾಲು, ಎಂದು ತಪ್ಪಿಲ್ಲದೆ ಹೇಳಲು ನನಗೆ ಸಾಧ್ಯವಾಯಿತು. ನಾನು ಆಗ ಪಟ್ಟ ಸಂತೋಷವು ಅಷ್ಟಿಷ್ಟಲ್ಲ. ನನ್ನ ಸಂಬಳದಲ್ಲಿ ವರ್ಷಾವಧಿಯ ಐದು ರೂಪಾಯಿಯ ಬಡ್ತಿ ಸಿಕ್ಕುತ್ತಿದ್ದಾಗ ಕೂಡ ನಾನು ಅಷ್ಟು ಸಂತೋಷವನ್ನು ಪಟ್ಟಿದ್ದಿಲ್ಲ.

'ಹುಡುಗರೆ! ಒಗಟನ್ನು ಹೇಗೂ ಕಲಿತುಕೊಂಡಂತಾಯಿತು. ಅದನ್ನು ಈಗ ಬಿಡಿಸುವ ಕೆಲಸ ಮಾತ್ರ ಉಳಿಯಿತು. ಅದರ ಉತ್ತರ ಹೇಳಬೇಡಿ! ನಾನೇ ಅದನ್ನು ಬಿಡಿಸುತ್ತೇನೆ' ಎಂದು ಹೇಳಿ ನಾನು ಮೊದಲು ಕೂತುಕೊಂಡಲ್ಲಿಗೆ ಹೋಗಿ ಆಲೋಚನೆ ಮಾಡಲಾರಂಭಿಸಿದೆನು :

ಅಂಕು ಡೊಂಕು ಸಂಕ ಪಾಲ....ಅಂಕು ಡೊಂಕು ಸಂಕ ಪಾಲ ....ಏನಾಗಿರಬಹುದು? ಅಂಕು....ಅಂಕು....ಅಂಕೆಯಾಗಿದ್ದರೆ ಚಿಂತೆಯಿದ್ದಿಲ್ಲ; ಅಂಕೆಯಾದರೆ ಅರ್ಥವುಂಟು. ಒಂದು ವೇಳೆ ಅಂಕ ಎಂದು ಹೇಳಿದರೂ ಅರ್ಥಮಾಡಬಹುದು. ಆದರೆ ಅಂಕು? ..ಹೋಗಲಿ ಮುಂದೆ ನೋಡೋಣ. ಡೊಂಕು. ಈ ಶಬ್ದದಲ್ಲಿ ತೊಂದರೆ ಇಲ್ಲ. ಡೊಂಕು. ಯಾವ ವಸ್ತು ಡೊಂಕಾಗಿರುತ್ತದೆ? ತಿಳಿಯಿತು, ನಾಯಿಯ ಬಾಲ! ಬಾಳೆ ಹಣ್ಣು! .... ಆದರೆ ಇವೆರಡೂ ಅಲ್ಲ....ಡೊಂಕು ಸಂಕ ಅಂತೆ. ಡೊಂಕು ಸಂಕ ಯಾವುದಾಗಿರಬಹುದಪ್ಪ? ನಾನು ನೋಡಿದ ಯಾವ ಸಂಕವೂ ಡೊಂಕಾಗಿಲ್ಲ. ಉದಾಹರಣೆ:- ಉಳ್ಳಾಲ ಸಂಕ, ಗುರುಪುರ ಸಂಕ, ಪಾಣೆಮಂಗಳೂರು ಸಂಕ, ಇವುಗಳಲ್ಲಿ ಒಂದಾದರೂ ಡೊಂಕಾಗಿಲ್ಲ. ಅಥವಾ ಸಂಕ ಎಂಬ ಶಬ್ದವು ಪಾಲ ಎಂಬ ಶಬ್ದದ ಒಟ್ಟಿಗೆ ಬರಬಹುದೇ? ಸಂಕಪಾಲವಾಗಿರಬಹುದೇ? ಸಂಕಪ್ಪನೆಂದು

ಕೇಳಿದ್ದೇನೆ, ಶಿಶುಪಾಲನೆಂದೂ ಕೇಳಿದ್ದೇನೆ.... ಸಂಕಪಾಲನೆಂದೂ ಪುರಾಣದಲ್ಲಿ ಯಾರಾದರೂ ಇರಬಹುದೆ? ಹಾಗಾದರೆ ಡೊಂಕು ಸಂಕ ಪಾಲನೆಂದರೆ ಯಾರಪ್ಪಾ? ಇಲ್ಲ, ಒಂದೂ ಅರ್ಥವಾಗುವುದಿಲ್ಲ. ನೋಡೋಣ, ಮುಂದೆ ನೋಡೋಣ. ಮೊದಲು ಸಂಕಪಾಲನೆಂಬ ಒಬ್ಬ ಡೊಂಕು ಪುರುಷನು ಇದ್ದಾನೆಂದು ತಿಳಿದುಕೊಳ್ಳೋಣ. ಅವನಿಗೆ ಮೂರು ತಲೆ ಹತ್ತು ಕಾಲುಗಳಂತೆ. ಅದು ಹೇಗಾಗುವುದಪ್ಪಾ! ಡೊಂಕು ಪುರುಷನಿಗೆ ಮೂರು ತಲೆ ಇರುವುದೂ ಆಶ್ಚರ್ಯವಲ್ಲ. ಆದರೆ ಮೂರು ತಲೆಯಿದ್ದವರಿಗೆ ಹತ್ತು ಕಾಲುಗಳಿರುವ ಬಗೆಹೇಗೆ? ರಾವಣನಿಗೆ ಹತ್ತು ತಲೆಗಳಿದ್ದರೂ ಇಪ್ಪತ್ತು ಕೈಗಳಿದ್ದರೂ ಕಾಲುಗಳು ಎರಡೇ. ಒಂದು ವೇಳೆ ಮೂರು ತಲೆಗಳಿದ್ದವನಿಗೆ ಆರು ಕಾಲುಗಳಿದ್ದರೂ ಚಿಂತೆ ಯಿದ್ದಿಲ್ಲ. ಅದು ಸಹಜವಾದುದೆ. ಆದರೆ ಹತ್ತು ಕಾಲುಗಳು!.. ಪುನಃ ನೋಡೋಣ. ಮೂರು ತಲೆಗಳು ಯಾರುಯಾರಿಗೆ ಇರುತ್ತವೆ? .... ಬ್ರಹ್ಮ, ವಿಷ್ಣು, ಮಹೇಶ್ವರ–ದತ್ತಾತ್ರೇಯ! ಹೌದು ದತ್ತಾತ್ರೇಯ!! ..ಆದರೆ ಪುನಃ ತೊಡಕು ಬಂತು. ರವಿವರ್ಮನು ದತ್ತಾತ್ರೇಯನಿಗೆ ಮೂರು ತಲೆಗಳನ್ನು ಕೊಟ್ಟು ಬಿಡಿಸಿದರೂ ಎರಡೇ ಕಾಲುಗಳನ್ನು ಬಿಡಿಸಿ ದ್ದಾನೆ. ಇನ್ನುಳಿದ ಎಂಟು ಕಾಲುಗಳನ್ನು ಎಲ್ಲಿಂದ ತರುವುದಪ್ಪ! .. ದತ್ತಾತ್ರೇಯ, ಮೂರು ತಲೆ, ಎರಡು ಕಾಲು, ಇನ್ನೂ ಎಂಟು ಕಾಲು ಬೇಕು. ತಿಳಿಯಿತು! ತಿಳಿಯಿತು!! ತಿಳಿಯಿತು!!!

ನಾನು ಆಹ್ಲಾದದಿಂದ ಹುಡುಗರಿದ್ದೆಡೆಗೆ ಹೋದೆನು. 'ಏನು ಒಗಟಿಗೆ ಉತ್ತರ ಸಿಕ್ಕಿತೆ?' ಎಂದು ಅವರು ಕೇಳಿದರು.

'ಹೌದು, **ದತ್ತಾತ್ರೇಯ**!' ಎಂದು ಹೇಳಿದೆನು.

'ದತ್ತಾತ್ರೇಯ? ಅದು ಹೇಗಾಗುವುದು?' ಎಂದು ಅವರು ಆಶ್ಚರ್ಯದಿಂದ ಕೇಳಿದರು.

'ಹೇಗಾಗುವುದೆಂದರೆ ದತ್ತಾತ್ರೇಯನಿಗೆ ಮೂರು ತಲೆ....'

'ಆದರೆ ಎರಡೇ ಕಾಲು'

'ಅಹುದು. ಎರಡೇ ಕಾಲು. ಆದರೆ ಅವನ ಸಂಗಡ ಎರಡು

ಒಳ್ಳೆಯ ಆಂಗ್ಲ ಬೇಟೆ ನಾಯಿಗಳನ್ನು ರವಿವರ್ಮನು ಬಿಡಿಸಿರುವುದು ನಿಮಗೆ ಗೊತ್ತಿಲ್ಲವೇ ?

'ಗೊತ್ತಿದೆ. ಆದರೇನು ?'

'ಆದರೇನೆಂದರೆ ? ದತ್ತಾತ್ರೇಯನ ಎರಡು ಕಾಲುಗಳು ಮತ್ತು ಈ ಎರಡು ನಾಯಿಗಳ ಎಂಟು ಕಾಲುಗಳು ಒಟ್ಟಿಗೆ ಹತ್ತು ಕಾಲುಗಳಾಗ ಲಿಲ್ಲವೆ ?'

ಇದನ್ನು ಕೇಳಿ ಒಂದು ಕ್ಷಣ ಹುಡುಗರು ಸುಮ್ಮನಾದರು. ಆದರೆ ಹೆಚ್ಚು ಸಮಯದ ವರೆಗೆ ಅಲ್ಲ. ಒಗಟು ಹಾಕಿದ ಹುಡುಗನು ಕೂಡಲೆ 'ನೀನು ಹೇಳಿದುದು ತಪ್ಪು ! ಏಕೆಂದರೆ ನಿನಗೆ ತಲೆಯಿಲ್ಲವೆಂದು ತಿಳಿದು ಕೊಂಡರೂ (ಹುಡುಗರು ಎಷ್ಟು ಬಾಯಿ ಬಡಕರಪ್ಪ) ಇದ್ದುದನ್ನು ಹೇಳಲಿಕ್ಕೆ ಸ್ವಲ್ಪವಾದರೂ ಹಿಂಜರಿಯುವುದಿಲ್ಲ ! ಆ ಎರಡು ನಾಯಿ ಗಳಿಗೆ ಎರಡು ತಲೆಗಳಿವೆ ಎಂದು ಗ್ರಹಿಸಬೇಕಲ್ಲವೆ ? ಅವುಗಳ ಎರಡು ತಲೆಗಳೂ ದತ್ತಾತ್ರೇಯನ ಮೂರು ತಲೆಗಳೂ ಕೂಡಿ ಐದು ತಲೆಗಳಾ ಗುತ್ತವೆ. ಒಗಟಿನಲ್ಲಿ ಮೂರೇ ತಲೆಗಳು ಎಂದು ಹೇಳಿದೆ.' ಎಂದನು.

ಇದನ್ನು ಕೇಳಿ ನನಗೆ ಸಿಡಿಲು ಬಡಿದಂತಾಯಿತು. ಇದ್ದಲ್ಲಿಗೇ ನಾನು ಎರಡು ಮೊಳ ಗಿಡ್ಡವಾದೆನು. ನನ್ನ ಮುಖವು ಎಷ್ಟು ಸಣ್ಣದಾಯಿ ತೆಂದರೆ ನಾನು ಮಾತನಾಡುವುದು ಬಾಯಿಯಿಂದಲೋ ಕಣ್ಣಿನಿಂದಲೋ ಮೂಗಿನಿಂದಲೋ, ಕಿವಿಗಳಿಂದಲೋ ಅಥವಾ ಮೀಸೆಗಳಿಂದಲೋ ಎಂದು ಹೇಳಲು ನನಗೆ ಕಷ್ಟವಾಯಿತು.

ಆದರೂ, 'ಉತ್ತರ ಹೇಳಬೇಡಿ, ನಾನೇ ಆಲೋಚಿಸಿ ಹೇಳುತ್ತೇನೆ' ಎಂದು ಹೇಳಿ ಪುನಃ ನಾನು ಮೊದಲು ಕೂತಲ್ಲಿಗೆ ಹೋಗಿ ಆಲೋಚಿಸ ತೊಡಗಿದೆನು.

ಸ್ವಲ್ಪ ಸಮಯದ ಅನಂತರ ಕುಂಬಳೆ ಸ್ಟೇಶನು ಬಂತು. ಹುಡು ಗರು ನಾಲ್ವರೂ ಬಂಡಿಯಿಂದ ಇಳಿದರು. ಇಳಿಯುವಾಗ, 'ಈಗ ಲಾದರೂ ನಾವು ಹೇಳಬಹುದೇ ?' ಎಂದು ಕೇಳಿದರು. ಆದರೆ ನಾನು ಸಮ್ಮತಿಸಲಿಲ್ಲ. ಅವರು ನಗುತ್ತಾ ಹೋದರು. ನಾನು ಬಂಡಿಯೊಳಗೆ ಆಲೋಚಿಸುತ್ತಾ ಕುಳಿತುಕೊಂಡೆನು.

ಅಂಕು ಡೊಂಕು ಸಂಕಪಾಲ..ಅಂಕು ಡೊಂಕು ಸಂಕಪಾಲ.. ಮೂರು ತಲೆ ಹತ್ತು ಕಾಲು..ಅಂಕು ಡೊಂಕು ಸಂಕಪಾಲ ಮೂರು ತಲೆ ಹತ್ತು ಕಾಲು..ಅರೇ, ಇದೇನು ? ರೈಲು ಬಂಡಿಯೂ ಕೂಡ ನನ್ನ ಒಗಟನ್ನೇ ತೆಗೆದುಕೊಂಡಿತಲ್ಲ ! ರೈಲು ಬಂಡಿಗೂ ನನ್ನ ಹುಚ್ಚು ಹಿಡಿಯಿತೆ ? 'ಅಂಕು ಡೊಂಕು ಸಂಕ ಪಾಲ..ಅಂಕು ಡೊಂಕು ಸಂಕಪಾಲ, ಮೂರು ತಲೆ ಹತ್ತು ಕಾಲು..ಮೂರು ತಲೆ ಹತ್ತು ಕಾಲು..ಅಂಕು ಡೊಂಕು ಸಂಕಪಾಲ ಮೂರು ತಲೆ ಹತ್ತು ಕಾಲು' ಎಂದು ಬಂಡಿಯು ಹೆಜ್ಜೆ ಇಡುತ್ತಾ ಮುಂದಕ್ಕೆ ಹೋಯಿತು !!....

ಅಂದಿನಿಂದ ನಾನು ಹುಚ್ಚನಾದೆನು. ನನ್ನ ಹುಚ್ಚು ದಿನೇ ದಿನೇ ಪ್ರಬಲವಾಗುತ್ತಾ ಬಂತು. ಕಿವಿಯೊಳಗೆ ಆ ಒಗಟಿನ ಶಬ್ದಗಳ ಧ್ವನಿಯೇ ತುಂಬಿಹೋಯಿತು. ನನಗೆ ತಿಳಿಯದೇನೇ ನಾನು ಆ ಶಬ್ದಗಳನ್ನು ಯಾವಾಗಲೂ ಉಚ್ಚರಿಸಲಾರಂಭಿಸಿದೆನು. ನಿದ್ರಾವಸ್ಥೆಯಲ್ಲಿ ಕೂಡ ನಾನು ಕೂತುಕೊಂಡು ಅಂಕು ಡೊಂಕು ಸಂಕಪಾಲ, ಮೂರು ತಲೆ ಹತ್ತು ಕಾಲು ಎಂದು ಹೇಳುತ್ತಿದ್ದೆನೆಂದು ನನ್ನ ಸುಶಿಯು ಹೇಳುತ್ತಿದ್ದಳು. ನನ್ನ ಪ್ರತಿ ಒಂದು ಕೆಲಸವೂ ಆ ಒಗಟಿನ ಶಬ್ದಗಳ ಸರಣಿಯನ್ನೇ ಅನುಸರಿಸಿಕೊಂಡು ಹೋಗಲಾರಂಭಿಸಿತು. 'ರೈಟ್, ಲೆಫ್ಟ' ಎಂದು ಸಿಪಾಯಿಗಳು ನಡೆಯುವಂತೆ 'ಅಂಕು ಡೊಂಕು ಸಂಕಪಾಲ' ಎಂದು ನಡೆಯುವೆನು. ಸ್ನೇಹಿತರು ಮಾತನಾಡಿದರೆ 'ಅಂಕು ಡೊಂಕು ಸಂಕಪಾಲ' ಎಂದು ಹೇಳುವೆನು. ನನ್ನ ಮಗು ಜಯವಂತಿಯು ಅಳಲಾರಂಭಿಸಿದರೆ 'ಅಂಕು ಡೊಂಕು ಸಂಕಪಾಲ' ಎಂದು ಹಾಡಿ ಸಂತವಿಸುವೆನು. ಹುಡುಗರಿಗೆ ಪಾಠ ಹೇಳಿಕೊಡುವಾಗ ಮಾತಿನ ಮಧ್ಯದಲ್ಲಿ ಆ ಒಗಟಿನ ಶಬ್ದಗಳನ್ನೇ ಫಕ್ಕನೆ ಹೇಳುವೆನು. ಒಮ್ಮೆ ಕೊಲೇಜಿನ ಪ್ರಿನ್ಸಿಪಾಲರು ಏನನ್ನೋ ನನ್ನೊಡನೆ ಕೇಳಿದರು. 'ಅಂಕು ಡೊಂಕು ಸಂಕಪಾಲ, ಮೂರು ತಲೆ ಹತ್ತು ಕಾಲು' ಎಂದು ಕೂಡಲೆ ಉತ್ತರ ಕೊಟ್ಟೆನು. ನನಗೆ ಸೌಖ್ಯವಿಲ್ಲದಿರಬಹುದೆಂದು ಎಣಿಸಿ, ಅವರು ನನ್ನನ್ನು ಮನೆಗೆ ಹೋಗಲಿಕ್ಕೆ ಹೇಳಿದರು.

ನಾನು ಎಚ್ಚತ್ತಂತಾದೆನು. ನನ್ನ ಸ್ಥಿತಿಯು ನನಗೇ ಭೀಕರವಾಗಿ ತೋರಿತು. ಆ ಭಯಂಕರವಾದ ಶಬ್ದಗಳನ್ನು ಮರೆತುಹಾಕಲಿಕ್ಕೆ ಶತ ಪ್ರಯತ್ನಗಳನ್ನು ಮಾಡಿದೆನು. ಆದರೆ ಅವುಗಳು ನನ್ನ ರಕ್ತದ ಪ್ರತಿ ಒಂದು ಅಣುವಿನಲ್ಲಿ ಅವಿತುಕೊಂಡು ನನ್ನ ಪ್ರಯತ್ನಗಳನ್ನೆಲ್ಲಾ ನಿಷ್ಫಲ ವಾಗಿ ಮಾಡಿಬಿಟ್ಟವು. ಕಠಿಣವಾದ ಈ ಮಾನಸಿಕ ರೋಗಕ್ಕೆ ನಾನು ಪೂರ್ಣ ಆಹುತಿಯಾದೆನು. ಈ ರೋಗ ತಗಲಿದ ಎಂಟು ದಿನಗಳೊಳಗೆ ಹನ್ನೆರಡು ಪೌಂಡು ನನ್ನ ಭಾರದಲ್ಲಿ ಕಡಿಮೆಯಾಯಿತು. ಡಾಕ್ಟರರ ಉಪದೇಶದಿಂದ ಒಂದು ತಿಂಗಳ ರಜೆಯನ್ನು ಪಡಕೊಂಡು ದೊಡ್ಡ ದೊಡ್ಡ ಊರುಗಳನ್ನೆಲ್ಲ ಸುತ್ತಾಡಿದೆನು. ಸುಮಾರು ನಾನ್ನೂರು ಐನೂರು ರೂಪಾಯಿಗಳನ್ನು ಪುಡಿಪುಡಿ ಮಾಡಿದೆನು. ಆದರೆ ನಾನು ಎಷ್ಟು ಪ್ರಯತ್ನಪಟ್ಟರೂ ಪಿಶಾಚದಂತೆ ನನಗೆ ಹಿಡಿದಿದ್ದ ಆ ಶಬ್ದಗಳು ಎಷ್ಟುಮಾತ್ರಕ್ಕೂ ನನ್ನನ್ನು ತೊಲಗಿ ಹೋಗಲಾರದೆ ಇದ್ದುವು. ಹತಾಶ ನಾಗಿ ನಾನು ಮಂಗಳೂರಿಗೆ ಮರಳಿ ಬಂದೆನು. ಈ ಊರಿನಲ್ಲಿ ಅಲೆದಾಡು ತ್ತಿರುವ ಆರೇಳು ಹುಚ್ಚರ ಸಂಖ್ಯೆಯನ್ನು ಏರಿಸುವ ಭಾರವು ನನ್ನ ಪಾಲಿಗೆ ಬರುವುದೋ ಎಂಬ ಭೀತಿಯು ನನ್ನನ್ನು ಇನ್ನೂ ಹುಚ್ಚನನ್ನಾಗಿ ಮಾಡಿತು.

ಇಷ್ಟಾದರೂ ನನ್ನ ಮಾನಸಿಕ ರೋಗದ ಗುಟ್ಟು ನನಗೆ ಮತ್ತು ನನ್ನ ಸುಶಿಗೆ ಮಾತ್ರ ತಿಳಿದಿತ್ತು. ಇತರರಿಗೆ ತಿಳಿಯದಂತೆ ನಾವಿಬ್ಬರೂ ಬಹಳ ಜಾಗರೂಕತೆಯಿಂದ ವರ್ತಿಸುತ್ತಿದ್ದೆವು. ಆದರೆ ದಿನ ಹೋಗುತ್ತಾ ನನ್ನ ಹುಚ್ಚುತನದ ಪರಮಾವಧಿಯು ಸಮೀಪಿಸಿದಂತೆ ತೋರಿತು. ಗುಟ್ಟನ್ನು ಇನ್ನು ಹೆಚ್ಚು ಸಮಯ ಬಚ್ಚಿಡುವುದಕ್ಕೆ ಕಷ್ಟವಾಗುತ್ತಾ ಬಂತು. ನಾನು ತೀರಾ ಹತಾಶನಾದೆನು.

ಹೀಗಿರಲು ಒಂದು ದಿನ ಹರಿಕಮತನು ನನಗೆ ಸೌಖ್ಯವಿಲ್ಲವೆಂದು ಕೇಳಿ ನಮ್ಮ ಮನೆಗೆ ಬಂದನು. ಅವನು ಬರುವಾಗ ನಾನು ಹಾಸಿಗೆಯ ಮೇಲೆ ಬಗ್ಗಿ 'ಅಂಕು ಡೊಂಕು ಸಂಕಪಾಲ' ಎಂದು ೮೯೭,೬೫೪,೮೭೩ ನೇ ಸಾರಿ ಮನಸ್ಸಿನಲ್ಲಿ ತಿರುಗಿಸುತ್ತಿದ್ದೆ. ನನ್ನನ್ನು ನೋಡುತ್ತಲೇ 'ಏನು! ನಿನಗೆ ಸೌಖ್ಯವಿಲ್ಲವೇ?' ಎಂದು ಕೇಳಿದನು.

'ಏನೂ ಇಲ್ಲ. ಕೂತುಕೋ, ಹರಿ. 'ಅಂಕು ಡೊಂಕು ಸಂಕಪಾಲ, ಮೂರು ತಲೆ ಹತ್ತು ಕಾಲು' ಎಂದೆನು.

'ಏನೇನು?' ಎಂದು ಅವನು ಆಶ್ಚರ್ಯದಿಂದ ಕೇಳಿದನು.

'ಅಂಕು ಡೊಂಕು ಸಂಕಪಾಲ ಮೂರು ತಲೆ ಹತ್ತು ಕಾಲು' ಎಂದು ೮೯೭,೬೫೪,೮೭೫ ನೆಯ ಸಾರಿ ಹೇಳಿದೆನು.

'ಬಹಳ ಚಲೋದಾದ ಒಗಟು, ನೋಡೋಣ, ಇನ್ನೊಮ್ಮೆ ಹೇಳು' ಎಂದನು.

'ಅಂಕು ಡೊಂಕು ಸಂಕಪಾಲ, ಮೂರು ತಲೆ ಹತ್ತು ಕಾಲು'

'ಏನು, ಏನು? ಅಂಕು ಡಂಕು ಸೊಂಕು ಪಾಲ?....

'ಅಲ್ಲ, ಅಲ್ಲ! ಅಂಕು ಡೊಂಕು ಸಂಕಪಾಲ.'

'ಹೂಂ, ತಿಳಿಯಿತು; ಅಂಕು ಸೊಂಕು ಡಂಕಪಾಲ....'

'ಛೆ, ಛೆ, ಛೆ! ಹಾಗಲ್ಲ. ಅಂಕು ಡೊಂಕು ಸಂಕಪಾಲ.'

'ಅಂಕು ಡೊಂಕು ಪಂಕ ಸಾಲ....ಮತ್ತೆ?'

'ಅಲ್ಲ, ಅಲ್ಲ! ಅಂಕು ಡೊಂಕು ಸಂಕಪಾಲ!'

'ತಿಳಿಯಿತು. ಅಂಕು ಡೊಂಕು ಸಂಕಪಾಲ..'

'ಮೂರು ತಲೆ'

'ಮೂರು ತಲೆ..ಎಷ್ಟು ಕಾಲು ಎಂದು ಹೇಳಿದ್ದು?

'ಹತ್ತು'

'ಅಂಕು ಡೊಂಕು ಸಂಕಪಾಲ, ಹತ್ತು ತಲೆ ಮೂರು ಕಾಲು.. ಅಲ್ಲವೇ?'

'ಅಲ್ಲ—ಮೂರು ತಲೆ. ಹತ್ತು ಕಾಲು.'

'ತಿಳಿಯಿತು. ಮೂರು ತಲೆ, ಹತ್ತು ಕಾಲು. ಅಂಕು ಡೊಂಕು ಸಂಕಪಾಲ, ಹತ್ತು ಕಾಲು..ಎಷ್ಟು ತಲೆ?'

'ಮೂರು ತಲೆ'

'ಈಗ ಸರಿಯಾಗಿ ತಿಳಿಯಿತು. ನೋಡು, ನಾನು ಪುನಃ ಹೇಳು ತೇನೆ. ಸರಿಯೋ ಎಂದು ನೋಡು—'



“ಭೇಷ್! ಒಗಟು ಸರಿಯಾಗಿ ತಿಳಿಯಿತು. ಅದನ್ನು ಬಿಚ್ಚುವ ಕೆಲಸ ಮಾತ್ರ ಉಳಿಯಿತು.”

'ಹೂಂ!'

'ಅಂಕು ಡೊಂಕು ಸಂಕಪಾಲ ಮೂರು ತಲೆ ಹತ್ತು ಕಾಲು-ಅಲ್ಲವೇ??

'ಭಲೆ!'

'ಭೇಷ್! ಒಗಟು ಸರಿಯಾಗಿ ತಿಳಿಯಿತು ಇನ್ನು ಅದನ್ನು ಬಿಚ್ಚುವ ಕೆಲಸ ಮಾತ್ರ ಉಳಿಯಿತು' ಎಂದು ಹೇಳುತ್ತಾ ಹರಿಕಮಂತನು ಹೊರಟು ಹೋದನು!

ನಾನು ಕೂಡಲೇ ಎದ್ದು ಕೂತುಕೊಂಡೆನು. ಕೂತಲ್ಲಿಂದ ನಿಂತೆನು. ನಿಂತಲ್ಲಿಂದ ನನ್ನ ಸುಶಿಯು ಇದ್ದೆಡೆಗೆ ಓಡಿ ಹೋದೆನು. ಅವಳು ತವಕದಿಂದ 'ಏನು ? ಏನು ?' ಎಂದು ಕೇಳಿದಳು.

'ನನ್ನ ಪಿಶಾಚವು ನನ್ನನ್ನು ತೊಲಗಿಹೋಯಿತು!' ಎಂದು ಕೂಗಿ ಹೇಳಿದೆನು.

ಸುಶಿಯ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದುವು. 'ನಿಜವಾಗಿಯೂ ತೊಲಗಿ ಹೋಯಿತೇ?' ಎಂದು ಕೇಳಿದಳು.

'ಹೌದು. ನನ್ನನ್ನು ಬಿಟ್ಟು ಈಗ ಹರಿಕಮಂತನನ್ನು ಹಿಡಿದಿದೆ' ಎಂದೆನು.

---

# ಪತ್ತೇದಾರನಾದ ಸೂಕ್ಷ್ಮಬುದ್ಧಿಯು

## ಅತ್ಯದ್ಭುತವಾದ ಪತ್ತೇದಾರಿ ಕಥೆ!

### ಗ್ರಂಥಕರ್ತನ ಪ್ರಸ್ತಾವನೆ

ಕನ್ನಡ ಭಾಷಾಸೇವೆಯನ್ನು ಮಾಡಬೇಕೆಂದು ಹಲವು ವರ್ಷಗಳಿಂದ ಆಲೋಚಿಸಿ ಈ ಚಿಕ್ಕ ಪತ್ತೇದಾರಿ ಕಾದಂಬರಿಯನ್ನು ಬರೆಯಲು ಉದ್ಯುಕ್ತನಾದೆನು. ಪ್ರಥಮ ಪ್ರಯತ್ನದ ದೋಷಗಳೆಲ್ಲವೂ ಇದರಲ್ಲಿ ಕಂಡುಬರಬಹುದು. ಅವುಗಳನ್ನು ವಿದ್ವಜ್ಜನರು ಪ್ರೇಮಪೂರ್ವಕವಾಗಿ ಲಾಲಿಸಿ ತಿದ್ದಿ ಕಳುಹಿಸಿದರೆ ಇನ್ನೊಂದಾವೃತ್ತಿಯಲ್ಲಿ (ಅಂದರೆ ಇನ್ನೊಂದು ಜನ್ಮದಲ್ಲಿ) ಅವುಗಳನ್ನು ಸರಿಗೊಳಿಸುವೆನು. ಹೆಂಗಸರೂ ಮಕ್ಕಳೂ ಇದನ್ನು ಸುಲಭವಾಗಿ ಓದಿ ತಿಳಿದುಕೊಳ್ಳುವಂತೆ ಸರಳವಾದ ಸುಲಲಿತವಾದ ಶೈಲಿಯಲ್ಲಿಯೇ ಇದನ್ನು ಬರೆದಿರುತ್ತೇನೆ.

ಇತಿ ಸಜ್ಜನ ವಿಧೇಯ

**ಗ್ರಂಥಕರ್ತ**

## ಭಾಗ ಒಂದು

### ಅಧ್ಯಾಯ ಒಂದು

### ಸೂಕ್ಷ್ಮಬುದ್ಧಿಯ ಪರಿಚಯ

ಪಾಠಕ ಮಹಾಶಯ! ಸೂಕ್ಷ್ಮಬುದ್ಧಿಗೆ ಬೇರೊಂದು ಹೆಸರು ಇರಬಹುದೋ ಏನೋ, ನಮಗೆ ತಿಳಿಯದು. ಆದರೆ ಸೂಕ್ಷ್ಮಬುದ್ಧಿಯೆಂದೇ ಅವನು ನಮಗೆ ಪರಿಚಿತನು. ನೀವು ತೀಕ್ಷ್ಣಬುದ್ಧಿಯೆಂಬ ದೊಡ್ಡ ಪತ್ತೇದಾರನ ಕುರಿತು ಕೇಳಿರಬಹುದು. ನಮ್ಮ ಸೂಕ್ಷ್ಮಬುದ್ಧಿಯು

ಅವನ ತಮ್ಮನಾಗಿರಲೂ ಇರಬಹುದು, ಅಣ್ಣನಾಗಿಯೂ ಇರಬಹುದು; ಅಜ್ಜನಾಗಿರಲೂ ಇರಬಹುದು, ಮೊಮ್ಮಗನಾಗಿರಲೂ ಇರಬಹುದು. ನದಿಯ ಮೂಲವನ್ನೂ ಯತಿಯ ಕುಲವನ್ನೂ ನಾವು ಪರಿಶೋಧಿಸಬಾರದಂತೆ. ಅಂತೇ ಪತ್ತೇದಾರರ ಕುಲಮೂಲವನ್ನೂ ಪರಿಶೋಧಿಸಬಾರದೆಂದು ನಮ್ಮ ಮತ.

ಸೂಕ್ಷ್ಮಬುದ್ಧಿಯನ್ನು ನಾವು ಸುಮ್ಮನೆ ಸೂಕ್ಷ್ಮಬುದ್ಧಿಯೆಂದು ಕರೆಯುತ್ತಿರಲಿಲ್ಲ. ಅವನ ಬುದ್ಧಿಯು ಸೂಕ್ಷ್ಮವಾದುದರಿಂದಲೇ ನಾವು ಅವನನ್ನು ಸೂಕ್ಷ್ಮಬುದ್ಧಿಯೆಂದು ಕರೆಯುತ್ತಿರುವೆವು. ಕ್ಷೀರಸಾಗರ ಭಟ್ಟನಲ್ಲಿ ಮಜ್ಜಿಗೆಗೆ ತತ್ವಾರವಿರುವುದೆಂದು ಕೇಳಿರುವೆವು. ಇದು ಎಷ್ಟರ ಮಟ್ಟಿಗೆ ನಿಜವೆಂದು ನಾವು ಹೇಳಲಾರೆವು. ಆದರೆ ಸೂಕ್ಷ್ಮಬುದ್ಧಿಯ ತಲೆಯಲ್ಲಿ ಮಿದುಳಿಗೆ ತತ್ವಾರವಿಲ್ಲವೆಂದು ನಾವು ಖಂಡಿತವಾಗಿಯೂ ಹೇಳಬಲ್ಲೆವು. ಅವನ ಬುದ್ಧಿಯ ಸೂಕ್ಷ್ಮತೆಯನ್ನು ನಾವು ಎಷ್ಟು ಕೊಂಡಾಡಿದರೂ ಸಾಲದು.

ಒಂದು ದಿನ ರಾತ್ರಿ ಎರಡು ಗಂಟೆ. ಸುತ್ತಲೂ ಗಾಢಾಂಧಕಾರ. ಹಾಳೂರಿನ ಪೋಲೀಸು ಕಾನ್ಸ್‌ಟೇಬಲನು ತನ್ನ ಕೆಲಸವನ್ನು ಮುಗಿಸಿಕೊಂಡು ತನ್ನ ಮನೆಗೆ ಹೋಗುತ್ತಿದ್ದನು. ಫಕ್ಕನೆ ದಾರಿಯಲ್ಲಿ ಚೂರಿಯಿಂದ ತಿವಿಯಲ್ಪಟ್ಟಿದ್ದ ಒಂದು ಮೃತಶರೀರವನ್ನು ನೋಡಿ ಬೆಚ್ಚಿಬಿದ್ದನು. ಚೂರಿಯು ಮೃತಶರೀರದ ಹೃದಯವನ್ನು ಇನ್ನೂ ಕಚ್ಚಿಕೊಂಡಿತ್ತು. ದೈವವಶಾತ್ ಸೂಕ್ಷ್ಮಬುದ್ಧಿಯು ಆ ಸಮಯದಲ್ಲಿ ಹಾಳೂರಿನಲ್ಲೇ ಇದ್ದನು. ಕೂಡಲೇ ಅವನನ್ನೂ ಗ್ರಾಮದ ಪಟೇಲ ಸಿದ್ದಯ್ಯಗೌಡನನ್ನೂ ಆ ಕೊನ್ಸ್‌ಟೇಬಲನು ಮೃತಶರೀರವಿದ್ದೆಡೆಗೆ ಕರೆದುಕೊಂಡು ಹೋದನು. ಸೂಕ್ಷ್ಮಬುದ್ಧಿಯು ಮೃತಶರೀರವನ್ನು ಅರ್ಧತಾಸಿನ ವರೆಗೆ ಚೆನ್ನಾಗಿ ಪರೀಕ್ಷಿಸಿ ನೋಡಿದನು. ಅವನ ಸಂಗಾತಿಯರಿಬ್ಬರೂ 'ಚಾ, ಚೂ' ಅನ್ನದೆ ಅವನನ್ನೆ ಮೆಚ್ಚಿಕೆಯಿಂದ ನೋಡುತ್ತ ನಿಂತರು. ಅರ್ಧತಾಸಿನ ಅನಂತರ ಸೂಕ್ಷ್ಮಬುದ್ಧಿಯು ಎದ್ದು ನಿಂತನು; ಸ್ವಲ್ಪ ಸಮಯದ ವರೆಗೆ ತಲೆದೂಗುತ್ತಾ ನಿಂತನು; ಬಳಿಕ ಗಾಂಭೀರ್ಯ

ದಿಂದ ಅವರನ್ನು ಒಮ್ಮೆ ನೋಡಿದನು. ಆ ಮೇಲೆ ಮೆಲ್ಲಗೆ ಗದ್ಗದ ಕಂಠ ದಿಂದ 'ಭಯಂಕರವಾದ ಕೊಲೆಯೊಂದು ಇಲ್ಲಿ ನಡೆದಿದೆ!' ಎಂದನು.

ಸೂಕ್ಷ್ಮಬುದ್ಧಿಯ ಇಂತಹ ಸೂಕ್ಷ್ಮಬುದ್ಧಿಯ ಪ್ರದರ್ಶನವನ್ನು ನೋಡಿ ಅವರಿಬ್ಬರೂ ಆಶ್ಚರ್ಯದಿಂದ ಚಕಿತರಾದರು. ಸಿದ್ದಯ್ಯನು ಬಾಯಿಬಿಟ್ಟು 'ಭಲೆ' ಎಂದನು. ಕೊನ್ಸ್ಟೇಬಲನು ನಾಲ್ಕೈದು ನಿಮಿಷ ಗಳ ವರೆಗೆ ಮೂಕನಾಗಿ ನಿಂತನು. ಕೊನೆಗೆ ಅತಿ ವಿನಯದಿಂದ 'ಕೊಲೆ ಮಾಡಿದವನು ಈಗ ಯಾರೆಂದು ಹೇಳಬಹುದೇ?' ಎಂದು ಕೇಳಿದನು.

'ಅಡ್ಡಿಯೇನು? ಈಗಲೇ ಹೇಳಬಹುದು. ಚೂರಿಹಾಕಿದವನೇ ಕೊಲೆಮಾಡಿರಬೇಕು!' ಎಂದು ಸೂಕ್ಷ್ಮಬುದ್ಧಿಯು ನಿಸ್ಸಂದೇಹವಾಗಿ ಹೇಳಿಬಿಟ್ಟನು.

ಕೊನ್ಸ್ಟೇಬಲನು ಸಿದ್ದಯ್ಯನನ್ನು ನೋಡಿದನು. ಸಿದ್ದಯ್ಯನು ಕೊನ್ಸ್ಟೇಬಲನನ್ನು ನೋಡಿದನು. ಅವರಿಬ್ಬರೂ ಆಶ್ಚರ್ಯಭರಿತರಾಗಿ ದ್ದರು. ಕೊನೆಗೆ ಸಿದ್ದಯ್ಯನು ತನ್ನ ಉತ್ಸಾಹವನ್ನು ತಡೆದುಕೊಳ್ಳಲಾ ರದೆ ಸೂಕ್ಷ್ಮಬುದ್ಧಿಯ ಬೆನ್ನನ್ನು ತಟ್ಟಿ 'ಶಹಭಾಸ್!' ಎಂದನು.

ಅಂತಹ ಸೂಕ್ಷ್ಮಬುದ್ಧಿಯು ಪೋಲೀಸು ಖಾತೆಯ ಬಲಗೈಯಂತಿ ರುವುದರಲ್ಲಿ ಆಶ್ಚರ್ಯವೇನು? ಸರಕಾರಿ ಗುಪ್ತ ಪೋಲೀಸರು ಸಹ ತಾವು ಹತಾಶರಾದ ಸಂಗತಿಗಳಲ್ಲಿ ಅವನನ್ನೆ ನಂಬಿಕೊಂಡು ಬರುವ ಸಂಪ್ರದಾಯವನ್ನಿಟ್ಟಿದ್ದರು. ಅಲ್ಪ ಸಮಯದೊಳಗೇ ಸೂಕ್ಷ್ಮಬುದ್ಧಿಯ ಖ್ಯಾತಿಯು ಎಲ್ಲೆಲ್ಲಿಯೂ ಹರಡಿಕೊಂಡಿತು. ಪತ್ರೆಯಲ್ಲಿ 'ಮಹಾರಥ' 'ಅತಿರಥ' ಎಂದೆನ್ನಿಸಿಕೊಳ್ಳುತ್ತಿದ್ದ ನಮ್ಮ ಕನ್ನಡ ಕಾದಂಬರಿಗಳ ಪತ್ತೆ ದಾರರು ಕೂಡ ಅವನ ಬೆಂಬಲ ಸಿಕ್ಕಿತೆಂದರೆ ಸ್ವರ್ಗವೇ ಸಿಕ್ಕಿತೆಂದು ತಿಳಿದುಕೊಳ್ಳುತಿದ್ದರು. ಪೋಲೀ ಜನರಾದರೊ ತಮ್ಮ ಪತ್ತೆಯಲ್ಲಿ ಸೂಕ್ಷ್ಮಬುದ್ಧಿಯು ಇರುವನೆಂದು ತಿಳಿದುಕೊಳ್ಳುವುದೇ ತಡ, ತಮ್ಮ ಕುಲದ ಗೌರವ ಉಳಿಯಿತೆಂದೂ ಅಂತಹ ದೊಡ್ಡ ಪತ್ತೆದಾರನು ತಮ್ಮನ್ನು ಹಿಂಬಾಲಿಸಿ ಬರುವುದು ತಮ್ಮ ಪೂರ್ವಪುಣ್ಯದ ಫಲವೆಂದೂ ಬಗೆದುಕೊಳ್ಳುತ್ತಿದ್ದರು. ಹೀಗಾಗಿ ಸೂಕ್ಷ್ಮಬುದ್ಧಿಯು ಎಲ್ಲಿ ಹೋಗು

ವನೊ ಅಲ್ಲಿ ಕಳ್ಳಕಾಕರ ಸೀಕಲಾಟ; ಎಲ್ಲಿ ಕಾಲಿಡುವನೊ ಅಲ್ಲಿ ಖೂನಿಗಳ ಉತ್ಸವ; ಎಲ್ಲಿ ನಡೆವನೋ ಅಲ್ಲಿ ಭಯಂಕರವಾದ ಕೊಲೆಗಳ ಸಪ್ತಾಹ. ಬಡ ಕೊನ್ಸ್ಟೇಬಲರನ್ನು ಅಂತಹ ಕಾಕಪೋಕರು ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಒಂದು ವೇಳೆ ಹಾಗೆ ನೋಡಿದ್ದೆ ಆದರೆ ಅವರು ಕೂಡಲೆ ಬಹಳ ನಾಚಿಕೆ ಪಟ್ಟು ಅಲ್ಲಿಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು.

ಅಧ್ಯಾಯ ಎರಡು

## ಭಯಂಕರವಾದ ಕೊಲೆ

ಮಧ್ಯರಾತ್ರಿ. ಹನ್ನೆರಡು ಘಂಟೆ ಆಗಲೇ ಹೊಡೆದಿದೆ. ಕಣ್ಣುಗಳಲ್ಲಿ ಬೆರಳನ್ನು ತುರುಕಿಕೊಂಡರೂ ಕಣ್ಣು ಕಾಣದು. ಅಂತಹ ಭಯಂಕರವಾದ ಕಗ್ಗತ್ತಲೆ. ಇಡೀ ಊರೆಲ್ಲ ನಿದ್ದೆ ಹೋಗುತ್ತಿರುವುದು. ಆದರೆ 'ವೆಲ್ಕಂ' ಕಾಫಿ ಹೊಟೇಲಿನ ಬಾಗಿಲುಗಳು ಮಾತ್ರ ಇನ್ನೂ ತೆರೆದಿವೆ.

ಹೊಟೇಲಿನೊಳಗೆ ಬರೇ ಇಬ್ಬರು ನೌಕರರು ಮಾತ್ರ ಸುಳಿದಾಡುತ್ತಿದ್ದಾರೆ. ಬಾಕಿ ನೌಕರರು ಆಗಲೇ ಮನೆಗೆ ಹೋಗಿರುವರು. ಹೊಟೇಲಿನ ಮಾಲಿಕನು ತನ್ನ ಸ್ಥಾನದಲ್ಲಿ ಇನ್ನೂ ಆಕಳಿಸುತ್ತಾ ಕುಳಿತಿರುವನು. ಕೋಣೆಯ ಅತಿ ಕಗ್ಗತ್ತಲಿರುವ ಪಾರ್ಶ್ವದಲ್ಲಿ ಐದು ಮಂದಿ ಪೋಲೀ ಜನರು ಕಾಫಿ ಕುಡಿಯುತ್ತಾ ಕುಳಿತಿರುವರು. ಪಾತಕ ಮಹಾಶಯ! ಆ ಐದು ಮಂದಿ ಜನರ ಪೈಕಿ ಒಂದು ತಿಂಗಳಿನ ಗಡ್ಡವನ್ನು ಬೆಳಿಸಿಕೊಂಡಿದ್ದು ಸ್ಥೂಲದೇಹಿಯಾಗಿಯೂ, ನಾಲ್ಕೂವರೆ ಅಡಿಗಿಂತಲೂ ಎತ್ತರವಾಗಿಯೂ ಇರುವ ಆ ಮಹಾನುಭಾವನನ್ನು ಒಮ್ಮೆ ನೋಡಿ. ಅವನೇ ಕಳ್ಳಕಾಕರಲ್ಲಿ ಪ್ರಖ್ಯಾತನಾದ ಅಪ್ಪಯ್ಯನು! ಅವನ ಹೆಸರನ್ನು ಕೇಳಿದೊಡನೆ ಎಂತಹ ಧೈರ್ಯಶಾಲಿಯಾದ ಕೊನ್ಸ್ಟೇಬಲನ ಹೃದಯವಾದರೂ 'ಡಬ ಡಬ' ಎನ್ನುವುದು. ಅವನಂತಹ ಕೆಟ್ಟ ಮನುಷ್ಯನು ಈ ಲೋಕದಲ್ಲಿ ಈ ತನಕ ಜೀವಿಸಲೇ ಇಲ್ಲ!

ಸ್ವಲ್ಪ ತಾಳಿ. ಆದಾರು? ಸ್ವಲ್ಪವಾದರೂ ಅಂಜಿಕೆಯಿಲ್ಲದೆ ನಿಶ್ಚಲತೆಯ ಹೆಜ್ಜೆಗಳಿಂದ ಒಳಗೆ ಬರುವುದು? ಓಹೋ ತಿಳಿಯಿತು. ಪ್ರಖ್ಯಾತ

ಪತ್ತೇದಾರ ಸೂಕ್ಷ್ಮಬುದ್ಧಿಗಲ್ಲದೆ ಅಂತಹ ಧೈರ್ಯವು ಮತ್ತಾರಪಾಲಿಗೆ ಬರುವುದು? ಸೂಕ್ಷ್ಮ ಬುದ್ಧಿಯು ಕೂಡಲೇ ಒಂದು ಕಪ್ಪ 'ಡಬಲ್ ರಿಮ್‌ಜಾನ್' ಕಾಫಿಗೆ ಹೇಳಿ ಆ ಕೋಣೆಯ ಮತ್ತೊಂದು ಪಾರ್ಶ್ವಕ್ಕೆ ಹೋಗಿ ಕುಳಿತುಕೊಂಡನು. ಹಾಗೆ ಕುಳಿತುಕೊಂಡಾಕ್ಷಣ ತನ್ನ ಅಂಗಿ ಜೇಬಿನಿಂದ ಒಂದು ಕನ್ನಡಿಯನ್ನು ಹೊರತೆಗೆದು ಅದರ ಸಹಾಯದಿಂದ ಕೃತಕ ಬಿಳೀ ಮೀಸೆಯನ್ನೂ, ಬಿಳೀ ಗಡ್ಡವನ್ನೂ ಇಟ್ಟುಕೊಳ್ಳಲುದ್ಯುಕ್ತನಾದನು,....ಶಹಭಾಸ್! ಸೂಕ್ಷ್ಮಬುದ್ಧಿ! ನಿನ್ನನ್ನು ನೋಡಿದರೆ, ನಿನ್ನ ಹೆಂಡತಿಯು ಕೂಡ ಈಗ ಗುರುತಿಸಲಾರಳು! ಎಂಭತ್ತು ವರುಷ ಪ್ರಾಯ ದಾಟಿದ ಮುದುಕನಂತೆ ಈಗ ತೋರುವ ನಿನ್ನನ್ನು ಕಣ್ಣಿದ್ದವರ ಪೈಕಿ ಯಾರು ಸೂಕ್ಷ್ಮಬುದ್ಧಿಯೆಂದು ಹೇಳ್ಯಾರು?

ಸೂಕ್ಷ್ಮಬುದ್ಧಿಯು ತನ್ನ ಮುಂದಿಟ್ಟ ಕಾಫಿಯನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಾ ಕೋಣೆಯಲ್ಲಿದ್ದ ಆ ಐದು ಮಂದಿ ಪೋಲಿ ಜನರನ್ನು ಸೂಕ್ಷ್ಮ ದೃಷ್ಟಿಯಿಂದ ನೋಡುತ್ತಾ ಕುಳಿತುಕೊಂಡನು.

ಆ ಪೋಲಿ ಜನರೂ ಇವನನ್ನೇ ನೋಡುತ್ತಾ ಕುಳಿತುಕೊಂಡರು. 'ಈ ವಿಚಿತ್ರ ಪ್ರಾಣಿ ಯಾರು?' ಎಂದು ಒಬ್ಬರನ್ನೊಬ್ಬರು ಕೇಳಿದರು. 'ಛೆ! ಸುಮ್ಮನಿರಿ!' ಎಂದು ಅಪ್ಪಯ್ಯನು ಅವರನ್ನು ಗದರಿಸಿದನು. 'ಮಹಾಪತ್ತೇದಾರನಾದ ಸೂಕ್ಷ್ಮಬುದ್ಧಿಯೆಂದರೆ ಇವನೇ ಎಂದು ಗೊತ್ತಿಲ್ಲವೇ? ನಿಜವಾಗಿಯೂ ನಾನಿಂದು ಧನ್ಯನು! ಅಂತಹ ಮಹಾ ಪತ್ತೇದಾರನನ್ನು ನನ್ನ ಬೆನ್ನಟ್ಟಿಬರುವಂತೆ ಮಾಡಿದೆನೆಂದರೆ ನನ್ನ ಮೊಮ್ಮಕ್ಕಳ ಮೊಮ್ಮಕ್ಕಳು ಕೂಡ ಧನ್ಯರಾಗುವರು! ಅಂತಹ ಸೌಭಾಗ್ಯವು ಲಭಿಸುವಂತೆ ನಾನೇನು ಈಗ ಮಾಡಲಿ? ಈ ಹೊಟೇಲು ಮಾಲಿಕನ ಹಣವನ್ನು ಅಪಹರಿಸಲೇ? ನಿಮ್ಮ ನಾಲ್ವರ ಪೈಕಿ ಒಬ್ಬನ ಕತ್ತನ್ನು ಹಿಸುಕಲೇ? ಅಥವಾ ಈ ಹೊಟೇಲನ್ನು ಬೆಂಕಿ ಹಾಕಿ ಭಸ್ಮಮಾಡಿ ಬಿಡಲೇ?'

'ಇಂದಿನ ಕಾಫಿಯ ರುಚಿಯನ್ನು ನೋಡಿದರೆ ನಿನ್ನ ಮೊದಲನೆಯ ಮತ್ತು ಕಡೆಯ ಆಲೋಚನೆಯೇ ಅತಿ ಯೋಗ್ಯವಾದುದೆಂದು ನಾನು

ನೆನಸುತ್ತೇನೆ' ಎಂದು ಒಬ್ಬನು ಉತ್ತರಕೊಟ್ಟನು. ಅವನಿಗೆ ಆ ಎರಡ ನೆಯ ಆಲೋಚನೆಯು ಅಷ್ಟು ರುಚಿಸಲಿಲ್ಲ.

ಸೂಕ್ಷ್ಮಬುದ್ಧಿಯು ತನ್ನನ್ನು ಬೆನ್ನಟ್ಟಿಬರುವಂತೆ ಮಾಡಲಿಕ್ಕೆ ತಾನು ಆಲೋಚಿಸಿದ ಮೂರು ಉಪಾಯಗಳಲ್ಲಿ ಯಾವುದನ್ನು ಕೈಕೊಳ್ಳಲಿ ಎಂದು ಅಪ್ಪಯ್ಯನು ಆಲೋಚಿಸುವಷ್ಟರೊಳಗೆ ಹೊಟೇಲಿನೊಳಗೆ ಅತ್ಯಂತ ಸುಂದರಿಯಾದ ರಮಣಿಯೊಬ್ಬಳು ಬಂದೇ ಬಿಟ್ಟಳು. ಅವಳ ಸೌಂದರ್ಯವನ್ನು ಬಣ್ಣಿಸಲಿಕ್ಕೆ ಮಹಾಶೇಷನಿಗಲ್ಲದೆ ನಮಗೆ ಹೇಗೆ ಸಾಧ್ಯವಾದೀತು? ಅವಳ ಮುಖ! ಅವಳ ಕಣ್ಣುಗಳು!! ಅವಳ ಕಿವಿಗಳು!!! ಅವಳ ಕೂದಲು! ಅವಳ ಮೂಗು!! ಅವಳ ತುಟಿಗಳು!!! ಅವಳ ಕೈಗಳು! ಅವಳ ಬೆರಳುಗಳು!! ಅವಳ ನಡಿಯುವಿಕೆ!!! ಅವಳ ಧ್ವನಿ!! ಅವಳ ಹೆಸರು!!!—ಅದನ್ನೊಂದು ಹೇಳಬಲ್ಲೆವು—ಗುಲಾಬಿ ಎಂದು.

ಗುಲಾಬಿಯು ನೆಟ್ಟಗೆ ಅಪ್ಪಯ್ಯನಿದ್ದೆಡೆಗೆ ಹೋದಳು. ಅಪ್ಪಯ್ಯನು ಅವಳನ್ನು ಬಿರಬಿರನೆ ನೋಡಿದನು. ಎಂತಹ ದಂಪತಿಗಳು! ಲೋಕಮೋಹಿನಿಯಾದ ಗುಲಾಬಿಯು! ಲೋಕಕಂಟಕನಾದ ಅಪ್ಪಯ್ಯನು! ಇವರಿಬ್ಬರು ಗಂಡಹೆಂಡಿರು! ಆದರೇನು? ಲೋಕವ್ಯವಹಾರವೇ ಹೀಗೆ!!

ಗುಲಾಬಿಯು ಕೂಡಲೇ ಅಪ್ಪಯ್ಯನ ಕಿವಿಯನ್ನು ಚೆನ್ನಾಗಿ ಹಿಂಡಿ 'ಏನು, ಹನ್ನೆರಡು ಗಂಟೆಯಾದರೂ ಇನ್ನೂ ಮನೆಗೆ ಬರಲಿಕ್ಕೆ ಹೊತ್ತಾಗಲಿಲ್ಲವೇ? ಈಗಲಾದರೂ ಬರುತ್ತೀರೋ ಇಲ್ಲವೋ, ನೋಡುತ್ತೇನೆ' ಎಂದಳು.

ಅಪ್ಪಯ್ಯನಿಗೆ ಗುಲಾಬಿಯ ಹಸ್ತಸ್ಪರ್ಶದ ಮಾಧುರ್ಯವು ರುಚಿಸದೆ ಹೋಯಿತು. ಒಂದು ದೊಡ್ಡ ಅರಚನ್ನು ಹಾಕಿ ಕುರ್ಚಿಯಿಂದ ತಟಕ್ಕನೆ ಎದ್ದುಬಿಟ್ಟನು. ಅವನ ಕಿವಿಯು ಗುಲಾಬಿಯ ಕೈಯಲ್ಲಿಯೇ ಉಳಿಯಿತು. ಇದನ್ನು ನೋಡಿ ಗುಲಾಬಿಯು 'ಇಸ್ಸಿಯಪ್ಪಾ!' ಎಂದು ಹೇಳಿ ಹರಿದು ಹೋದ ಕಿವಿಯನ್ನು ಕೂಡಲೇ ಕಿಟಕಿಯಿಂದ ಹೊರಗೆ ಬಿಸಾಡಿದಳು. ಅಪ್ಪಯ್ಯನು ತನ್ನ ಕಿವಿಯು ಬಿಟ್ಟ ಸ್ಥಾನವನ್ನು ಕೈಯಿಂದ

ನೋಡಿದನು. ಇನ್ನೊಂದು ದೊಡ್ಡ ಅರಚನ್ನು ಹಾಕಿ ಕೂಡಲೇ ತನ್ನ ಸೊಂಟಕ್ಕೆ ಹತ್ತಿಸಿದ್ದ ಚೂರಿಯನ್ನು ಹೊರತೆಗೆದನು. ಇದನ್ನು ನೋಡಿ ಅವನ ಸಂಗಾತಿಯರೆಲ್ಲರೂ ಬೆಚ್ಚಿಬಿದ್ದರು. ಏಕಂದರೆ ಅದು ಸಾಮಾನ್ಯ ತರದ ಚೂರಿಯಾಗಿದ್ದಿಲ್ಲ; ಅದರ ಒಂದೇ ಒಂದು ಪೆಟ್ಟಿನಿಂದ ಸೊಕ್ಕಿ ಬೆಳೆದ ಇಡೀ ಒಂದು ಕಬ್ಬನ್ನು ಎರಡು ತುಂಡುಗಳನ್ನಾಗಿ ಮಾಡಬಹು ದಿತ್ತು! ಕೂಡಲೇ ಅವರು ಅವನ ಇಷ್ಟವು ನೆರವೇರದಂತೆ ಅವನನ್ನು ಮುತ್ತಿಗೆ ಹಾಕಿದರು. ಆದರೆ ಅಪ್ಪಯ್ಯನು ಕೇಳಲಿಲ್ಲ. 'ಹುಚ್ಚರೇ! ನನ್ನನ್ನು ಬಿಡಿ! ಖೂನಿಮಾಡಲಿಕ್ಕೆ ಇದೇ ಸುಸಂಧಿ; ಸೂಕ್ಷ್ಮಬುದ್ಧಿಯು ರೆಪ್ಪೆಗೆ ರೆಪ್ಪೆತಾಗಿಸದೆ ನನ್ನನ್ನು ನೋಡುತ್ತಾನೆಂದು ನಿಮಗೆ ಗೊತ್ತಿ ಲ್ಲವೇ? ಇಂತಹ ಸುಸಂಧಿಯನ್ನು ನಾನೆಂದಿಗೂ ಕಳೆದುಕೊಳ್ಳಲಾರೆ!' ಎಂದು ಹೇಳುತ್ತಾ ಅವರಿಂದ ಬಿಡಿಸಿಕೊಂಡು, ಗುಲಾಬಿಯಿದ್ದೆಡೆಗೆ ಹಾರಿ, ಅವಳನ್ನು ತನ್ನ ಚೂರಿಯಿಂದ ಸರಿಯಾಗಿ ಮೂವತ್ತಮೂರು ತುಂಡುಗಳಾಗಿ ಮಾಡಿಬಿಟ್ಟನು. ಇದನ್ನು ನೋಡಿ ಅಪ್ಪಯ್ಯನ ಸಂಗಾತಿ ಯರು ಸ್ತಬ್ಧರಾಗಿ ನಿಂತುಬಿಟ್ಟರು. ಹೊಟೇಲಿನ ಮಾಲಿಕನೂ ಆಕಳಿಕೆ ಯನ್ನು ತೆಗೆಯುತ್ತಾ ಶ್ರಮದಿಂದ ಎದ್ದುನಿಂತು ಅಲ್ಲಿಗೆ ಬಂದನು. ಅಲ್ಲಿ ಕೆಲಸ ಮಾಡುತ್ತಿದ್ದ ನೌಕರರಿಬ್ಬರೂ ಅಲ್ಲಿ ಬಂದು ನಿಂತರು. ಆದರೇನು! ಲೋಕದ ಅತ್ಯಂತ ರಮಣೀಯವಾದ ವಸ್ತುಗಳಲ್ಲಿ ಅತಿ ರಮ್ಯವಾದು ದೊಂದು ಮಣಿಯು ಇಂದಿಗೆ ನಾಶಹೊಂದಿತು! ಹಾಯ್!

ಪಾಠಕ ಮಹಾಶಯ! ಇಷ್ಟೆಲ್ಲ ಅನರ್ಥವಾಗುವಾಗ ನಮ್ಮ ಕಥಾನಾಯಕನಾದ ಪತ್ತೇದಾರ ಸೂಕ್ಷ್ಮಬುದ್ಧಿಯು ಏನು ಮಾಡುತ್ತಿ ರುವನೆಂದು ಕೇಳಲಿಕ್ಕೆ ನೀವು ಕುತೂಹಲ ಪಡುವಿರಿ. ಅಗೋ, ನೋಡಿ! ಅವನು ಈಗ ತಾನೆ ಕಾಫಿಯನ್ನು ಕುಡಿದುದಾಯಿತು. ಇಂತಹ ಭಯಂಕರ ವಾದ ಕೊಲೆಯನ್ನು ತನ್ನ ಕಣ್ಣಮುಂದೆಯೇ ನೆರವೇರಿಸಿದುದಕ್ಕೆ ಅವನ ಕೋಪಾಗ್ನಿಯು ಏರುತ್ತಾ ಇದೆ! ಕಣ್ಣುಗಳು ಕೆಂಪಗಾಗುತ್ತಾ ಬಂದಿವೆ! ಅವುಗಳು ಕೋಪದ ಜ್ವಾಲೆಯನ್ನು ಕಾರುತ್ತಿವೆ. ನೋಡಿ, ಅವನು ಕುರ್ಚಿಯಿಂದ ಎದ್ದೇಬಿಟ್ಟನು! ಎದ್ದು ಮುಂದಿ ಇದ್ದೆಡೆಗೆ ಬಂದೇ

ಬಿಟ್ಟನು !! ಬಂದು ತನ್ನ ಕೃತಕ ಮೀಶೆಯನ್ನೂ ಗಡ್ಡವನ್ನೂ ಒಂದೇ ಸವನೆ ತೆಗೆದು ಬಿಸಾಡಿ 'ನೋಡಿದಿರಾ ನಾನು ಯಾರೆಂದು ? ಪ್ರಖ್ಯಾತ ಪತ್ತೇದಾರನಾದ ಸೂಕ್ಷ್ಮಬುದ್ಧಿ ಎಂದರೆ ನಾನೇ !!' ಎಂದನು.

ಇದನ್ನು ಕೇಳುತ್ತಲೇ ಅಲ್ಲಿದ್ದವರೆಲ್ಲರೂ ಬೆಚ್ಚಿಬಿದ್ದು ಎರಡು ಹೆಜ್ಜೆ ಹಿಂದಕ್ಕೆ ಸರಿದರು. ಎಳೆ ಮಕ್ಕಳು ಮಿಠಾಯಿಯನ್ನು ನೋಡಿದ ಕೂಡಲೇ ಮೋಹಿತರಾಗುವಂತೆಯೂ, ಮೊಲಗಳು ಹಾವುಗಳನ್ನು ನೋಡುತ್ತಲೇ ಚಿತ್ತಭ್ರಮೆಯನ್ನು ಹೊಂದುವಂತೆಯೂ, ಹಾವುಗಳು ಹಾವಡಿಗನ ಪಿಳ್ಳಂಗೋವಿಯ ಧ್ವನಿಗೆ ವಶೀಕೃತವಾಗಿ ಹೋಗುವಂತೆಯೂ, ಅವರೆಲ್ಲರೂ ಶ್ರೇಷ್ಠ ಪತ್ತೇದಾರಿಯಾದ ಸೂಕ್ಷ್ಮಬುದ್ಧಿಯು ನೆರವೇರಿಸುವ ಪತ್ತೆಯ ವಿಧಾನವನ್ನು ನೋಡುವುದರಲ್ಲಿಯೇ ತೀರಾ ಐಕ್ಯರಾಗಿ ಬಿಟ್ಟರು. ಕೊಲೆಮಾಡಿದ ಅಪ್ಪಯ್ಯನು ಕೂಡ ಕೊಲೆಮಾಡಿದ ಚೂರಿಯನ್ನು ಜೇಬಿನಲ್ಲಿಡಲಿಕ್ಕೆ ಮರೆತು ಸೂಕ್ಷ್ಮಬುದ್ಧಿಯನ್ನು ಎವೆಯಿಕ್ಕದೆ ನೋಡುತ್ತಾ ಮೈಮರೆತು ನಿಂತನು.

ಸೂಕ್ಷ್ಮಬುದ್ಧಿಯು ಯಾವ ಕಾರ್ಯದಲ್ಲಿಯೂ ದುಡುಕುವಂಥವನಲ್ಲ; ಅವನು ತನ್ನ ಕುಲದ ಇತರ ಪತ್ತೇದಾರರಂತೆ ಏನೂ ಆಧಾರವಿಲ್ಲದೆ ಸುಮ್ಮನೆ ಏನೇನೆಲ್ಲವನ್ನು ಊಹಿಸಿಕೊಂಡು ತನ್ನ ಕಾರ್ಯವನ್ನು ಸಾಧಿಸುತ್ತಿರಲಿಲ್ಲ; ಯಾವದಾದರೊಂದು ಸಂಗತಿಯ ಮೇಲೆ ತನಗೆ ಪೂರ್ಣ ಋಜುವಾತುಗಳು ಸಿಕ್ಕುವವರೆಗೆ ಅವನು ಅದನ್ನು ಬಯಲಿಗೆ ತರುತ್ತಿರಲಿಲ್ಲ; ಅವನಿಗೂ ನಮ್ಮ ಕನ್ನಡ ಕಾದಂಬರಿಗಳಲ್ಲಿರುವ ಪತ್ತೇದಾರರಿಗೂ ಮತಭೇದವಿರುವುದು ಮುಖ್ಯವಾಗಿ ಈ ಒಂದು ಸಂಗತಿಯಲ್ಲಿಯೇ. ಜಗತ್ಪ್ರಸಿದ್ಧ ಆಂಗ್ಲೇಯ ಪತ್ತೇದಾರನಾದ 'ಶರ್ಲೋಕ್ ಹೋಮ್ಸ'ನೇ ತನ್ನ ಗುರುವೆಂದು ನಂಬಿಕೊಂಡು, ಪತ್ತೆಯನ್ನು ನೆರವೇರಿಸುವ ಪದ್ಧತಿಯಲ್ಲಿ ಸೂಕ್ಷ್ಮಬುದ್ಧಿಯು ಅವನನ್ನೇ ಹೆಚ್ಚಾಗಿ ಹಿಂಬಾಲಿಸುತ್ತಿದ್ದನು. ಆದುದರಿಂದಲೇ ಸೂಕ್ಷ್ಮಬುದ್ಧಿಯು ಕನ್ನಡ ಪತ್ತೇದಾರರೊಳಗೆಲ್ಲ ಅತಿ ಶ್ರೇಷ್ಠನೆಂದೆನಿಸಿಕೊಂಡಿರುವನು.

ಸೂಕ್ಷ್ಮಬುದ್ಧಿಯು ಸರಿಸಮಾನವಾದ ಮೂವತ್ತುಮೂರು



13 “ನಾನು ನೆನಸಿದಂತೆಯೇ ಇದು ಮನುಷ್ಯರಕ್ತ; ಸಂದೇಹವಿಲ್ಲ!”

ತುಂಡುಗಳಾಗಿರುವ ಮೃತ ಶರೀರದ ಹತ್ತಿರ ನಿಂತುಕೊಂಡು ತುಂಡುಗಳನ್ನು ಸರಿಯಾಗಿ ಲೆಕ್ಕಮಾಡಿ ನೋಡಿದನು. 'ಆಶ್ಚರ್ಯ! ಅತ್ಯಾಶ್ಚರ್ಯ! ಮೂವತ್ತೆರಡು ಅಲ್ಲ, ಮೂವತ್ತನಾಲ್ಕು ಅಲ್ಲ–ಮೂವತ್ತಮೂರು ಸರಿಸಮಾನವಾದ ತುಂಡುಗಳು!' ಎಂದು ತನ್ನಷ್ಟಕ್ಕೆ ಹೇಳಿದನು. ಆ ಮೇಲೆ ತನ್ನ ಜೇಬಿನಿಂದ ಒಂದು ಅಳತೆಯ ಲಾಡಿಯನ್ನು ಹೊರಗೆ ತೆಗೆದು ಮೃತ ಶರೀರದಿಂದ ಕೋಣೆಯ ನಾಲ್ಕು ಗೋಡೆಗಳಿಗೂ ಇರುವ ಅಂತರವನ್ನು ಸರಿಯಾಗಿ ಕಂಡು ಹಿಡಿದನು. ಅಲ್ಲಿ ಬಿದ್ದಿರುವ ಎರಡು ಮೂರು ಬೀಡಿ ತುಂಡುಗಳನ್ನು ಕೈಯಲ್ಲಿ ಹಿಡಿದುಕೊಂಡು ಅವುಗಳನ್ನು ಎರಡು ಮಿನಿಟುಗಳವರೆಗೆ ಮೂಸಿ ನೋಡಿದನು. ಅಲ್ಲಿ ಬಿದ್ದುಕೊಂಡಿದ್ದ ಒಂದು ಬೆಂಕಿ ಕಡ್ಡಿಯ ಅಳತೆಯನ್ನೂ ತೆಗೆದನು. ಆ ಮೇಲೆ ತನ್ನ ಇನ್ನೊಂದು ಜೇಬಿನಿಂದ ಒಂದು ದೊಡ್ಡ ಸೂಕ್ಷ್ಮದರ್ಶಕ ಕನ್ನಡಿಯನ್ನು ಹೊರ ತೆಗೆದು ಅದರ ಮೂಲಕ ಮೃತ ಶರೀರದ ಹತ್ತಿರ ಬಿದ್ದಿರುವ ರಕ್ತದ ಪ್ರವಾಹವನ್ನು ಬಹಳ ಸೂಕ್ಷ್ಮವಾಗಿ ಹತ್ತು ಮಿನಿಟುಗಳವರೆಗೆ ಪರೀಕ್ಷಿಸಿ ನೋಡಿದನು. ಎದ್ದು ನಿಂತು 'ನಾನು ನೆನಸಿದಂತೆಯೇ. ಇದು ಮಾನುಷ ರಕ್ತ; ಸಂದೇಹವಿಲ್ಲ!' ಎಂದು ತನ್ನಷ್ಟಕ್ಕೆ ಹೇಳಿದನು. ಇದಾದ ಬಳಿಕ ಎರಡು ಮಿನಿಟುಗಳವರೆಗೆ ಕಿಟಕಿಯಿಂದ ಹೊರಗೆ ದೃಷ್ಟಿಸಿ ನೋಡುತ್ತಾ ನಿಂತನು. ಆ ಮೇಲೆ ಕೋಣೆಯೊಳಗೆ ಆರೇಳು ಸಲ ಸುತ್ತಾಡಿದನು. ಕೊನೆಗೆ ತನ್ನ ನೋಟು ಬುಕ್ಕನ್ನು ಹೊರತೆಗೆದು 'ಇಲ್ಲಿ ನನಗೆ ಸಿಕ್ಕ ಬೇಕಾದ ಸಂಗತಿಗಳೆಲ್ಲವೂ ಸಿಕ್ಕಿವೆ. ಇನ್ನು ನಾನಿಲ್ಲಿದ್ದು ಪ್ರಯೋಜನವಿಲ್ಲ; ನಡೆದ ಸಂಗತಿಯು ಬಹಳ ಅಮೋಘವಾದುದು. ಕೊಲೆ ಮಾಡಿದವನನ್ನು ಕಂಡು ಹಿಡಿಯುವುದು ಸಾಧ್ಯವಿದೆಯೋ ಇಲ್ಲವೋ ಎಂದು ಈಗಲೇ ನನ್ನಿಂದ ಹೇಳಲಿಕ್ಕಾಗುವುದಿಲ್ಲ; ಹಾಗೆ ಹೇಳಲಿಕ್ಕೆ ನನಗಿನ್ನೂ ಒಂದೆರಡು ರುಜುವಾತುಗಳು ಬೇಕಾಗಿವೆ. ಅವು ಬೇಗನೆ ನನಗೆ ಸಿಕ್ಕಬಹುದು ನೋಡಬೇಕು.' ಎಂದು ಹೇಳಿ ಆ ಹೊಟೇಲಿನ ಮಾಲಿಕನ ಹೆಸರನ್ನೂ, ಅಲ್ಲಿ ಕೆಲಸ ಮಾಡುತ್ತಿದ್ದ ಇಬ್ಬರು ನೌಕರರ ಹೆಸರುಗಳನ್ನೂ, ಆ ದಿನದ ತಾರೀಕನ್ನೂ, ವಾರವನ್ನೂ, ತಿಥಿಯನ್ನೂ, ತಿಂಗಳನ್ನೂ, ಇಸವಿಯನ್ನೂ ತನ್ನ

ನೋಟುಬುಕ್ಕಿನಲ್ಲಿ ಬರೆದುಕೊಂಡು ಗಾಂಭೀರ್ಯದಿಂದ ತನ್ನ ಚಿತ್ತ್ರವನ್ನು ಗಾಳಿಯಲ್ಲಿಯೂ ಮೀಸೆಯನ್ನು ಕೈಯಲ್ಲಿಯೂ, ತಿರುವುತ್ತಾ ಹೊಟೇಲಿನಿಂದ ಹೊರಬಿದ್ದನು.

ಪೋಲೀಸ್ ಠಾಣೆಯನ್ನು ಸಮೀಪಿಸುತ್ತಲೇ ಸೂಕ್ಷ್ಮಬುದ್ಧಿಯ ಹುಬ್ಬುಗಳು ಗಂಟಿಕ್ಕಿದುವು. 'ಏನು ಮೋಸವಾಯಿತು! ಕೈಯಲ್ಲಿ ಚೂರಿಯನ್ನು ಹಿಡಿದುಕೊಂಡು ನಿಂತ ಆ ವ್ಯಕ್ತಿಯ ಹೆಸರನ್ನು ಬರೆದುಕೊಳ್ಳಲಿಕ್ಕೆ ಮರೆತೇ ಬಿಟ್ಟೆ!!' ಎಂದು ಖಿನ್ನ ಮನಸ್ಕನಾಗಿ ತನ್ನಷ್ಟಕ್ಕೆ ಅಂದುಕೊಂಡನು.

---

# ಭಾಗ ಎರಡು

[ **ಪೂರ್ವ ಕಥಾ ಸಾರಾಂಶ**:– ಲೋಕಕಂಟಕನಾದ ಅಪ್ಪಯ್ಯನು ಮಂಗಳೂರಿನ 'ವೆಲ್ಕಂ' ಹೊಟೇಲನಲ್ಲಿ ಮಹಾಪತ್ತೇದಾರನಾದ ಸೂಕ್ಷ್ಮಬುದ್ಧಿಯ ಕಣ್ಣ ಮುಂದೆಯೇ ತನ್ನ ಹೆಂಡತಿಯಾದ ಗುಲಾಬಿಯನ್ನು ಸರಿಯಾಗಿ ಮೂವತ್ತುಮೂರು ತುಂಡುಗಳನ್ನಾಗಿ ಕಡಿದುಬಿಡುತ್ತಾನೆ. ಇನ್ನು ಹೊಸ ವಾಚಕರು ಸಾವಕಾಶವಾಗಿ ಮುಂದೆ ಓದಬಹುದು. ]

ಅಧ್ಯಾಯ ಒಂದು

## ಅಂತಕನ ದೂತರಿಗೆ ಕಿಂಚಿತ್ತೂ ಭಯವಿಲ್ಲ !

ಇಂದು ಹುಕ್ಕಪ್ಪರೈಗಳ ಮನೆಯಲ್ಲಿ ಗದ್ದಲವೇ ಗದ್ದಲ! ಏಕೆಂದರೆ ರೈಗಳ ಮೊದಲಿನ ಪುತ್ರಿಯಾದ ದುಗ್ಗಕ್ಕ ಯಾನೆ ಶಾರದಾಂಬೆ ಎಂಬ ಕನ್ನಿಕೆಯನ್ನು ಅವರ ತಂಗಿ ಸುಬ್ಬಕ್ಕ ಯಾನೆ ಲಕ್ಷ್ಮಮ್ಮನ ಮಗಂದಿರಾದ ಶೀನಪ್ಪ ಸೆಟ್ಟಿಗೆ ಕೊಟ್ಟು ವಿವಾಹ ಮಾಡುವ ಸಂದರ್ಭವಾಗಿದೆ. ರೈಗಳ ಮನೆಯೂ, ಮನೆಯ ಮುಂದಿನ ಅಂಗಳವೂ ತಳಿರು ತೋರಣಗಳಿಂದಲೂ ಚಪ್ಪರಗಳಿಂದಲೂ ಶೋಭಿಸುತ್ತದೆ. ಜನಸ್ತೋಮವು ನೆರಟು ತಲೆಗಳಿಂದ ತುಂಬಿ ಹೋಗಿದೆ. ನಾನಾ ತರದ ಬಣ್ಣದ ಜರತಾರಿ

ಸೀರೆಗಳೂ, ಕುಪ್ಪಸಗಳೂ, ಶಾಲುಗಳೂ, ಧೋತರಗಳೂ ನೋಟಕರ ಕಣ್ಣುಗಳನ್ನು ಕೆಂಪುದಾಗಿ ಮಾಡುವಂತಿವೆ. ಭೋಜನಕ್ಕೆಂದು ಮಾಡಿದ ಪಂಚ ಭಕ್ಷ್ಯ ಪರಮಾನ್ನಗಳ ವಾಸನೆಯು ಮೂಗಿನೊಳಗೆಲ್ಲ ಸುಳಿದಾಡಿ ಕೊಂಡು ಮೂಗನ್ನು ಕುರುಡಾಗಿ ಮಾಡುವಂತಿದೆ. ಬೇರೆ ಬೇರೆ ಆರು ರಾಗಗಳನ್ನು ಹತ್ತು ತಾಳಗಳಲ್ಲಿ ಬಾರಿಸುವ ವಾಲಗದವರ ಎರಡು ಮೇಳಗಳೂ, Funeral Song ಮತ್ತು It's a long, long way to Tipperary ಎಂಬ ಎರಡು ಇಂಗ್ಲೀಷು ರಾಗಗಳನ್ನು ಮಿಲನಮಾಡುವ ಯತ್ನದಲ್ಲಿ ಆರ್ಭಟಿಸುವ ಬೇಂಡು ವಾದ್ಯದವರ ಎರಡು ಮೇಳಗಳೂ ಕಿವಿಯನ್ನು ಕುರುಡಾಗಿ ಮಾಡುವಂತಿವೆ. ಗದ್ದಲವೇ ಗದ್ದಲ! ಭಾರೀ ಗದ್ದಲ! ಒಬ್ಬನ ಸೀರೆಯನ್ನು ಮತ್ತೊಬ್ಬಳು ತನ್ನ ಧೋತರವೆಂದೂ, ಒಬ್ಬಳ ಧೋತರವನ್ನು ಮತ್ತೊಬ್ಬನು ತನ್ನ ಸೀರೆಯೆಂದೂ ಉಟ್ಟುಕೊಳ್ಳುವ ಇಂತಹ ಪ್ರಚಂಡವಾದ ಗದ್ದಲದಲ್ಲಿ ನೋಟಕರ ಮತ್ತು ಗ್ರಂಥಕರ್ತರ ಕರ್ಮೇಂದ್ರಿಯಗಳು ಕೂಡ ತಮ್ಮ ತಮ್ಮ ಕರ್ತವ್ಯಗಳಿಗೆ ತಿಲಾಂಜಲಿ ಯನ್ನು ಕೊಟ್ಟು ಇತರ ಕರ್ಮೇಂದ್ರಿಯಗಳ ಕರ್ತವ್ಯಗಳನ್ನು ಆಕ್ರಮಿ ಸುವುದರಲ್ಲಿ ಆಶ್ಚರ್ಯವೇನು?

ಗದ್ದಲವೇ ಗದ್ದಲ! ಭಾರೀ ಗದ್ದಲ!! ಪ್ರಚಂಡವಾದ ಗದ್ದಲ!!!

ಲಗ್ನದ ಸುಮುಹೂರ್ತವು ಸಮೀಪಿಸಿತು, ಗದ್ದಲವು ಇಮ್ಮಡಿ ಯಾಯಿತು!

ಸಮೀಪಿಸಿತು! ಲಗ್ನದ ಮುಹೂರ್ತವು ಸಮೀಪಿಸಿತು! ಗದ್ದಲವು ನಾಲ್ಮಡಿಯಾಯಿತು!!

ಆದರೆ ವಾತಾವರಣದಲ್ಲಿ ಏನೆಂದು ಹೇಳಲಿಕ್ಕಾಗದ ಯಾವುದೋ ಒಂದು ಅಪೂರ್ವ ಸಂಗತಿಯು ಸಂಭವಿಸಲಿಕ್ಕೆ ಇದೆ ಎಂಬಂತೆ ಎಲ್ಲರಿಗೂ ಭಾಸವಾಯಿತು. ಏನು ಸಂಭವಿಸಬಹುದೆಂದು ಯಾರಿಗೆ ಗೊತ್ತು? ಅಂತಹ ದೊಡ್ಡ ಗದ್ದಲದಲ್ಲಿ ಏನೆಲ್ಲ ಸಂಭವಿಸಬಾರದು? ಅಂತಕನ ದೂತ ರಿಗೆ ಕಿಂಚಿತ್ತು ಭಯವಿಲ್ಲ! ಅವುಗಳು ಅಗೋಚರವಾಗಿ ಅಲ್ಲೇಕೆ ಹಾರಾ ಡುತ್ತಾ ಇರಬಾರದು? ಅದರಲ್ಲಿಯೂ ಹುಕ್ಕಪ್ಪರೈಗಳು ಬಹಳ

ಶ್ರೀಮಂತರು, ಮುದುಕರು! ಹಣವನ್ನು ಗಳಿಸುವುದರಲ್ಲಿ ಸಹಜವಾಗಿ ಅನೇಕಾನೇಕ ವೈರಿಗಳನ್ನು ಮಾಡಿಕೊಂಡವರು! ಹೀಗಿರುವಾಗ ಅಂತ ಕಸ'ದೂತರು ಇವರ ಮೇಲೆಯೇ ಕಣ್ಣಿಟ್ಟು ಅಲ್ಲೇಕೆ ಸುಳಿದಾಡುತ್ತಿರ ಬಾರದು?

ಅಷ್ಟು ಮಾತ್ರವಲ್ಲ, ಲೋಕಕಂಟಕನಾದ ಅಪ್ಪಯ್ಯನು ಇನ್ನೂ ಬ್ರಹ್ಮರಾಕ್ಷಸನಂತೆ ಅಲ್ಲಲ್ಲಿ ಅಲೆದಾಡಿಕೊಂಡು ತನ್ನ ಭಯಂಕರವಾದ ಕೃತ್ಯಗಳನ್ನು ನೆರವೇರಿಸುತ್ತಿದ್ದನು. ಮಹಾಪತ್ತೇದಾರನಾದ ಸೂಕ್ಷ್ಮ ಬುದ್ಧಿಯನ್ನು ತನ್ನ ಬೆನ್ನಟ್ಟಿಕೊಂಡು ಬರುವಂತೆ ಮಾಡಿ ಅತುಳವಾದ ಕೀರ್ತಿಯನ್ನು ಹೊಡೆದುಹಾಕಬೇಕೆಂಬ ಮಹದಾಶೆಯು ಅವನನ್ನು ಇನ್ನೂ ಬಿಟ್ಟಿಲ್ಲ! ಈ ಮಹದಾಶೆಯನ್ನು ಪೂರೈಸಬೇಕೆಂಬ ನೆವನದಿಂದಲೇ ಅವನು ತನ್ನ ಹೆಂಡತಿಯಾದ ಗುಲಾಬಿಯನ್ನು ಸೂಕ್ಷ್ಮಬುದ್ಧಿಯ ಕಣ್ಣು ಮುಂದೆಯೇ ಸರಿಯಾಗಿ ಮೂವತ್ತುಮೂರು ತುಂಡುಗಳನ್ನಾಗಿ ಕಡಿದು ಬಿಟ್ಟದ್ದು!! ಆದರೂ ಸೂಕ್ಷ್ಮಬುದ್ಧಿಯು ಅವನ ಬೆನ್ನನ್ನಟ್ಟಿಕೊಂಡು ಬರಲಿಲ್ಲವೇಕೆ? ಇನ್ನಾದರೂ ಅವನು ತನ್ನ ಬೆನ್ನನ್ನಟ್ಟಿಕೊಂಡು ಬರುವಂತೆ ತಾನು ಬೇರೆ ಯಾರ ಕೊಲೆಯನ್ನು ಮಾಡಲಿ? ಎಂಬ ವಿಚಾರದಲ್ಲಿಯೇ ಅಪ್ಪಯ್ಯನು ಮಗ್ನನಾಗಿದ್ದನು. ಹೀಗಿರುವಾಗ ಹುಕ್ಕಪ್ಪರೈಗಳ ಮನೆ ಯಲ್ಲಾಗುವ ಮದುವೆಗಳ ಸಮಾರಂಭವೇ ತನ್ನ ಮಹದಾಶೆಯನ್ನು ಪೂರೈಸಿಕೊಳ್ಳಲಿಕ್ಕೆ ಯೋಗ್ಯವಾದ ಸಂದರ್ಭವೆಂದು ಅವನೇಕೆ ತಿಳಿದು ಕೊಳ್ಳಬಾರದು?

ಗುಲಾಬಿಯನ್ನು ಕೊಂದವನ ಪತ್ತೆಯಲ್ಲಿರುವ ಶ್ರೇಷ್ಠ ಪತ್ತೇದಾರ ಸೂಕ್ಷ್ಮಬುದ್ಧಿಯಾದರೂ ಎಲ್ಲಿರುವನು? ಏನು ಮಾಡುವನು?—ಯಾರಿಗೆ ಗೊತ್ತು? ಅವನು ಬೆಳಕಿನಲ್ಲಿ ಬೆಳಕಿನಂತಿರುವನು. ಕತ್ತಲಲ್ಲಿ ಕತ್ತಲಿನಂತಿ ರುವನು. ಮುದುಕರಲ್ಲಿ ಮುದುಕನಂತಿರುವನು. ಹರೆಯದವರಲ್ಲಿ ಹರೆಯ ದವನಂತಿರುವನು. ಕ್ಷಣಕ್ಷಣಕ್ಕೂ ವೇಷವನ್ನು ಪಲ್ಲಟಮಾಡಿಕೊಳ್ಳುವ ಇಂತಹ ಮಹಾಪತ್ತೇದಾರನ ಪತ್ತೆಯನ್ನು ಮಾಡಲು ಯಾರಿಗೆ ಸಾಧ್ಯವು? ಆದರೆ ಒಂದನ್ನು ನಾವು ಖಂಡಿತವಾಗಿ ಹೇಳಬಲ್ಲೆವು.

ಸೂಕ್ಷ್ಮಬುದ್ಧಿಯು ಯಾವುದಾದರೊಂದು ಕೆಲಸಕ್ಕೆ ಕೈಹಾಕುವುದೇ ತಡ. ಅವನು ಅದನ್ನು ಕೊನೆಗಾಣಿಸುವವರೆಗೆ ಎಷ್ಟು ಮಾತ್ರಕ್ಕೂ ಬಿಡ ಲಿಕ್ಕಿಲ್ಲ. ಅಂತಹ ಹಟವಾದಿಯು ಅವನು. ಆದುದರಿಂದ ಅವನು ಇನ್ನೂ ಗುಲಾಬಿಯು ಕೊಲೆಗಾರನ ಪತ್ತೆಯಲ್ಲಿಯೇ ಇರುವನೆಂದು ನಾವು ಪ್ರತ್ಯೇಕ ಹೇಳಬೇಕೇ ?

ಗಳಿಗೆಗಳಿಗೆಗೆ ಕ್ಷಣಕ್ಷಣಕ್ಕೆ ಸೂಕ್ಷ್ಮಬುದ್ಧಿಯು ಅಪ್ಪಯ್ಯನ ಮೇಲೆ ಹಾಕಿದ ಬಲೆಯು ಬಿಗಿಯುತ್ತಾ ಬರುತ್ತದೆ ! ಅಪ್ಪಯ್ಯನೇ ಗುಲಾಬಿಯನ್ನು ಕೊಲೆಮಾಡಿದವನೆಂದು ಅವನಿಗೆ ಇನ್ನೂ ಒಂದೆರಡು ರುಜುವಾತುಗಳು ಮಾತ್ರ ಬೇಕಾಗಿವೆ. ಅವುಗಳು ಸಿಕ್ಕುವುದೇ ತಡ, ಆ ಮೇಲೆ ಅಪ್ಪಯ್ಯನನ್ನು ರಸಾತಳಕ್ಕೆ ಅವನು ಇಳಿಸದೆ ಬಿಡುವನೇ ?

ಸಮೀಪಿಸಿತು ! ಲಗ್ನದ ಮುಹೂರ್ತವು ಸಮೀಪಿಸಿತು !! ಗದ್ದ ಲವು ಎಂಟಮಡಿಯಾಯಿತು !!!

ಆದರೆ ಇದೇನು ?—

ಢಂ ! ಢಂ !! ಢಂ !!!

ಹುಕ್ಕಪ್ಪರೈಗಳು ಕೂಡಲೇ ಕಣ್ಣು ತಿರುಗಿಸಿಕೊಂಡು, ನಿಂತ ಲ್ಲಿಯೇ ಕೈಕಾಲು ಚಾಚಿಕೊಂಡು, ಧೊಪ್ಪನೆ ನೆಲದ ಮೇಲೆ ಬಿದ್ದರು !!

ಎಂತಹ ಅನಾಹುತ !!!

ಕವಿಗಳು ಹೇಳುವಂತೆ.... ಸಮಯವಿಲ್ಲ. ಇನ್ನೊಂದು ಸಂದರ್ಭ ದಲ್ಲಿ ಹೇಳುವೆವು.

ಕೂಡಲೇ ಮದುವೆಯ ಚಪ್ಪರದಲ್ಲಿ ನರಕದ ಗಲಿಬಿಲಿಯೇ ಬಿಡು ಗಡೆಹೊಂದಿತು. ಮದುವೆಯ ಆಹ್ಲಾದಕರವಾದ ಹಾಸ್ಯದ ಹಾಹಾ ಕಾರವು ಹೃದಯವನ್ನು ಭೇದಿಸುವ ರೋದನದ ಹಾಹಾಕಾರವಾಗಿ ಪರಿಣಮಿಸಿತು !

ಆ ಸಮಯದಲ್ಲಿಯೇ ಚಪ್ಪರದ ಮೂಲೆಯಲ್ಲಿದ್ದ ಒಂದು ದೊಡ್ಡ ಹಂಡೆಯಲ್ಲಿ ಅವಿತುಕೊಂಡಿದ್ದ ನರಳಿಸುತಿರುವ ಒಂದು ವ್ಯಕ್ತಿಯು

ಮಿಂಚಿನಂತೆ ಓಡಿ ಬಂದು ಹುಕ್ಕಪ್ಪರೈಗಳ ಶರೀರವನ್ನು ಯಾರಿಗೂ ತಿಳಿಯದಂತೆ ಪರೀಕ್ಷಿಸಿತು.

(ನೆರಳಿನಂತಿರುವ ವ್ಯಕ್ತಿಯು ಮಿಂಚಿನಂತೆ ಓಡಿ ಬರುವುದು ಹೇಗೆ? ಎಂದು ವಾಚಕರು ಕೇಳಬಹುದು. ಕನ್ನಡ ಪತ್ತೇದಾರಿ ಕಥೆಗಳನ್ನು ಓದುವಾಗ, ಅವುಗಳಲ್ಲಿಯೂ ಮುಖ್ಯವಾಗಿ ಹೆಂಗಸರಿಗೆ ಮತ್ತು ಮಕ್ಕಳಿಗೆಂದು ಬರೆದ ಕಥೆಗಳನ್ನು ಓದುವಾಗ್ಗೆ, ವಾಚಕರು ತಮ್ಮ ವಿಚಾರಶಕ್ತಿಯನ್ನು ಮುಂದಿಟ್ಟುಕೊಳ್ಳುವುದು ಶುದ್ಧ ತಪ್ಪು—ಗ್ರಂಥಕರ್ತ)

ಥಕ್ಕನೆ ಉದ್ಭವವಾದ ಆ ನೆರಳಿನಂತಿರುವ ವ್ಯಕ್ತಿಯಾದರೂ ಯಾರು?

ಅವನೇ ಶ್ರೇಷ್ಠ ಪತ್ತೇದಾರನಾದ ಸೂಕ್ಷ್ಮಬುದ್ಧಿಯು!!

ಕೊಲೆಯ ಮೇಲೆ ಕೊಲೆ! ಇಂತಹ ಭಯಂಕರವಾದ ಕೊಲೆಯು ಅಪ್ಪಯ್ಯನ ಕೃತ್ಯವೇ ಆಗಿರಬೇಕೆಂದು ಹೇಳಬೇಕೆ?

ಸೂಕ್ಷ್ಮಬುದ್ಧಿಗೆ ಈ ವಿಷಯದಲ್ಲಿ ಎಳ್ಳಷ್ಟಾದರೂ ಸಂಶಯವಿರಲಿಲ್ಲ! ಅವನು ಕೂಡಲೆ ಯಾರಿಗೂ ತಿಳಿಯದಂತೆ ಅಪ್ಪಯ್ಯನ ಬೆನ್ನಟ್ಟಿ ಹೋದನು!

ಸ್ವಲ್ಪ ಸಮಯದಲ್ಲಿಯೇ ಹುಕ್ಕಪ್ಪರೈಗಳು ಕಣ್ಣುಗಳನ್ನು ಒರಸಿಕೊಂಡರು. ಎದ್ದು ಕೂತುಕೊಂಡರು. ಸುತ್ತಲೂ ಒಮ್ಮೆ ಬಿರಬಿರನೆ ನೋಡಿದರು. ಆ ಮೇಲೆ ತಮ್ಮ ಗಲ್ಲಮಿಸೆಯನ್ನು ತುರಿಸಿಕೊಂಡರು. 'ಹೂಂ! ಮದುವೆಯ ಸಮಾರಂಭವು ನೆರವೇರಲಿ!' ಎಂದು ಅಪ್ಪಣೆ ಕೊಟ್ಟರು.

ಮದುವೆಯ ಸಮಾರಂಭವು ಸಾಂಗವಾಗಿ ನೆರವೇರಿತು.

ಮದುವೆಗೆಂದು ಸ್ಪೆಶಲಾಗಿ ಮಲಬಾರಿನಿಂದ ತರಿಸಿದ ಸಿಡಿಮದ್ದುಗಳ ಢಂ! ಢಂ! ಶಬ್ದವೂ ಶಾಂತವಾಯಿತು.

ಆವರೇನು? ಸೂಕ್ಷ್ಮಬುದ್ಧಿಯು ಅಪ್ಪಯ್ಯನಿಗಾಗಿ ಹಾಕಿದ ಬಲೆಯ ಗಂಟು ಇನ್ನೂ ಒಂದು ಅಂಗುಲಕ್ಕೆ ಬಿಗಿಯಾಯಿತು.

ಅಧ್ಯಾಯ ಎರಡು

# ಅಪೂರ್ವ ದರ್ಶನ

ಮಂಗಳೂರು ಬಾವಟೆಕಟ್ಟೆಯ ಕಂಬದ ಮೇಲೆ ಮಧ್ಯರಾತ್ರಿ. ಬಾವಟೆಕಟ್ಟೆಯ ಮೇಲೆಯೂ ಮಧ್ಯರಾತ್ರಿ. ಬಾವಟೆಕಟ್ಟೆಯಿರುವ ಗುಡ್ಡದಲ್ಲಿಯೂ ಮಧ್ಯರಾತ್ರಿ. ಗುಡ್ಡದ ಸುತ್ತಲೂ ಮಧ್ಯರಾತ್ರಿ. ಹೆಚ್ಚೇಕೆ? ಇಡೀ ಮಂಗಳೂರಿನಲ್ಲೇ ಮಧ್ಯರಾತ್ರಿ.

ಗುಡ್ಡದ ಮೇಲಿರುವ ಬಾವಟೆಕಂಬವು ಎಷ್ಟು ಎತ್ತರವಿರುವುದೆಂದು ಸರಿಯಾಗಿ ಹೇಳಲು ನಮಗೆ ಬಾರದು. ಆದರೆ ಅದರ ಅರ್ಧದಷ್ಟೇ ಎತ್ತರವಿರುವ ಲೋಕದ ಎಲ್ಲಾ ಬಾವಟೆಕಂಬಗಳಿಗಿಂತಲೂ ಇಮ್ಮಡಿಯಷ್ಟು ಅದು ಎತ್ತರವಾಗಿದೆಯೆಂದು ಖಂಡಿತವಾಗಿಯೂ ಹೇಳಬಲ್ಲೆವು.

ಅಷ್ಟು ಎತ್ತರವಾದ ಬಾವಟೆಕಂಬದ ತುದಿಯ ಮೇಲೆ ಕುಳಿತುಕೊಂಡು ತೀಕ್ಷ್ಣ ದೃಷ್ಟಿಯಿಂದ ಸುತ್ತಲೂ ಕತ್ತಲಲ್ಲಿ ನೋಡುತ್ತಾ ಇರುವ ವ್ಯಕ್ತಿಯನ್ನು ನೋಡಿರಿ! ಅವನೇ ನಮ್ಮ ಕಥಾನಾಯಕನಾದ ಸೂಕ್ಷ್ಮಬುದ್ಧಿಯು!

ಸೂಕ್ಷ್ಮಬುದ್ಧಿಯು ತತ್ಕಾಲಕ್ಕೆ ಮಡಿವಾಳನ ವೇಷದಲ್ಲಿರುತ್ತಾನೆ.

ಅಪ್ಪಯ್ಯನೇ ಗುಲಾಬಿಯನ್ನು ಕೊಲೆಮಾಡಿದನೆಂದು ಧೃಡಪಡಿಸಲಿಕ್ಕೆ ಅವನಿಗೆ ಇನ್ನೂ ಒಂದೆರಡು ರುಜುವಾತುಗಳು ಬೇಕಾಗಿವೆ. ಅವುಗಳನ್ನು ಹುಡುಕಿಕೊಂಡೇ ಸೂಕ್ಷ್ಮಬುದ್ಧಿಯು ಮಧ್ಯರಾತ್ರಿ ಎಂದು ಕೂಡ ಲೆಕ್ಕಿಸದೆ ಒಬ್ಬಂಟಿಗನಾಗಿ ಬಾವಟೆಕಂಬದ ತುದಿಯ ಮೇಲೆ ಕುಳಿತುಕೊಂಡು ಅವುಗಳಿಗಾಗಿ ಹುಡುಕುತ್ತಿದ್ದಾನೆ.

ಆದರೆ ಅವನು ಹೆಚ್ಚು ಸಮಯದ ವರೆಗೆ ಒಬ್ಬಂಟಿಗನಾಗಿ ಇರಲಿಲ್ಲ. ಏಕೆಂದರೆ ಬಾವಟೆಕಂಬದೊಳಗಿನ ಹರುಕು ಮುರುಕಾದ ಮೆಟ್ಟಲುಗಳನ್ನು ಮೆಲ್ಲಮೆಲ್ಲಗೆ ಜಾಗ್ರತೆಯಿಂದ ಹತ್ತುತ್ತಾ ಒಂದು ಅಪರಿಚಿತವಾದ ವ್ಯಕ್ತಿಯು ಅವನಿದ್ದೆಡೆಗೆ ಬಂದುಬಿಟ್ಟಿತು.

ಸೂಕ್ಷ್ಮಬುದ್ಧಿಯು ನಮ್ಮ ಕಥಾನಾಯಕನೆಂದಮೇಲೆ ಯಮರಾಯನು ಅಲ್ಲಿಗೆ ಬಂದರೂ ಅವನು ಹೆದರಲಿಕ್ಕಾದೀತೇ? ಇಲ್ಲ, ಎಷ್ಟು

ಮಾತ್ರಕ್ಕೂ ಇಲ್ಲ. ಆ ವ್ಯಕ್ತಿಯು ತನ್ನ ಸಮೀಪ ಬರುವ ವರೆಗೆ ಸುಮ್ಮನೆ ಕಾದು ಕೂತುಕೊಂಡು, ತನ್ನ ಸಮೀಪ ಬಂದೊಡನೆ, 'ಯಾರಪ್ಪಾ, ನೀನು? ಇಲ್ಲಿಗೆ ಬರಲು ಕಾರಣವೇನು?' ಎಂದು ಕೇಳಿಯೇ ಬಿಟ್ಟನು.

ಇದಕ್ಕೆ ಉತ್ತರವಾಗಿ ಆ ಅಪರಿಚಿತವಾದ ವ್ಯಕ್ತಿಯು 'ಶ್ರೇಷ್ಠ ಪತ್ತೇದಾರನಾದ ಸೂಕ್ಷ್ಮಬುದ್ಧಿಯೆಂದರೆ ನೀನೇ ಅಲ್ಲವೇ?' ಎಂದು ಕೇಳಿತು.

'ಹೌದು, ಸೂಕ್ಷ್ಮಬುದ್ಧಿಯೆಂದರೆ ನಾನೇ. ಆದರೆ ನನಗೆ ಬಹು ವಚನವನ್ನು ಕೊಟ್ಟೇ ಮಾತನಾಡುವುದು ಇಲ್ಲಿಯವರ ಸಂಪ್ರದಾಯ.'

'ಆದರೆ ಉಪಚಾರಗಳಿಗೆ ಈಗ ಸಮಯವಿಲ್ಲ. ನಿನ್ನ ಕಿವಿಯನ್ನು ಬಯಸಿ ಇಲ್ಲಿಗೆ ಬಂದಿರುತ್ತೇನೆ. ನನ್ನ ಹೆಂಡತಿಯಾದ ಗುಲಾಬಿಯನ್ನು ಕೊಲೆಮಾಡಿದವನು ನಾನೇ! ನನ್ನ ಹೆಸರು ಅಪ್ಪಯ್ಯನೆಂದು..ಏನು ನನ್ನ ಹೆಸರನ್ನು ಕೇಳಿದೊಡನೆ ನಿನ್ನ ಹೃದಯವು ಬಾಯೊಳಗೆ ಬರಲಿಲ್ಲವೇ? ಇರಲಿ, ಚಿಂತೆಯಿಲ್ಲ....ಗುಲಾಬಿಯು ನನ್ನ ಕಿವಿಯನ್ನು ಹಿಂಡಿದುದ ಕ್ಕೋಸ್ಕರವೇ ನಾನು ಅವಳನ್ನು ಕೊಂದದ್ದು ಎಂದು ನೀನು ತಿಳಿದು ಕೊಂಡಿರಬಹುದು. ಇಲ್ಲ! ನಾನು ಅವಳನ್ನು ಅದಕ್ಕಾಗಿ ಕೊಲ್ಲಲಿಲ್ಲ! ನೀನು ನನ್ನನ್ನು ಬೆನ್ನಟ್ಟಿಕೊಂಡು ಬರುವಂತೆ ನಾನು ಅವಳನ್ನು ಕೊಂದದ್ದು ಎಂದು ನೀನೂ, ನಮ್ಮ ಚರಿತ್ರೆಯನ್ನು ಬರೆಯುತ್ತಿರುವ (ಆದರೆ ನನ್ನ ವಿಷಯವಾಗಿ ಏನೂ ಅರಿಯದ) ಗ್ರಂಥಕರ್ತನೂ ತಿಳಿದು ಕೊಂಡಿರಬಹುದು. ಇದೂ ಶುದ್ಧ ತಪ್ಪು! ನಾನು ಗುಲಾಬಿಯನ್ನು ಅಂದು ರಾತ್ರಿ 'ವೆಲ್ಕಂ' ಹೊಟೇಲಿನಲ್ಲಿ ನಿಜವಾಗಿಯೂ ಏಕೆ ಕೊಂದು ಬಿಟ್ಟದ್ದೆಂದು ನಾನೀಗ ಹೇಳುವವನಿದ್ದೇನೆ—'

'ಹೂಂ! ಹೇಳಿ ಬಿಡು.'

'ಅವಳು ನನ್ನ ಹೆಂಡತಿಯಾಗಿದ್ದರೇನು? ನನ್ನಿಂದ ಸಹಿಸಲಾಗ ದಂತಹ ಒಂದು ದುರಭ್ಯಾಸವು ಅವಳಿಗೆ ಇತ್ತು. ಆದುದರಿಂದಲೇ ನಾನು ಅವಳನ್ನು ಸ್ವಲ್ಪವಾದರೂ ಬೇಸರ ಪಡದೆ ಕೊಂದುಬಿಟ್ಟದ್ದು. ಈಗ ಲಾದರೂ ತಿಳಿಯಿತೇ? ಈ ಸಂಗತಿಯನ್ನು ನಿನ್ನ ಮಿತ್ರನಂತೆ ನಟಿಸು

ತ್ತಿರುವ ಗ್ರಂಥಕರ್ತನಿಗೂ ತಿಳಿಸುವುದು ವಿಹಿತವು....ಗುಲಾಬಿಗಿದ್ದ ಆ ದುರಭ್ಯಾಸವು ಏನೆಂದು ಕೇಳುತ್ತೀಯಾ? ತಪ್ಪಾಯಿತು; ಹೇಳಲಿಕ್ಕೆ ಮರೆತುಹೋದೆ. ಪ್ರತಿರಾತ್ರಿ ನಿದ್ದೆಮಾಡುವ ಮೊದಲು ಅವಳು ಎರಡೆರಡು ನೀರುಳ್ಳಿಗಡ್ಡೆಗಳನ್ನು ಸ್ವಲ್ಪವಾದರೂ ದಾಕ್ಷಿಣ್ಯವಿಲ್ಲದೆ ತಿಂದುಬಿಡುತ್ತಿದ್ದಳು!....ಅದಿರಲಿ. ನಾನು ಅವಳ ಕೊಲೆಮಾಡಿದ್ದೆಂಬುದೇನೋ ನಿಜವು. ಕೊಲೆಮಾಡಿದವನಿಗೆ ಮರಣ ತಪ್ಪದೆಂದು ಯಾರೋ ಒಬ್ಬ ಉಗ್ರಕವಿ ಹರಿದಾಸರು ಹೇಳುವುದನ್ನೂ ಕೇಳಿದ್ದೇನೆ. ಆದರೆ ಮಾಡುವುದೇನು? ನನಗೆ ಜೀವದ ಮೇಲೆ ಬಹಳ ಆಸೆ. ನನ್ನ ಜೀವವೆಂದರೆ ನನ್ನ ಪ್ರಾಣವೇ ಸರಿ! ಕುತ್ತಿಗೆಗೆ ಹಗ್ಗ ಹಾಕಿಕೊಂಡು ಪ್ರಾಣದಾನವನ್ನು ಮಾಡಲಿಕ್ಕೆ ನನ್ನ ಮನಸ್ಸು ಎಷ್ಟು ಮಾತ್ರಕ್ಕೂ ಒಡಂಬಡಲಿಕ್ಕಿಲ್ಲವೆಂದು ನಾನು ಖಂಡಿತವಾಗಿಯೂ ಹೇಳುತ್ತೇನೆ. ಆದುದರಿಂದ ನಾನೀಗ ಕೇಳಲಿಕ್ಕಿರುವ ಪ್ರಶ್ನೆಗೆ ನಿಜವಾದ ಉತ್ತರವನ್ನು ಕೊಡಬೇಕು. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು.'

'ನೀನು ಬೇಕಾದ ಪ್ರಶ್ನೆಗಳನ್ನು ಕೇಳಬಹುದು. ಆದರೆ ಒಂದು ಮಾತು. ಒಗಟುಗಳನ್ನು ಮಾತ್ರ ಕೇಳಬೇಡ. ಅವುಗಳನ್ನು ಬಿಚ್ಚಲು ನನಗೆ ಸಮಯವಿಲ್ಲ.'

'ನಾನು ಕೇಳುವುದು ಒಗಟಲ್ಲ. ಗುಲಾಬಿಯನ್ನು ಕೊಲೆಮಾಡಿದವನ ಪತ್ತೆಯಲ್ಲಿ ನೀನು ಉದ್ಯುಕ್ತನಾಗಿರುವೆ ಎಂದು ನಾನು ಅನೇಕ ಕಾರಣಗಳಿಂದ ತಿಳಿದುಕೊಂಡಿರುವೆನು. ಇದು ನಿಜವೋ ಎಂದು ಹೇಳಿಬಿಡು!'

'ಇದು ನಿಶ್ಚಯವೇ ಸರಿ! ನನಗೆ ಹೇಳಲಿಕ್ಕೆ ಹೆದರಿಕೆ ಏಕೆ?' ಎಂದು ಸೂಕ್ಷ್ಮಬುದ್ಧಿಯು ಗಾಂಭೀರ್ಯದಿಂದ ಉತ್ತರಕೊಟ್ಟನು.

'ಹಾಗಾದರೆ ನಾನು ಬಚಾವಾದೆ!!'

ಅಪ್ಪಯ್ಯನ ಹೃದಯದೊಳಗಾದ ಸಂತೋಷವು ಮಿತಿಮೀರಿ ಉಕ್ಕಿಬಂದು ಅವನ ಮುಖದಲ್ಲೆಲ್ಲ ಪಸರಿಸಿಕೊಂಡಿತು. ಕೂಡಲೇ ಅವನು ಆಹ್ಲಾದದಿಂದ ಹಿಂತಿರುಗಿ ಬಾವಟೆಕಂಬದ ತುದಿಯಿಂದ ಕೆಳಗೆ

ಇಳಿಯುಲಿಕ್ಕೆ ಹೆಜ್ಜೆಯನ್ನಿಟ್ಟನು. ಆಹ್ಲಾದದಿಂದಲೋ ಏನೋ, ಅರ ಚುತ್ತಾ, ಒಂದೇ ಹೆಜ್ಜೆಯೊಳಗೆ ಬಾಪಟಿಕಂಬದ ಕೆಳಗೆ ಬಂದುಬಿಟ್ಟನು.

'ಸೂಕ್ಷ್ಮಬುದ್ಧಿಯು ತನ್ನ ಜೇಬಿನೊಳಗಿಂದ ತನ್ನ Note......s (ನೋಟ್ಸ) ಬುಕ್ಕನ್ನು ಹೊರತೆಗೆದು ಅದರಲ್ಲಿ ಏನನ್ನೋ ಬರೆದುಬಿಟ್ಟನು. 'ಇಷ್ಟು ದಿನಗಳವರೆಗೆ ಕಾದರೂ ಚಿಂತೆಯಿಲ್ಲ; ನನ್ನ ಪ್ರಯತ್ನಗಳು ಸಫಲ ವಾದುವು. ಈಗಲಾದರೂ ನನಗೆ ಬೇಕಾದ ರುಜುವಾತೊಂದು ಸಿಕ್ಕಿತು!' ಎಂದು ತನ್ನಷ್ಟಕ್ಕೆ ಹೇಳುತ್ತಾ ಬಾಪಟಿಕಂಬದ ತುದಿಯಿಂದ ಮೆಲ್ಲಗೆ ಕೆಳಗೆ ಇಳಿದನು.

---

ಅಧ್ಯಾಯ ಮೂರು

## ಮಂಗಳಾರತಿ

ಒಂದು ದಿನ ಮಧ್ಯಾಹ್ನ ಅಪ್ಪಯ್ಯನು ಮಂಗಳೂರಿನ ನಿರ್ಜನವಾ ದೊಂದು ಪ್ರದೇಶದಲ್ಲಿ ಅಲೆದಾಡುತ್ತಿರುವಾಗ ಬೇಂಕಿಗೆ ಹಣವನ್ನು ಕಟ್ಟಲಿಕ್ಕೆಂದು ಹೋಗುವ ಶ್ರೀಮಂತ ಮನುಷ್ಯನೊಬ್ಬನ ಅಂಗಿಯ ಜೇಬಿನಲ್ಲಿ ನೂರು ರೂಪಾಯಿಗಳ ಇಪತ್ತು ನೋಟುಗಳು ಅವನ ಕೈಗೆ ಏನೂ ತೊಂದರೆ ಇಲ್ಲದೆ ಸಿಕ್ಕಿದುವು. ಹೀಗಾಗಿ ಅವನು ಈಗ 'ಪೆಂಟ ಲೆಂಡ್' ಪೇಟೆಯಲ್ಲಿ ಅರಮನೆಯಂತಿರುವ ಒಂದು ದೊಡ್ಡ ಮನೆಯಲ್ಲಿ ವಾಸಿಸಿಕೊಂಡು ಯಾರಗೊಡವೆಯೂ ಇಲ್ಲದೆ ಶ್ರೀಮಂತನಂತೆ ಮೆರೆಯು ತ್ತಿರುವನು. ಬರುವ ಮ್ಯುನಿಸಿಪಲ್ ಚುನಾವಣೆಗೆ ನಿಲ್ಲಬೇಕೆಂತಲೂ ಆಲೋಚಿಸಿರುವನು.

ರಾತ್ರಿ ಹತ್ತು ಗಂಟೆ. ಅಪ್ಪಯ್ಯನು ಭೋಜನಾದಿಗಳನ್ನು ತೀರಿಸಿ ಕೊಂಡು ತನ್ನ ಬೈಠಕ್‌ಕೋಣೆಯಲ್ಲಿ ಒಂದು ವಿರಾಮ ಕುರ್ಚಿಯ ಮೇಲೆ ಸಿಗರೇಟೊಂದನ್ನು ಎಳೆಯುತ್ತಾ ಕೂತುಕೊಂಡಿರುವನು.

ಆ ಸಮಯದಲ್ಲಿ ಸೂಕ್ಷ್ಮಬುದ್ಧಿಯು ಒಂದು ಡಜನ್ ಪೋಲೀಸು ಜವಾನರೊಂದಿಗೆ ಆ ಕೋಣೆಯಳಗೆ ಫಕ್ಕನೆ ಪ್ರವೇಶಿಸಿ, 'ಹಿಡಿಯಿರಿ ಆ ಹರಾಮಖೋರನನ್ನು!' ಎಂದು ತನ್ನ ಸಂಗಾತಿಗಳಿಗೆ ಆಜ್ಞಾಪಿಸಿದನು.

ಇದನ್ನು ಕೇಳುತ್ತಲೇ ಅಪ್ಪಯ್ಯನು ತಗಣೆ ಕಚ್ಚಿದಂತೆ ಏರಾವು ಕುರ್ಚಿಯಿಂದ ಕೂಡಲೇ ಎದ್ದುನಿಂತನು.

'ಏನು, ನನ್ನನ್ನು ಕೈದು ಮಾಡುವಿರೇ? ಯಾವ ಆರೋಪಣೆಯು ಮೇಲೆ?' ಎಂದು ಕೇಳಿದನು.

'ನಿನ್ನ ಹೆಂಡತಿಯಾದ ಗುಲಾಬಿಯನ್ನು ಕೊಲೆಮಾಡಿದುದಕ್ಕಾಗಿ!' ಎಂದು ಸೂಕ್ಷ್ಮಬುದ್ಧಿಯು ಉತ್ತರಕೊಟ್ಟನು.

'ನಿನ್ನ ರುಜುವಾತುಗಳು?'

'ಅನೇಕವಿವೆ. ಮೊದಲಾಗಿ ನೀನು ಗುಲಾಬಿಯನ್ನು ಕೊಂದದ್ದು ನಾನು ಸ್ವತಃ ನೋಡಿದ್ದೇನೆ. ಎರಡನೆಯದಾಗಿ ಬಾವಟೆಕಟ್ಟೆಯ ಕಂಬದ ತುದಿಯ ಮೇಲೆ ನೀನೇ ಆಗಿ ನನ್ನೊಡನೆ ಬಾಯಿ ಬಿಚ್ಚಿರುವಿ!'

ಇದನ್ನು ಕೇಳಿ ಅಪ್ಪಯ್ಯನು ಗಟ್ಟಿಯಾಗಿ ನಕ್ಕನು. 'ಇದರಲ್ಲಿ ಏನೋ ಪರಾಮೋಶಿಯಾಗಿರಬೇಕು. ಇಗೋ ನೋಡು, ಗುಲಾಬಿಯು ಹೃದ್ರೋಗದಿಂದ ಸತ್ತಿದ್ದಳೆಂದು ತೋರಿಸುವ ಡಾಕ್ಟರರ ಸರ್ಟಿಫೀಕೆಟು!' ಎಂದು ಕೂಡಲೇ ತನ್ನ ಜೇಬಿನಲ್ಲಿದ್ದ ಒಂದು ಕಾಗದವನ್ನು ಹೊರತೆಗೆದು ಸೂಕ್ಷ್ಮಬುದ್ಧಿಗೆ ಕೊಟ್ಟನು.

ಸೂಕ್ಷ್ಮಬುದ್ಧಿಯು ಕಾಗದವನ್ನು ನೋಡಿದನು.

ಅದು ಇಂಪೀರಿಯಲ್ ಬೇಂಕಿಗೆ ೨,೫೦೦ ರೂಪಾಯಿಗಳಿಗೆ ಅವನ ಹೆಸರಿನಲ್ಲಿ ಒಂದು ಚೆಕ್ಕು ಆಗಿತ್ತು.

ಕೂಡಲೆ ಅದನ್ನು ತನ್ನ ಜೇಬಿನೊಳಗಿಟ್ಟು ತನ್ನ ಸಂಗಾತಿಗಳಿದ್ದೆಡೆಗೆ ತಿರುಗಿದನು. 'ಹೌದು, ಅಪ್ಪಯ್ಯನು ಹೇಳಿದುದು ನಿಜವು. ನಾನೇನೋ ಇದರಲ್ಲಿ ತಪ್ಪುಮಾಡಿರುವೆನು. ನಮಗೆ ಇಲ್ಲಿರಲು ಕೆಲಸ ವಿಲ್ಲ. ಹೋಗೋಣ' ಎಂದನು.

ಪೋಲೀಸು ಜವಾನರು ಹಿಂತೆರಳಿದರು. ಸೂಕ್ಷ್ಮಬುದ್ಧಿಯೂ ಅವರನ್ನು ಹಿಂಬಾಲಿಸಿ ಹೋಗುವುದರಲ್ಲಿದ್ದನು.

ಅಪ್ಪಯ್ಯನು ಇದನ್ನು ನೋಡಿ, 'ಒಂದು ಕ್ಷಣನಿಲ್ಲು! ನಿನ್ನೊಡನೆ ನನಗೆ ಸ್ವಲ್ಪ ಕೆಲಸವುಂಟು!' ಎಂದು ಹೇಳಿದನು.

ಹೋಗಲಿಕ್ಕಿದ್ದ ಸೂಕ್ಷ್ಮಬುದ್ಧಿಯು ಅಲ್ಲಿಯೇ ನಿಂತನು.

ಕೂಡಲೇ ನಾಲ್ಕುವರೆ ಅಡಿ ಎತ್ತರವಾಗಿದ್ದ ಅಪ್ಪಯ್ಯನು ಆರಡಿ ಎತ್ತರವಾದನು! ತನ್ನ ಕೃತಕ ಮಿಾಸೆಯನ್ನೂ, ಹುಬ್ಬುಗಳನ್ನೂ, ಗಡ್ಡವನ್ನೂ ಒಂದೇಸವನೆ ಬಿಸಾಡಿದನು. ಸೂಕ್ಷ್ಮಬುದ್ಧಿಯು ಮೇಲೆ ತಟಕ್ಕನೆ ಹಾರಿ ಅವನ ಕೃತಕ ಮಿಾಸೆಯನ್ನೂ, ಹುಬ್ಬುಗಳನ್ನೂ, ಕಿವಿಯೊಂದನ್ನೂ ತೆಗೆದು ಬಿಸಾಡಿದನು. ಆರಡಿ ಎತ್ತರವಾಗಿದ್ದ ಸೂಕ್ಷ್ಮಬುದ್ಧಿಯೆಂದೆನ್ನಿಸಿಕೊಂಡವನು ಕೂಡಲೇ ನಾಲ್ಕುಕಾಲು ಅಡಿ ಎತ್ತರವಾದನು.

ಇದೇನು ಪರಮಾಶ್ಚರ್ಯ!!

ಅಪ್ಪಯ್ಯನೆಂದೆನ್ನಿಸಿಕೊಂಡವನು ನಿಜವಾಗಿಯೂ ಸೂಕ್ಷ್ಮಬುದ್ಧಿಯಾಗಿದ್ದನು!! ಸೂಕ್ಷ್ಮಬುದ್ಧಿಯೆಂದೆನ್ನಿಸಿಕೊಂಡವನು ನಿಜವಾಗಿಯೂ ಅಪ್ಪಯ್ಯನಾಗಿದ್ದನು!!!

ಎಂತಹ ಅತ್ಯದ್ಭುತವಾದ ಟ್ರಾನ್ಸ್ಫರು!!

ಕೂಡಲೆ ಅವರಿಬ್ಬರೂ ಒಬ್ಬನ ಮೇಲೆ ಮತ್ತೊಬ್ಬನು ಬಿದ್ದು ಹೋರಾಡಿದರು. ಒಂದು ಕ್ಷಣದಲ್ಲಿಯೇ ಅವರಿಬ್ಬರೂ ಅಲ್ಲಿಂದ ಮಾಯವಾದರು.

ಇದುವರೆಗೆ ಅವರಿಬ್ಬರ ಪತ್ತೆಯಿಲ್ಲ!

ಇದುವರೆಗೆ ಗುಲಾಬಿಯ ಕೊಲೆಗಾರನ ಪತ್ತೆಯೂ ಆಗಲಿಲ್ಲ!!



# ನಾನು, ನಾಗಣ್ಣ

'ನಾನು, ನಾಗಣ್ಣ. ನಮ್ಮ ಮಂಗಳೂರಿನವರಿಗೆಲ್ಲ ನಾನು ನಾಗಣ್ಣನೇ ಆಗಿರುವಾಗ್ಗೆ ನಿಮಗೆ ಮಾತ್ರ ಯಾಕೆ ನಾನು ನಾಗೇಂದ್ರರಾಯನಾಗಬೇಕು? ನಿಮಗೂ ನಾನು ನಾಗಣ್ಣನೇ. ನೆನಪಿರಲಿ. ಪ್ರಾಯದಲ್ಲಿ ಹಳಬನಾದರೂ ವರ್ತನೆಯಲ್ಲಿ ನೂತನನು. ಆದುದರಿಂದಲೇ ನಿಮ್ಮ ಪರಿಚಯವನ್ನು ಮಾಡಿಕೊಂಡಂದಿನಿಂದ ತರುಣರ ಸ್ನೇಹವನ್ನು ಬಯಸುವ ನನ್ನ ಆತ್ಮಕ್ಕೆ ಶಾಂತಿಯುಂಟಾಗಿದೆ. ನೀವು ಇನ್ನು ಮುಂದೆ ನನ್ನನ್ನು ನಿಮ್ಮವನಂತೆಯೇ ಎಣಿಸಬೇಕು. ನನ್ನ ಕೂಡೆ ವರ್ತಿಸುವಾಗ್ಗೆ ಪದ್ಧತಿ, ರೀತಿ ಮೊದಲಾದ ತೊಡಕುಗಳನ್ನು ಕಟ್ಟಿಕೊಳ್ಳುವ ಅವಶ್ಯಕತೆಯಿಲ್ಲ. ನನ್ನನ್ನು ಬಹುವಚನದಿಂದ ಆದರಿಸಬೇಕೆಂತಲೂ ಇಲ್ಲ. ನಾನು ನಿಮಗೆ ಬರೇ ನಾಗಣ್ಣನು. ಮುಂದೆ ನೀವು ನನ್ನನ್ನು ನೋಡಿದಾಕ್ಷಣವೇ 'ಏನು ನಾಗೇಂದ್ರರಾಯರೇ?' ಎಂದು ಬಾಯಿ ಉದ್ದುಮಾಡಿ ಕೇಳಿದ್ದೇ ಆದರೆ ನಾನು ನಿಜವಾಗಿಯೂ ಸಿಟ್ಟಾಗುವೆನು. 'ಏನು, ನಾಗಣ್ಣ? ಇವತ್ತೇನು ಸುದ್ದಿ?' ಎಂದು ಕೇಳಿದರೆ ನನಗೆ ಪರಮಾನಂದವಾಗುವುದು.'

ಈ ರೀತಿಯಾಗಿ ನಾನು ಮದ್ರಾಸಿನಿಂದ ನಮ್ಮೂರಿಗೆ ನೂತನವಾಗಿ ಬಂದು ಕದ್ರಿಯಲ್ಲಿ ವಾಸಮಾಡಿಕೊಂಡಿದ್ದ ಆ ತರುಣದಂಪತಿಗಳ ಗುರುತನ್ನು ಮೊದಲು ಮಾಡಿಕೊಂಡಿದ್ದೆನು. ಅಂದಿನಿಂದ ದಿನಕ್ಕೆ ಒಂದು ಬಾರಿಯಾದರೂ ಅವರಿದ್ದಲ್ಲಿಗೆ ಹೋಗಿ, ಅವರ ಕೂಡ ಎರಡು ಮಾತುಗಳನ್ನಾಡದಿದ್ದರೆ ನನ್ನ ಮನಸ್ಸಿಗೆ ಹಿತವಾಗುತ್ತಿದ್ದಿಲ್ಲ. ಆ ದಂಪತಿಗಳಾದರೋ ನೂತನ ದಂಪತಿಗಳು—ಗಂಡಬೇರುಂಡ ಪಕ್ಷಿಗಳು ಒಂದನ್ನಗಲಿ ಮತ್ತೊಂದು ಒಂದು ಕ್ಷಣವಾದರೂ ಇರಲಾರದು. ಇದರಿಂದ

ಒಂದೊಂದು ಸಾರಿ ಅವರ ಮನೆಗೆ ಹೋಗಬೇಕಾದರೆ ನಾನು ಬಹಳ ಜಾಗ್ರತೆಯಿಂದಿರಬೇಕಿತ್ತು !

ಗಂಡನ ಹೆಸರು ಅರವಿಂದ, ಹೆಂಡತಿಯ ಹೆಸರು ಕೇಸರಿ. ಗಂಡನಿಗೆ ತಕ್ಕುದಾದ ಹೆಂಡತಿಯು, ಹೆಂಡತಿಗೆ ಯೋಗ್ಯನಾದ ಗಂಡನು. ಬ್ರಹ್ಮನೇ ಅವರ ದಾಂಪತ್ಯದಲ್ಲಿ ವಿಶೇಷ ಸಾಹಸಪಟ್ಟಿರುವಂತೆ ತೋರುತ್ತಿತ್ತು. ಅರವಿಂದನಾದರೋ ನಾನು ನೋಡಿದ ಯುವಕರಲ್ಲೆಲ್ಲ ಒಂದು ಕೇಸರಿಯು. ಕೇಸರಿಯಾದರೋ ಸ್ತ್ರೀ ಜಾತಿಯಲ್ಲೆಲ್ಲ ಒಂದು ಅರಳಿದ ಅರವಿಂದವು.

ಸಂಸಾರದ ತೆರೆಗಳಿಂದ ನನ್ನ ಕಣ್ಣುಗಳು ಕ್ಷಣಕ್ಷಣಕ್ಕೆ ತೋಯಿಸಲ್ಪಟ್ಟು, ಈಗ ಅವುಗಳು ಬಹಳ ಮಂದವಾಗಿವೆ. ಅಂತಹ ಕಣ್ಣುಗಳು ಕೂಡ ಅವರ ದಾಂಪತ್ಯ ಸುಖದ ಛಾಯೆಯನ್ನು ಆಗಾಗ್ಗೆ ಶುಭ್ರವಾಗಿ ಪ್ರತಿಬಿಂಬಿಸುತ್ತಿದ್ದುವು. ಅವರ ಎಳೇ ಪ್ರೇಮದ ಹಾವಭಾವಗಳನ್ನು ನೋಡುವಾಗಲೆಲ್ಲ ನನ್ನ ಜನ್ಮಪುಸ್ತಕದ ಹಳೇ ಹಾಳೆಗಳಲ್ಲಿ ವಿದ್ಯುಚ್ಛಕ್ತಿಯ ದೀಪದ ಪ್ರಬಲವಾದ ಪ್ರಕಾಶವು ಬೀರಿಕೊಳ್ಳುವಂತೆ ತೋರುತಿತ್ತು. ಇಂತಹ ದಂಪತಿ ಶಿರೋಮಣಿಗಳಲ್ಲಿ ಬಡ ಮುದುಕನಾದ ನಾನು, ನಾಗಣ್ಣನು, ಅಷ್ಟು ಪ್ರೇಮವನ್ನು ಬೆಳೆಸಿದ್ದುದರಲ್ಲಿ ಆಶ್ಚರ್ಯವೇನು ?

ಈ ದಂಪತಿಗಳೂ ನನ್ನನ್ನು ನೋಡುತ್ತಲೇ ವಿಶೇಷ ಆನಂದಪಡುವರು. ನನ್ನನ್ನು ಮೊದಲು ವಿಚಾರಿಸಿಕೊಂಡೇ ಅವರ ಗೃಹಕಾರ್ಯಗಳನ್ನೆಲ್ಲಾ ನೆರವೇರಿಸುವರು. ಗಂಡಹೆಂಡರಿಬ್ಬರೂ ಎಳೇ ಪ್ರಾಯದವರಾಗಿದ್ದುದರಿಂದ ಸಂಸಾರ ಸಾಗರದಲ್ಲಿ ಈಜಾಡಿ ತೇಲುವುದಕ್ಕೆ ಮುದುಕನಾದ ನನ್ನ ಅನುಭವವು ಅವರಿಗೆ ಅಮೂಲ್ಯವಾಗಿತ್ತು. ಅಲ್ಪ ಸಮಯದಲ್ಲಿಯೇ ನಾನು ಅವರ ಆಪ್ತ ಸ್ನೇಹಿತನಾದೆನು. ನನ್ನ ಮಾತುಕಥೆಗಳನ್ನು ಕೇಳುವುದರಲ್ಲಿ ಅವರಿಗೆ ತೃಪ್ತಿಯೇನೆಂಬುದೇ ಗೊತ್ತಿರಲಿಲ್ಲ. ಯಾವುದಾದರೊಂದು ಕಾರಣಾಂತರದಿಂದ ನನಗೆ ಅವರ ಮನೆಗೆ ಒಂದು ದಿನಕ್ಕೆ ಹೋಗಲಿಕ್ಕಾಗದಿದ್ದರೆ ಅವರು ನನ್ನ ಮೇಲೆ ಸಿಟ್ಟಾಗಿ ಮಂಗಳೂರೆಂಬುದು ಒಂದು ಸ್ಮಶಾನವೆಂದು ಗೊಣಗೊಟ್ಟುವರು. ಎಷ್ಟಾದರೂ ಅವರು

ಮದ್ರಾಸಿನಿಂದ ಬಂದಿದ್ದರಲ್ಲವೇ ? ನಮ್ಮ ಮಂಗಳೂರು ಕೂಡ ಇತ್ತೀತ್ತ ಲಾಗೆ ಒಂದು ಮದ್ರಾಸಾಗಿದೆಂದು ಅವರು ಇನ್ನು ತಿಳಿಯಬೇಕಷ್ಟೇ. ಪ್ರತಿ ದಿನವೂ ಅನೇಕ ತಾಸುಗಳ ವರೆಗೆ ಅವರೊಂದಿಗೆ ಬೇಕಾದಷ್ಟು ಹರಟೆಯನ್ನಾಡಿ ಮನೆಗೆ ಹೋಗಬೇಕೆಂದು ನಾನು ನಿಶ್ಚೈಸಿದ ಕೂಡಲೇ ಅವರ ಮೋರೆಗಳು ಸಣ್ಣದಾಗುವುವು. 'ನಾಗಣ್ಣಾ, ನೀನು ಯಾವಾಗಲೂ ನಮ್ಮಲ್ಲೇ ಯಾಕೆ ನಿಲ್ಲಬಾರದು?' ಎಂದು ಕೇಸರಿಯು ಒಂದೊಂದು ಸಾರಿ ನನ್ನನ್ನು ಕೇಳುವಳು. ಹಾಗೆ ಅವಳು ಕೇಳುವಾಗಲೆಲ್ಲ ನನ್ನ ಕಣ್ಣುಗಳಿಂದ ಒಂದೆರಡು ತಟಕುಗಳು ಹೊರಬೀಳುವುವು. ಸರಿ; ಅವರಲ್ಲೇ ನಿಲ್ಲುವುದಕ್ಕೆ ನನಗೆ ಅಭ್ಯಂತರವೇನು ? ಒಮ್ಮೆ ತಲೆನೊಂವಾದರೆ ಕೂಡ ನನ್ನನ್ನು ಪ್ರೀತಿಯಿಂದ ನೋಡುವುದಕ್ಕೆ ಯಾರೂ ಇಲ್ಲ. ಅವರಲ್ಲಿ ನಿಂತರೆ ಅವರಿಬ್ಬರೂ ನನ್ನನ್ನು ಸ್ವಂತ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಸಿ ಆದರಿಸುವರೆಂದು ಬಲ್ಲೆನು. ಆದರೆ—ಹೌದು, ಇದಕ್ಕೂ ಒಂದು 'ಆದರೆ' ಇದೆ—ನನ್ನ ಸಂಸಾರ ಯಾತ್ರೆಯಲ್ಲಿ ನೊದಲು ಮೊದಲು ಅತ್ಯಾದರದಿಂದ ಸಂಗ್ರಹಿಸಿದ ವಸ್ತುಗಳನ್ನೆಲ್ಲಾ ದೈವೇಚ್ಛೆಯಿಂದ ಇತ್ತೀತ್ತಲಾಗೆ ನಾನು ಒಂದೊಂದನ್ನೇ ಕಳೆದುಕೊಳ್ಳುತ್ತಾ ಬಂದು, ನನ್ನ ಹತ್ತಿರ ಈಗ ಉಳಿದುದು ಸ್ವಾತಂತ್ರ್ಯವೆಂಬ ಚಿಂತಾಮಣಿಯೊಂದೇ; ಅದನ್ನೂ ನಾನು ಹೇಗೆ ಬೇಕೆಂತಲೆ ಕಳೆದುಕೊಳ್ಳಲಿ ? ನಾನೇನೋ ಹುಚ್ಚನಾಗಿರಬಹುದು ಆದರೆ ಹುಚ್ಚನಿಗೂ ಸ್ವಾತಂತ್ರ್ಯವೆಂಬುದು ಶ್ರೇಷ್ಠವಲ್ಲವೇ ? ಅದಂತಿರಲಿ.

ಒಂದು ದಿನ ಆದಿತ್ಯವಾರ ಮಧ್ಯಾಹ್ನ ಮೂರು ಗಂಟೆಗೆ ನಾನು ಎಂದಿನಂತೆ ಅರವಿಂದನ ಮನೆಗೆ ಹೋದೆನು. ರಜಾದಿನವಾದುದರಿಂದ ಅರವಿಂದನು ಮನೆಯಲ್ಲೇ ಇದ್ದು ನನ್ನ ಬರೋಣವನ್ನು ನಿರೀಕ್ಷಿಸುತ್ತಾ ಇರಬಹುದೆಂದು ತಿಳಿದುಕೊಂಡೆನು. ನನ್ನ ಗ್ರಹಿಕೆಯು ತಪ್ಪಾಗಿತ್ತೆಂದು ನನಗೆ ಕೂಡಲೆ ತಿಳಿದುಬಂತು. ಯಾವಾಗಲೂ ನಾನು ಅವರ ಅಂಗಳದೊಳಗೆ ಹೆಜ್ಜೆಯನ್ನಿಟ್ಟಕೂಡಲೇ ಅರವಿಂದನಾಗಲಿ ಕೇಸರಿಯಾಗಲಿ, ಒಮ್ಮೊಮ್ಮೆ ಇಬ್ಬರೂ ಕೂಡಿ, ನನ್ನನ್ನು ಆದರದಿಂದ ಎದುರುಗೊಂಡು ಮನೆಯೊಳಗೆ ಕರೆದುಕೊಂಡು ಹೋಗುತ್ತಿದ್ದರು. ಆದರೆ ಅಂದು ನಾನು

ಅವರ ಮನೆಯ ಬಾಗಿಲಲ್ಲಿ ಬಂದು ನಿಂತರೂ ನನ್ನನ್ನು ಒಳಗೆ ಕರಕೊಂಡು ಹೋಗಲಿಕ್ಕೆ ಯಾರೂ ಬರಲಿಲ್ಲ. ನನಗೆ ಆಶ್ಚರ್ಯವಾಯಿತು. ಆದರೆ ಅವರು ನೂತನ ದಂಪತಿಗಳೆಂದು ನಾನು ಮೊದಲೇ ಹೇಳಿದ್ದೇನಲ್ಲವೇ ? ತಮ್ಮ ಸರಸಸಲ್ಲಾಪಗಳಲ್ಲೇ ಮಗ್ನರಾಗಿದ್ದು ಮುದುಕನು ಬರುವ ಸಮಯವನ್ನು ಮರೆತುಬಿಟ್ಟಿರಬಹುದೆಂದು ತಿಳಿದುಕೊಂಡು, ನನ್ನ ಬರೋಣವನ್ನು ಅವರಿಗೆ ತಿಳಿಸುವಂತೆ ನನ್ನ ಒಣ ಗಂಟಲಿನೊಳಗಿಂದ ಚಿಕ್ಕ ಕೆಮ್ಮು ಒಂದನ್ನು ಎಬ್ಬಿಸಿದೆನು. ಅದೂ ನಿರರ್ಥಕವಾಯಿತು. ಆಶ್ಚರ್ಯವು! ನನ್ನ ಕೆಮ್ಮು ಸ್ವಲ್ಪ ಜೋರಾಗಲಿಕ್ಕೆ ಪ್ರಾರಂಭಿಸಿತು. ಎಷ್ಟಾದರೂ ಮುದುಕನಲ್ಲವೇ ?

'ಯಾರದು ಹೊರಗೆ ?' ಎಂದು ಒಂದು ಕೋಗಿಲೆಯ ಸ್ವರವು ಒಳಗಿನಿಂದ ಕೇಳಲಾರಂಭಿಸಿತು.

'ನಾನು ನಾಗಣ್ಣ' ಎಂದೆನು.

ಮಂದಹಾಸದಿಂದೊಡಗೂಡಿದ ಕೇಸರಿದೇವಿಯು ಕೂಡಲೇ ಸುಪ್ರಸನ್ನಳಾದಳು. 'ನಾಗಣ್ಣಾ, ಬಂದೆಯಾ? ಬಹಳ ಒಳ್ಳೇದಾಯಿತು. ನಾನು ಎಂತಹ ಹುಚ್ಚಿ ! ನಿನ್ನ ಬರೋಣದ ಸಮಯವನ್ನು ಮರೆತೇ ಬಿಟ್ಟೆನು.'

'ಹೌದು, ಮರೆತುಬಿಟ್ಟೆ. ಆದರೆ ಅರವಿಂದನು ಮನೆಯಲ್ಲಿರುವಾಗ್ಗೆ ಅದೊಂದು ಆಶ್ಚರ್ಯವೆಂದು ನನಗೆ ಕಂಡುಬರುವುದಿಲ್ಲ,' ಎಂದು ಹೇಳುತ್ತ ಅವರ ಬೈಠಕಿನ ಕೊಠಡಿಯನ್ನು ಪ್ರವೇಶಿಸಿದೆನು.

'ಏನು ಹೇಳಿವಿ, ನಾಗಣ್ಣ ? ಅವರು ಮನೆಯಲ್ಲಿಲ್ಲ, ಹೊರಗೆ ಹೋಗಿದ್ದಾರೆ. ತಿಳಿಯಿತೇನು ? ಮನೆಯಲ್ಲಿ ಯಾರೂ ಇಲ್ಲದೆ ಬೇಸರವಾಗುತ್ತದೆ.'

ಕೇಸರಿಯನ್ನು ಎವೆಯಿಕ್ಕದೆ ನೋಡಿದೆನು. ಪ್ರಾಯದಿಂದ ನನ್ನ ಕಣ್ಣುಗಳಲ್ಲಿ ಮಂಜುಗಟ್ಟಿರಬಹುದು. ಇದನ್ನು ನಾನು ಅಲ್ಲಗಳೆಯುವುದಿಲ್ಲ. ಆದರೆ ಹಾಗೆ ಮಂಜು ಕಟ್ಟಿದರೆ ಕಂಡುಬರಬೇಕಾದ ವಸ್ತುಗಳು ಒಂದೊಂದು ಸಾರಿ ಕಂಡುಬಾರದೆ ಇರುವುದಲ್ಲದೆ ಕಾಣಬಾರದ ವಸ್ತುಗಳು ಕಂಡುಬರುವುವೇ? ಕೇಸರಿಯು ತನ್ನ ಗಂಡನು ಹೊರಗೆ ಹೋಗಿ

ರುವನೆಂದು ಹೇಳುತ್ತಿರುವಾಗಲೇ ಅವನು ಮೂಲೆಯಲ್ಲಿದ್ದ ಆರಾಮ ಕುರ್ಚಿಯಲ್ಲಿ ಕುಳಿತುಕೊಂಡು ಸಿಗರೇಟೊಂದನ್ನು ಸೇದುವುದನ್ನು ನೋಡಿದೆನು. ಕೇಸರಿಯು ನನ್ನನ್ನು ಪರಿಹಾಸ್ಯ ಮಾಡುತ್ತಿರುವಳೆಂದು ತಿಳಿದುಕೊಂಡೆನು.

'ಅವರು ಹೊರಗೆ ಹೋಗಿರುತ್ತಾರೆಂದು ಹೇಳಿದ್ದೇನಲ್ಲವೇ? ಅಲ್ಲೇನು ನೋಡುತ್ತೀ, ನಾಗಣ್ಣಾ?'

'ಹುಚ್ಚು ಹುಡುಗಿ! ಅರವಿಂದನು ಇಲ್ಲಿಲ್ಲವಾದರೆ ಅದ್ಯಾರು? ಆ ಮೂಲೆಯಲ್ಲಿ ಸಿಗರೇಟನ್ನು ಸೇದುತ್ತಾ ಕೂತುಕೊಂಡಿರುವ ವ್ಯಕ್ತಿಯು? ನಿನ್ನ ಅರವಿಂದನಲ್ಲವೇ?'

'ನಾನು ಹೇಳುವುದನ್ನು ನಂಬುವುದಿಲ್ಲವೇ? ಒಳ್ಳೇದು, ನನಗೇನು'

ಕೇಸರಿಯು ಆಗ್ಗೆ ಹದಿನೇಳು ವರ್ಷದ ನವನಾರಿಯಾದುದು ಮೋಸವಾಯಿತು; ಏಳು ವರ್ಷದ ಹುಡುಗಿಯಾಗಿದ್ದರೆ ಒಳ್ಳೇದಿತ್ತು; ಮುದುಕನನ್ನು ಪರಿಹಾಸ್ಯ ಮಾಡಿದುದಕ್ಕೆ ಬಲವಾಗಿ ಒಂದೇಟನ್ನು ಕೊಡುತ್ತಿದ್ದೆ.

'ಕೇಸರೀ ನಿನ್ನ ಪರಿಹಾಸ್ಯ ಸಾಕು,..'

'ಪರಿಹಾಸ್ಯವೇ?'

'ಮತ್ತೇನು?....ಅರವಿಂದಾ, ನಾನು ಬಂದಿದ್ದೇನಲ್ಲವೇ? ಬಾ, ಮುದುಕನ ಹತ್ತಿರ ಮಾತಾಡು. ಮೂಕನಂತೆ ಅಲ್ಲಿ ಯಾಕೆ ಕೂತಿದ್ದೀ?'

ಅರವಿಂದನು ಕದಲಲೂ ಇಲ್ಲ, ನನ್ನನ್ನು ನೋಡಲೂ ಇಲ್ಲ. ಕೇಸರಿಯು ಗಟ್ಟಿಯಾಗಿ ನಕ್ಕುಬಿಟ್ಟಳು ನಾನು ಆಗಲೇ ಎರಡು ಮೊಳ ಗಿಡ್ಡನಾದೆನು.

'ನಾನು ಮೊದಲೇ ಹೇಳಲಿಲ್ಲವೇ? ಅವರು ನಿಜವಾಗಿಯೂ ಇಲ್ಲಿಲ್ಲ. ಹೊರಗೆ ಹೋಗಿದ್ದಾರೆ. ಯಾವಾಗ ಹಿಂತಿರುಗಿ ಬರುವರೋ, ತಿಳಿಯದು. ಆದರೆ ಚಿಂತೆ ಇಲ್ಲ, ನಾಗಣ್ಣಾ, ಅವರಿಲ್ಲದಿದ್ದರೆ ನಾನಿದ್ದೇನಲ್ಲವೇ?'

ನನ್ನ ದೃಷ್ಟಿಯು ಮಾತ್ರವಲ್ಲ, ಬುದ್ಧಿಯೂ ಮಂದವಾಯಿತೆಂದು ತಿಳಿದುಕೊಂಡೆನು. ಆದರೂ ದೂರದಲ್ಲಿದ್ದ ವ್ಯಕ್ತಿಯು ಇನ್ನೂ ಅರವಿಂದ

ನಾತೆಯೇ ಕಂಡು ಬಂತು. 'ಅರವಿಂದನಲ್ಲದಿದ್ದರೆ ಮತ್ಯಾರು ಅಲ್ಲಿ?' ಎಂದು ಬೆರಳು ತೋರಿಸಿ ಕೇಸರಿಯನ್ನು ಕೇಳಿದೆನು.

'ಯಾರೂ ಆಗಿರಬಹುದು. ನನಗೇನು?' ಎಂದು ಕೇಸರಿಯು ನಗುತ್ತಾ ಉತ್ತರ ಕೊಟ್ಟಳು.

ಗಂಡಹೆಂಡರಿಬ್ಬರೂ ಕೂಡಿ ಮುದುಕನಾದ ನನ್ನನ್ನು ಮಂಕು ಮಾಡುವ ಪ್ರಯತ್ನದಲ್ಲಿದ್ದಾರೆಂದು ಸಂಶಯವಿಲ್ಲದೆ ತಿಳಿದುಕೊಂಡೆನು. ಆದರೆ ನಾನೇನು ಬಿಡುವೆನೇ? ಅರವಿಂದನಿದ್ದಲ್ಲಿಗೆ ಹೋಗಿ, ಅವನ ವಿಶಾಲವಾದ ಭುಜದ ಮೇಲೆ ಗರಿಗಳಂತಿರುವ ನನ್ನ ಬೆರಳುಗಳನ್ನಿಟ್ಟು, ಅವನ ಮುಖವನ್ನು ಕಣ್ಣಿಟ್ಟು ನೋಡಿದೆನು. ಅರವಿಂದನೇ ಸಂಶಯವಿಲ್ಲ! ಆದರೆ ಇದೇನು? ಅವನು ಇನ್ನೂ ಮೂಕನಂತೆ ಕುಳಿತಿರುವನಲ್ಲ! ಯಾವಾಗಲೂ ನಾನು ಬಂದೊಡನೆಯೇ ಅತ್ಯಂತ ಸಂತೋಷವನ್ನು ಸೂಚಿಸಿ ನನ್ನೊಡನೆ ಉತ್ಸುಕತೆಯಿಂದ ಮಾತುಗಳನ್ನಾಡುತ್ತಿದ್ದ ಅರವಿಂದನು ನಿಜವಾಗಿಯೂ ಇವನೇ? ನಾನು ಬಂದ ಸಂಗತಿಯನ್ನು ಕೂಡ ಗ್ರಹಿಸಲಾರದವನಂತೆ ಕೂತುಕೊಂಡಿದ್ದನು! ನನ್ನ ಹೃದಯಕ್ಕೆ ಹಗ್ಗಹಾಕಿ ಎಳೆದಂತೆ ತೋರಿತು. ಆದರೂ ನನ್ನನ್ನು ಮಂಕು ಮಾಡುವುದಕ್ಕೋಸ್ಕರವೇ ಈ ದಂಪತಿಗಳು ಏನೋ ಒಂದು ಒಳಸಂಚನ್ನು ನಡಿಸಿಕೊಂಡಿರಬೇಕೆಂದು ನಿರ್ಧರಿಸಿದೆನು. ಆದುದರಿಂದ ಅರವಿಂದನ ಭುಜವನ್ನು ತಟ್ಟಿ, 'ಅರವಿಂದಾ, ನಿಮ್ಮ ಚೇಷ್ಟೆಯನ್ನು ಸಾಕುಮಾಡಿ. ಈ ಮುದುಕನನ್ನು ನೀವಿಬ್ಬರೂ ಕೂಡಿ ಇನ್ನೆಷ್ಟುಹೊತ್ತು ಕಾಡಬೇಕೆಂದಿದ್ದೀರಿ?' ಎಂದು ಮೊರೆಯಿಟ್ಟು ಕೇಳಿದೆನು.

ಇದೇನು, ಅರವಿಂದನಿಗೆ ಅಂದು ಹಿಡಿದಿದ್ದ ಹುಚ್ಚುತನವು? ನನ್ನ ಪ್ರಶ್ನೆಗೆ ಉತ್ತರ ಕೊಡುವ ಬದಲಾಗಿ ಸಿನೇಮಾ ಪಾತ್ರದವರು ಮಾಡುವಂತೆ ತನ್ನ ಎಡಕೈಯ ಮುಷ್ಟಿಯನ್ನು ಸಾವಧಾನದಿಂದ ನನ್ನ ಮೂಗಿನ ತುದಿಯವರೆಗೆ ತಂದಿರಿಸಿದನು. ನಾನು ದಿಗಿಲುಬಿದ್ದು, ಎರಡು ಹೆಜ್ಜೆ ಹಿಂದಕ್ಕೆ ಸರಿದು, ಅವನ ಮುಷ್ಟಿಯನ್ನೇ ದಿಟ್ಟಿಸಿನೋಡಿದೆನು. ನನ್ನ ಮೆದುಳಿನ ತ್ರಾಣವೆಲ್ಲಾ ಆರಿಹೋಗುವಂತೆ ತೋರಿತು. ಕೇಸರಿಯು ಇನ್ನೊಂದು ಬಾರಿ ಗಟ್ಟಿಯಾಗಿ ನಕ್ಕು ಬಿಟ್ಟಳು.

'ನಾಗಣ್ಣಾ, ನಾನು ನಿಜವಾಗಿಯೂ ನಿನಗೋಸ್ಕರ ಬಹಳ ವ್ಯಥೆ ಪಡುತ್ತೇನೆ. ಅವರು ಈ ಕೊಠಡಿಯಲ್ಲಿಲ್ಲವೆಂದು ನಾನು ಹೇಳಿದ್ದಾಗ ನೀನು ಕೇಳಲಿಲ್ಲ. ಈಗೇನು ಹೇಳುವಿ?'

'ಹೌದು ಕೇಸರಿ, ಅರವಿಂದನು ನಿಜವಾಗಿಯೂ ಇಲ್ಲಿಲ್ಲ,' ಎಂದು ಮೆಲ್ಲಮೆಲ್ಲಗೆ ಹೇಳಿದೆನು. ಈ ದಂಪತಿಗಳು ಇಂತಹ ವಿಕಾರವಾದ ಸ್ಥಿತಿಯಲ್ಲಿರುವಾಗ್ಗೆ ನಾನು ನನ್ನ ಗೂಡನ್ನು ವಾಪಸು ಸೇರುವುದೇ ಲೇಸೆಂದು ತಿಳಿದುಕೊಂಡು ಬಾಗಿಲಿನ ಕಡೆಗೆ ಹೋದೆನು.

'ಇದೇನು, ನಾಗಣ್ಣಾ? ನೀನೂ ಹೋಗುವೆಯಾ? ಈ ಎರಡು ತಾಸುಗಳಿಂದ ಜೀವಕ್ಕೆ ಬೇಸರ ಹತ್ತಿರುತ್ತದೆ–ನಾಗಣ್ಣಾ–ನಾಗಣ್ಣಾ!–ಹೋಗಬೇಡ, ನನ್ನಾಣೆಯುಂಟು!'

'ನಾಗಣ್ಣನು' ಕೇಳದೆ ಹೋದನು. ಮನೆಯಿಂದ ಅಂಗಳಕ್ಕೆ ಬಂದಿಳಿದನು.

'ನಾಗಣ್ಣಾ–ನಾಗಣ್ಣಾ!–ಹೋಗಬೇಡ! ನಾಗಣ್ಣಾ, ನಿನಗೋಸ್ಕರ ಮಾಡಿಟ್ಟಿದ್ದ ಸ್ವಲ್ಪ ತಿಂಡಿಯನ್ನಾದರೂ ತಿಂದು ಹೋಗು! ನಾಗಣ್ಣಾ!'

ಆದರೂ ನಾಗಣ್ಣನು ಹಿಂದಿರುಗಲಿಲ್ಲ. ಅವನು ಬಹಳ ರೇಗಿದ್ದನು.

'ನಾಗಣ್ಣಾ, ಹೋಗಬೇಡ!'

ಇದೇನು, ಇದು ಅರವಿಂದನ ಸ್ವರವು! ಅರವಿಂದನು ಪುನಃ ತನ್ನ ಸಹಜಾವಸ್ಥೆಗೆ ಬಂದನೇ?

ನಾನು ಹಿಂದಿರುಗಿ ನೋಡುವಷ್ಟರೊಳಗೆ ಅರವಿಂದನು ತನ್ನ ಬಲವಾದ ಕೈಯನ್ನು ನನ್ನ ಎಡ ಭುಜದ ಮೇಲಿಟ್ಟನು. ನಾನು ಸಹಜವಾಗಿ ಅವನ ಎಡಕೈಯನ್ನು ನೋಡಿದೆನು. ಅದನ್ನು ಮುಷ್ಟಿ ಕಟ್ಟಿರಲಿಲ್ಲ. ದೇವರು ಕೊಟ್ಟ ಬುದ್ಧಿ ಎಂದು ತಿಳಿದುಕೊಂಡೆನು.

ಅರವಿಂದನು ನನ್ನನ್ನು ಮನೆಯೊಳಗೆ ಎಳೆದುಕೊಂಡು ಹೋಗಿ–ಅವನು ಅಷ್ಟು ಉತ್ಸಾಹವನ್ನು ತೋರಿಸಬೇಕಾಗಿದ್ದಿಲ್ಲ; ನನ್ನ ಕೈಗಳ ನೋವು ಉಪಶಮನವಾಗುವುದಕ್ಕೆ ಎರಡು ದಿನಗಳು ತಾಗಿದುವು–

ನನ್ನನ್ನು ಒಂದು ಕುರ್ಚಿಯ ಮೇಲೆ ಬಲಾತ್ಕಾರದಿಂದ ಕುಳ್ಳಿರಿಸಿದನು.

'ನಾಗಣ್ಣಾ, ನೀನು ಬಂದಿರುವಾಗ್ಗೆ ನಾನು ಯಾವದೋ ಒಂದು ಕಾರಣಾಂತರದಿಂದ ಮನೆಯಲ್ಲಿಲ್ಲದೆ ಹೋದೆ. ಅದಕ್ಕಾಗಿ ಬಹಳ ವ್ಯಸನ ಪಡುತ್ತೇನೆ. ಆದರೆ ಈಗ ಹಾಗಲ್ಲ. ನಾನೂ ಇದ್ದೇನೆ, ಅವಳೂ ಇದ್ದಾಳೆ, ನೀನೂ ಇದ್ದಿ—'

'ನಿನ್ನ ವ್ಯಾಕರಣ ಪಾಠವನ್ನು ಸ್ವಲ್ಪ ಸಾಕು ಮಾಡು—ಕೇಸರಿ ಎಲ್ಲಿ ?'

ನಾವಿಬ್ಬರೂ ಆ ಕೊಠಡಿಯೊಳಗೆ ಸುತ್ತುಮುತ್ತಲೂ ನೋಡಿದೆವು. ಕೇಸರಿಯು ದೂರದಲ್ಲಿ ಮೊದಲು ಅರವಿಂದನು ಕೂತುಕೊಂಡಿದ್ದ ಆರಾಮ ಕುರ್ಚಿಯಲ್ಲಿಯೇ ಕೂತುಕೊಂಡಿದ್ದಳು. ಆದರೆ ಇದೇನು ? ಅವಳೂ ಅರವಿಂದನಂತೆಯೇ ತನ್ನ ಎಡಕೈಯ ಮುಷ್ಟಿ ಕಟ್ಟಿಕೊಂಡು ಮೂಕಳಂತೆ ಕೂತುಕೊಂಡಿದ್ದಳು ! ನನಗೆ ಅಂದು ಹಿಡಿದುದು ಗ್ರಹಚಾರವೇ ಸರಿ ಎಂದು ತಿಳಿದುಕೊಂಡೆನು. ಮೊದಲು ಅರವಿಂದ, ಈಗ ಕೇಸರಿ !

ಅರವಿಂದನು ಕೇಸರಿಯ ಈ ಸ್ವಭಾವಾಂತರವನ್ನು ನೋಡಿದ ಕೂಡಲೇ ಒಂದು ಕ್ಷಣಕ್ಕೆ ಹುಬ್ಬುಕಟ್ಟಿದನು. ಒಂದು ಕ್ಷಣಕ್ಕೆ ಅವನ ಮುಖವು ಕೆಂಡದಂತೆ ಕೆಂಪೇರಿತು, ಆದರೆ ಒಂದು ಕ್ಷಣಕ್ಕೆ ಮಾತ್ರ. ಕೂಡಲೇ ನನ್ನನ್ನು ನೋಡಿ, 'ನಾಗಣ್ಣಾ, ನಾವಿಬ್ಬರೂ ಇಲ್ಲಿ ಒಂದೊಡನೆಯೇ ಅವಳು ಎಲ್ಲಿಗೋ ಹೊರಟು ಹೋದಳೆಂದು ತಿಳಿಸಲು ಬೇಸರ ಪಡುತ್ತೇನೆ. ಆದರೆ ಚಿಂತಿಲ್ಲ, ನಾಗಣ್ಣಾ, ಅವಳಿಲ್ಲದಿದ್ದರೆ ಅವಳು ನಿನಗಾಗಿ ಮಾಡಿಟ್ಟಿದ್ದ ತಿಂಡಿಯಾದರೂ ಇರುವುದಲ್ಲವೇ? ಸ್ವಲ್ಪ ಕುಳಿತುಕೊ. ನಾನೀಗ ಅದನ್ನು ತರುವೆನು' ಎಂದು ಹೇಳಿ ಕೂಡಲೆ ಮನೆಯೊಳಗೆ ಮಾಯವಾದನು. ಕಾಫಿಬೀಫಿ ಬೇಡವೆಂದು ಹೇಳಲಿಕ್ಕೆ ಕೂಡ ನನಗೆ ಆಸ್ಪದಕೊಡಲಿಲ್ಲ.

ಅರವಿಂದನು ಬೈಠಕಿನ ಕೊಠಡಿಯನ್ನು ಬಿಟ್ಟು ಒಳಗೆ ಹೋದ ಕೂಡಲೇ, ನನ್ನ ದೃಷ್ಟಿಯು ಸಹಜವಾಗಿ ಮೂಲೆಯಲ್ಲಿ ಮೂಕಳಂತೆ

ಕುಳಿತಿರುವ ಕೇಸರಿಯ ಮೇಲೆ ಬಿತ್ತು. ಆಶ್ಚರ್ಯವು! ಅವಳ ಎಡಕೈ ಏನೋ ಇನ್ನೂ ಮುಷ್ಟಿಯಾಗಿ ಹಿಡಿಯಲ್ಪಟ್ಟಿತ್ತು. ಆದರೆ ಮೋಡಗಳ ಮಧ್ಯದಿಂದ ಬರುವ ಸೂರ್ಯನ ಪ್ರಕಾಶದಂತೆ ಅವಳ ಸೊಗಸಾದ ಮುಖದಲ್ಲಿ ಅರ್ಥಗರ್ಭಿತವಾದ ಒಂದು ಮುಗುಳ್ನಗೆಯು ಶೋಭಿಸುವಂತೆ ಈ ವೃದ್ಧ ಕಣ್ಣುಗಳಿಗೆ ತೋರಿ ಬಂತು. ಈ ಮುಗುಳ್ನಗೆಯ ಅರ್ಥವನ್ನು ತಿಳಿಯಬೇಕೆಂದು ಅವಳ ಹತ್ತಿರ ಹೋಗಲಿಕ್ಕೆ ಕೂಡಲೇ ಕುರ್ಚಿಯಿಂದೆದ್ದುಬಿಟ್ಟೆನು. ಆದರೆ ಆ ಕ್ಷಣವೇ ಅರವಿಂದನು ಕೊಠಡಿಯೊಳಗೆ ಬರಲು, ಆ ಮುಗುಳ್ನಗೆಯು ಆಷಾಢಮಾಸದ ಸೂರ್ಯನ ಪ್ರಕಾಶದಂತೆ ಅಲ್ಲಿಯೇ ಮಾಯವಾಯಿತು. ನಾನೂ ಬೇರೆ ಉಪಾಯವಿಲ್ಲದೆ ಆ ಕುರ್ಚಿಯಲ್ಲಿಯೇ ಪುನಃ ಕೂತುಕೊಂಡೆನು.

'ನಾಗಣ್ಣಾ, ನೀನು ಕುಳಿತುಕೊಂಡಿದ್ದೀಯೋ ಅಥವಾ ಪಲಾಯನ ಮಾಡಿದೆಯೋ ಎಂದು ನೋಡಲಿಕ್ಕೆ ಬಂದಿದ್ದೆನು ಅಷ್ಟೆ' ಎಂದು ಅರವಿಂದನು ಹೇಳಿದನು.

'ಇಲ್ಲ, ಅರವಿಂದಾ, ನಾನು ಹೋಗುವುದಿಲ್ಲ. ಆದರೆ ಕಾಫಿ ಬೀಫಿ..' ನಾನು ಮುಗಿಸುವಷ್ಟರೊಳಗೆ ಅರವಿಂದನು ಪುನಃ ಒಳಗೆ ಹೋದನು.

ಅಹಾ, ನಾನು ನಿಜವಾಗಿಯೂ ಎಂತಹ ಹುಚ್ಚನು! ಪ್ರಾಯ ಹೋದಾಗಲೆಲ್ಲ ಬುದ್ಧಿಯು ಮಂಕಾಗುತ್ತ ಬರುತ್ತದೆಂಬುದರಲ್ಲಿ ಸಂಶಯವಿಲ್ಲ. ನಾನು ಅಂದು ಅರವಿಂದ-ಕೇಸರಿಯರ ಅಪೂರ್ವವಾದ ನಟನೆಯನ್ನು ಅಷ್ಟು ಹೊತ್ತು ನೋಡಿದ್ದರೂ, ಅದರ ನಿಜವಾದ ಕಾರಣವನ್ನು ಕಂಡುಹಿಡಿಯಲಿಕ್ಕೆ ನನಗೆ ಎಷ್ಟು ಹೊತ್ತಿನ ವರೆಗೆ ಸಾಧ್ಯವಾಗದೆ ಹೋಯಿತು! ಮುದುಕನಾದ ನನ್ನನ್ನು ಮಂಕು ಮಾಡುವದಕ್ಕೋಸ್ಕರವೇ ಈ ತರುಣ ದಂಪತಿಗಳು ನನ್ನೊಡನೆ ಈ ರೀತಿಯಲ್ಲಿ ವರ್ತಿಸುತ್ತಿದ್ದುವರೆಂದು ನಾನು ಇಷ್ಟರ ವರೆಗೆ ಹುಚ್ಚನಂತೆ ತಿಳಿದುಕೊಂಡಿದ್ದೆನಲ್ಲ! ಅವರ ಈ ವರ್ತನೆಯ ನಿಜವಾದ ಕಾರಣವು—ಏನು, ಏನು?—ಬಂದೇ! ಗಂಡಹೆಂಡಂದಿರ ಸಹಜವಾದ ಜಗಳ—ಮತ್ತೇನು?

'ನೋಡಿ, ಮಾಪಯ್ಯ, ಇದು ನೀವು ಬರೆದ ನಿಮ್ಮ ಹೆಸರೆಂದು ಅಮ್ಮ ಹೇಳುತ್ತಿದ್ದರು. ನೋಡಿ, ಇದರ ಕೆಳಗೇನೇ ಅಮ್ಮನು ಬರೆದ ಅವರ ಹೆಸರು..ಇದು ನೀವು ಮಾಡಿದ ಗುರುತು ಅಂತೆ....'

ನಾಯಕನು ಮೈಮರೆತನು. ಕೂಡಲೇ ಹುಡುಗಿಯಿಂದ ಆ ಪುಸ್ತಕವನ್ನು ಕಿತ್ತುಕೊಂಡನು. ಅಲುಗಾಡುವ ಬೆರಳುಗಳಿಂದ ಅದರ ಹಾಳೆಗಳನ್ನು ಮಗುಚಿದನು.....ಕೂಡಲೇ ಒಂದು ದೊಡ್ಡ ಅರಚನ್ನು ಹಾಕಿ ಪುಸ್ತಕವನ್ನು ಕೆಳಗೆ ಬಿಟ್ಟುಬಿಟ್ಟನು....ಪುಸ್ತಕವು ನೆಲದ ಮೇಲೆ ಧೊಪ್ಪನೆ ಬಿತ್ತು....ನಾಯಕನು ರೆಪ್ಪೆಗೆ ರೆಪ್ಪೆಯನ್ನು ತಾಗಿಸದೆ ಕಮಲೆಯನ್ನು ದೀರ್ಘಸಮಯದ ವರೆಗೆ ನೋಡಿದನು. ಹತ್ತು ವರ್ಷಗಳ ದಪ್ಪವಾದ ಪದರುಗಳು ಅವನ ಕಣ್ಣುಗಳನ್ನು ಮುಚ್ಚಿದ್ದುವು. ಅವುಗಳೆಲ್ಲ ಈಗ ಫಕ್ಕನೆ, ಒಂದೇಸವನೆ ಉದುರಿಬಿದ್ದುವು....ಕಮಲೆಯು ಕೂತಲ್ಲಿಂದ ಏಳದೆ ನಾಯಕನ ಈ ಭಾವಾಂತರವನ್ನು ನೋಡಿ ಅವನನ್ನು ಆಶ್ಚರ್ಯದಿಂದ ನೋಡುತ್ತಾ ಕೂತುಕೊಂಡಳು....

'ಕಮಲೆ..ಕಮಲೆ....' ಎಂದು ನಾಯಕನು ಮೆಲ್ಲಮೆಲ್ಲಗೆ ಹೇಳಿದನು.

'ಏನು ಮಾಪಯ್ಯ?' ಎಂದು ಕಮಲೆಯು ಕೇಳಿದಳು.

'ನಾನು..ನಾನು..ನಿಜವಾಗಿಯೂ ನಿನ್ನ ಸೋದರಮಾವನು..'

'ನಿಮಗೆ ಸಂಶಯವಿತ್ತೇ?..ನಾನು ಮೊದಲೇ ಹೇಳಲಿಲ್ಲವೇ?' ಎಂದು ಕಮಲೆಯು ಹೇಳಿದಳು.

ನಾಯಕನು ಉತ್ತರ ಕೊಡಲಿಲ್ಲ..ಹೊರಗೆ ಜನರ ಗಲಾಟೆಯು ಇನ್ನೂ ನಿಂತಿರಲಿಲ್ಲ. ಆದರೆ ಅದಕ್ಕೆಲ್ಲ ನಾಯಕನು ಈಗ ಕಿವುಡಾದನು. ಹತ್ತು ವರ್ಷ!..ಹತ್ತು ವರ್ಷಗಳ ಕೆಳಗೆ ನಾಯಕನೂ ಅವನ ತಂಗಿ ರುಕ್ಕುವೂ ಬಹಳ ಅನ್ಯೋನ್ಯದಲ್ಲಿದ್ದರು! ಹತ್ತು ವರ್ಷಗಳ ಕೆಳಗೆ ಅವನ ತಂಗಿ ರುಕ್ಕು ತನ್ನ ತವರುಮನೆಯಲ್ಲಿ ನಿಲ್ಲಬೇಕೆಂದು ಬಂದಿದ್ದಳು... ಒಂದು ತಿಂಗಳು ನಿಂತಿದ್ದಳು..ಒಂದು ತಿಂಗಳು ಸುಖವಾಗಿ ನಿಂತಿದ್ದಳು. ಆದರೆ ತಿಂಗಳು ಅಂತ್ಯವಾಗುವಷ್ಟರಲ್ಲಿಯೇ ಯಾವುದೋ ಒಂದು ಚಿಕ್ಕ

ಸಂಗತಿಯು ಅವರೊಳಗೆ ಮನಃಕ್ಲೇಶವನ್ನು ಎಬ್ಬಿಸಿತು. ಸಂಗತಿಯೇನೋ ಬಹಳ ಅಲ್ಪವಾಗಿತ್ತು. ಆದರೆ ಅದರಿಂದುದ್ಭವಿಸಿದ ಪರಿಣಾಮವು ಘೋರ ವಾಗಿ ಪರಿಣಮಿಸಿತು. ನಾಯಕನು ತನ್ನ ತಂಗಿಯನ್ನು ತನಗೆ ಜೀವ ವಿರುವ ವರೆಗೆ ನೋಡಲಾರೆನೆಂದು ಶಪಥ ಹಾಕಿಕೊಂಡನು. ರುಕ್ಕುವು ತನಗೆ ಪ್ರಾಣವಿರುವ ವರೆಗೆ ತನ್ನಣ್ಣನ ಮನೆಯಲ್ಲಿ ಕಾಲಿಡಲಾರೆನೆಂದು ಆಣೆಹಾಕಿಕೊಂಡಳು. ಆ ದಿನವೇ ರುಕ್ಕುವು ತವರುಮನೆಯಿಂದ ಗಂಡನ ಮನೆಗೆ ಹೊರಟಿದ್ದಳು! ಹತ್ತು ವರ್ಷ! ಹತ್ತು ವರ್ಷಗಳು ಮನು ಷ್ಯನ ಜೀವಮಾನದಲ್ಲಿ ಅಲ್ಪವಾದ ಸಮಯವಲ್ಲ! ಆದರೆ ನಾಯಕನು ಹಟವಾದಿ ಎಂದು ನಾನು ಮೊದಲೇ ಹೇಳಲಿಲ್ಲವೇ? ರುಕ್ಕುವು ಅವನ ತಂಗಿಯು. ಅದರಲ್ಲಿಯೂ ಹೆಂಗಸು. ಅವಳೂ ಹಟವಾದಿಯಾದುದರಲ್ಲಿ ಆಶ್ಚರ್ಯವೇನು? ಈ ಹತ್ತು ವರ್ಷಗಳ ಪರ್ಯಂತವೂ ಅಣ್ಣ—ತಂಗಿಯರು ತಮ್ಮ ತಮ್ಮ ಪ್ರತಿಜ್ಞೆಯನ್ನು ಪಾಲಿಸಿಕೊಂಡು ಬಂದಿದ್ದರು. ನಾಯ ಕನು ಗಂಡಸು. ಅದರಲ್ಲಿಯೂ ಧನದಲ್ಲಿ ಆಸಕ್ತಿಯುಳ್ಳವನು. ಧನವನ್ನು ಶೇಖರಿಸುವುದರಲ್ಲಿ ರುಕ್ಕುವನ್ನು ಕೂಡಲೇ ಮರೆತುಬಿಟ್ಟಿದ್ದನು. ತೀರಾ ಮರೆತುಬಿಟ್ಟಿದ್ದನು. ಈ ಹತ್ತುವರ್ಷಗಳಲ್ಲಿಯೂ ಅವಳು ಜೀವದಲ್ಲಿ ದ್ದಳೋ ಇಲ್ಲವೋ ಎಂಬುದನ್ನು ಕೂಡ ಅವನು ಅರಿಯದಿದ್ದನು. ಈ ಹತ್ತು ವರ್ಷಗಳಲ್ಲಿಯೂ ಅವನ ಹೃದಯದಿಂದ ರುಕ್ಕುವು ತೀರಾ ಮಾಯವಾಗಿ ಹೋಗಿದ್ದಳು.

ಆದರೆ, ಹತ್ತುವರ್ಷಗಳ ಕೆಳಗೆ!—ಹತ್ತುವರ್ಷಗಳ ಕೆಳಗೆ ಅವರೊಳ ಗಿದ್ದ ಮಮತೆಯು ಅಸ್ಪಷ್ಟವಾಗಿರಲಿಲ್ಲ! ಕಮಲೆಯು ಹಿಡಿದಿದ್ದ ಆ ಪುರಾತನವಾದ ಪುಸ್ತಕವೇ ಅವರೊಳಗಿದ್ದ ಮಮತೆಯ ಮೂಕವಾದ ಸಾಕ್ಷಿಯಾಗಿತ್ತು....ಪ್ರತಿಜ್ಞೆ..ಪ್ರತಿಜ್ಞೆಯು ಹಾಳಾಗಿ ಹೋಗಲಿ! ರುಕ್ಕುವು ಸಂಕಷ್ಟದಲ್ಲಿರುವಳು! ಅವಳ ಸರ್ವಸ್ವವಾದ ಅವಳ ಪತಿಯು ಈಗ ಅವಳ ಕೈಯನ್ನು ಬಿಟ್ಟು ಹೋಗಿರುವನು! ಅವಳು ಈಗ ಅನಾಥೆ ಯಾಗಿರುವಳು! ಮರಣದ ಎದುರಿಗೆ ಆ ಹಾಳು ಪ್ರತಿಜ್ಞೆಯೇ? ರುಕ್ಕುವು ಸಂಕಷ್ಟದ ಸಮಯದಲ್ಲಿ ತನ್ನನ್ನು ಮರೆಯಲಿಲ್ಲ! ತನ್ನ ಪ್ರತಿಜ್ಞೆಯನ್ನು

ಭಂಗಮಾಡಿಕೊಂಡಳು! ಕಮಲೆಯನ್ನು ಕೂಡಲೇ ತಾನಿದ್ದೆಡೆಗೆ ಕಳು ಹಿಸಿದಳು! ತಾನು ಈಗ ಹೇಡಿಯಾಗಬಹುದೇ? ಇದೇ ರೀತಿಯಲ್ಲಿ ನಾಯಕನು ಆಲೋಚಿಸತೊಡಗಿದನು.

ಹೊರಗಿನ ಗಲಾಟೆಯು ಇನ್ನೂ ನಿಂತಿರಲಿಲ್ಲ. ಕಮಲೆಯು ಅದನ್ನು ಕೇಳಿ ಸ್ವಲ್ಪ ಬೆದರಿದಳು. 'ಮಾವಯ್ಯ, ಹೊರಗೆ ಕೂಡಿದ ಜನರು ಯಾರು?' ಎಂದು ಕೇಳಿದಳು.

'ಬೇಡುವವರು.'

'ಇವತ್ತು ಶನಿವಾರ ಅಲ್ಲವಲ್ಲ?'

'ಅವರಿಗೆ ಎಲ್ಲಾ ದಿನಗಳೂ ಶನಿವಾರ ದಿನಗಳೇ.'

'ಅದೇನು ಮಾವಯ್ಯ, ಅವರು ಬಹಳ ಬಡವರೇ? ಪಾಪ ಮಕ್ಕಳು ಹೇಗೆ ಅಳುತ್ತವೆ! ಹೊಟ್ಟೆ ಹಸಿವೆಯಾಗಿದೆಯೋ ಏನೋ..'

ನಾಯಕನು ತನ್ನ ತುಟಿಗಳನ್ನು ಕಚ್ಚಿಕೊಂಡನು. ಕಮಲೆಯು ತನ್ನ ಕೈಯಲ್ಲಿದ್ದ ಪುಸ್ತಕದ ಹಾಳೆಗಳನ್ನು ಮಗುಚಿದಳು.

'ಮಾವಯ್ಯ—'

'ಏನು, ಮಗು?'

'ನೀವು ನನಗೆ ಕಲಿಸುವಿರಲ್ಲವೇ? ನನಗೆ ಕಲಿಯಬೇಕೆಂದು ಬಹಳ ಆಸೆಯಿದೆ.'

'ಅಗತ್ಯವಾಗಿಯೂ ಕಲಿಸುವೆನು, ಮಗು.'

'ಈಗಲೇ ಕಲಿಸುವಿರೋ? ಇದೋ, ನೋಡಿ, ನನಗೆ ಅಮ್ಮ ಇಲ್ಲಿಯ ವರೆಗೆ ಕಲಿಸಿದ್ದಾರೆ—'

'ಈಗ ಬೇಡ, ಮಗೂ, ಮತ್ತೆ ನೋಡೋಣ.'

'ಮಾವಯ್ಯ, ಇಲ್ಲಿ ನೋಡಿ. ಗಾಡಿಯ ಚಿತ್ರ.. ನಾನು ಇಂದು ಬಿಳೇ ಕುದುರೆಯ ಗಾಡಿಯಲ್ಲಿ ಬಂದಿದ್ದೆನು. ಬಿಳೇ ಕುದುರೆ ಬಹಳ ಚಂದವಲ್ಲವೇ?'

'ಹೌದು, ಮಗು.'

'ಅಪ್ಪ..ಅಪ್ಪ.. ನನ್ನನ್ನು ಯಾವಾಗಲೂ ಬಿಳೇ ಕುದುರೆಯ ಗಾಡಿಯಲ್ಲೇ ಕುಳ್ಳಿರಿಸುತ್ತಿದ್ದರು...... ಮಾವಯ್ಯ—'

'ಏನು, ಮಗು?'

'ನಾನಿನ್ನು ಎಂದಾದರೂ ಅಪ್ಪನನ್ನು ನೋಡಲಾರೆನೇ?'

ನಾಯಕನಿಗೆ ಉತ್ತರ ಕೊಡಲಿಕ್ಕೆ ಮಾತು ಬರಲಿಲ್ಲ.

ಹೊರಗೆ ಜನರ ಗುಜುಗುಜು ಇನ್ನೂ ನಿಂತಿರಲಿಲ್ಲ.

'ಕಮಲೇ—'

'ಏನು, ಮಾವಯ್ಯ?'

'ನಿನಗೆ ತಮ್ಮನಾಗಲಿ, ತಂಗಿಯಾಗಲಿ ಇಲ್ಲವೇ?'

'ಇಲ್ಲ, ಮಾವಯ್ಯ. ಮನೆಯಲ್ಲಿ ನಾನೊಬ್ಬಳೇ. ನನಗೊಬ್ಬ ತಮ್ಮನಿರಬೇಕೆಂದು ಬಹಳ ಆಸೆಯಾಗುತ್ತದೆ.. ನಮ್ಮ ನೆರೆಮನೆಯ ಕಾವೇರಿಗೆ ತಮ್ಮನಿರುವನು. ನನಗೆ ಮಾತ್ರ ತಮ್ಮನಿಲ್ಲ. ನನಗೂ ಒಬ್ಬ ತಮ್ಮನಾಗಲಿಕ್ಕಿಲ್ಲವೇ?'

ನಾಯಕನ ಕಣ್ಣುಗಳಲ್ಲಿ ನೀರು ತುಂಬಿತು. ಆದರೆ ಕಮಲೆಗೆ ತೋರಿಸಿಕೊಳ್ಳಲಿಲ್ಲ.

'ಮಾವಯ್ಯ, ಅಮ್ಮನನ್ನೂ ನಾನು ಇನ್ನು ನೋಡಲಾರೆನೇ?'

'ಹಾಗೇಕೆ ಕೇಳುತ್ತೀ, ಮಗು? ನಿನ್ನಮ್ಮನನ್ನು ನೀನು ಇನ್ನು ಯಾವಾಗಲೂ ನೋಡುವಿ.'

'ಏನು, ನನ್ನನ್ನು ಕಾಸರಗೋಡಿಗೆ ಕಳುಹಿಸುವಿರೇ?'

'ಇಲ್ಲ, ಮಗು. ನಿನ್ನಮ್ಮನನ್ನು ನೀನು ಇಲ್ಲೇ ಯಾವಾಗಲೂ ನೋಡುವಿ.'

'ನಿಜವೇ, ಮಾವಯ್ಯ?'

'ನಿಜವಾಗಿಯೂ, ಮಗು.'

ಸಂತೋಷದಿಂದ ಆ ಬಾಲಿಕೆಯು ಒಂದು ಕ್ಷಣಕ್ಕೆ ಮೈಮರೆತಳು. ಆದರೆ ಕೂಡಲೇ ಅವಳ ಕೋಮಲವಾದ ಮುಖದಲ್ಲಿ ಸಂಶಯದ ಒಂದು ಮೋಡವು ಕವಿಯಿತು.

'ನಾನು ನಂಬುವುದಿಲ್ಲ, ಮಾವಯ್ಯ.'

ನಾಯಕನು ಆಶ್ಚರ್ಯದಿಂದ ಯಾಕೆಂದು ಕೇಳಿದನು.

ಹೊರಗಿನಿಂದ ಜನರ ಗಲಾಟೆಯೂ ಇನ್ನೂ ಕೇಳಬರುತಿತ್ತು.

'ಅಮ್ಮ ಆಡಿದ ಮಾತನ್ನು ತಪ್ಪುವುದಿಲ್ಲ.... ನನ್ನನ್ನು ಇಲ್ಲಿ ಕಳುಹಿಸುವಾಗ್ಗೆ ನನ್ನನ್ನು ಇನ್ನು ನೋಡಲಾರಳೆಂದು ಹೇಳಿದ್ದರು.. ಮಾವಯ್ಯ, ನನಗೆ ಅಳು ಬರುತ್ತದೆ..ನಾನು ಈಗಲಾದರೂ ಅಳಲೇ?..'

ಇದನ್ನು ಕೇಳಿ ನಾಯಕನು ದಿಗಿಲುಬಿದ್ದನು. ಒಂದು ಘೋರವಾದ ಸಂಶಯವು ಅವನ ಮನಸ್ಸಿಗೆ ಹತ್ತಿತು. ಅವನ ದೇಹವು ಕಂಪಿಸಲಿಕ್ಕೆ ಪ್ರಾರಂಭಿಸಿತು. ತನ್ನ ಲೆಕ್ಕಾಚಾರದ ಪುಸ್ತಕದೊಂದರ ಖಾಲಿ ಕಾಗದ ವೊಂದನ್ನು ಹರಿದು ಅದರಲ್ಲಿ ತವಕದಿಂದ ಅಲುಗಾಡುತ್ತಿರುವ ತನ್ನ ಬೆರಳುಗಳಿಂದ ಏನೋ ಗೀಚಿದನು. ಕೂಡಲೇ ತನ್ನ ಆಳನ್ನು ಕರೆದು ಅವನೊಡನೆ ಆ ಕಾಗದವನ್ನೂ ಒಂದು ಐದು ರೂಪಾಯಿಯ ನೋಟನ್ನೂ ಕೊಟ್ಟು ಆ ಕ್ಷಣವೇ ಅವನನ್ನು ತಂತೀ ಆಫೀಸಿಗೆ ಕಳುಹಿಸಿದನು.

ತನ್ನ ತಂತಿಗೆ ಜವಾಬು ಬರುವವರೆಗೆ ತಾನು ಊಟ ಮಾಡುವು ದಿಲ್ಲವೆಂದು ಒಳಗೆ ಹೇಳಿ ಕಳುಹಿಸಿದನು.

'ಕಮಲೆ—'

'ಏನು, ಮಾವಯ್ಯ?'

'ನಿನಗೆ ಪುಣ್ಯವಿದ್ದರೆ..ಪುಣ್ಯವಿದ್ದರೆ....' ನಾಯಕನಿಗೆ ಮಾತು ಮುಂದರಿಸಲಿಕ್ಕಾಗಲಿಲ್ಲ.

ಹೊರಗಿನಿಂದ ಜನರ ಗಲಾಟೆಯೂ ಇನ್ನೂ ಕೇಳ ಬರುತ್ತಿತ್ತು.

* * * *

ಎರಡು ತಾಸುಗಳು ಕಳೆದವು. ನಾಯಕನು ಈ ಎರಡು ತಾಸುಗಳ ವರೆಗೂ ಕುರ್ಚಿಯಲ್ಲಿ ಕದಲದೆ ಕುಳಿತಿದ್ದನು. ಪ್ರತಿ ಒಂದು ಕ್ಷಣ ಬಾಗಿಲಿನ ಕಡೆಗೆ ತವಕದಿಂದ ನೋಡುತ್ತಿದ್ದನು. ಕಮಲೆಯೂ ನೆಲದ ಮೇಲೆ ಕುಳಿತುಕೊಂಡು ಗಿಳಿಯಂತೆ ಮಾತಾಡುತ್ತಿದ್ದಳು. ಅವಳ ನಿರ್ಮಲ ವಾದ ಮಾತುಗಳು ಅವನ ಹೃದಯದಲ್ಲಿ ಉರಿಯುತ್ತಿರುವ ಜ್ವಾಲೆಯನ್ನು ಸ್ವಲ್ಪಮಟ್ಟಿಗಾದರೂ ತಣ್ಣಗೆ ಮಾಡುತ್ತಿದ್ದುವು. ಕಟ್ಟಕಡೆಗೆ ಅವರಿದ್ದ ಕೊಠಡಿಯ ಬಾಗಿಲು ತೆರೆಯಿತು. ತಂತೀ ಜವಾನನು ಬಾಗಿಲ ಬಳಿಯಲ್ಲಿ

ನಿಂತನು. ಸರ್ವೋತ್ತಮನಾಯಕನು ಕೂಡಲೇ ಅವನಿದ್ದಲ್ಲಿಗೆ ಹೋಗಿ ಅವನು ಹಿಡಿದಿದ್ದ ಲಕೋಟೆಯನ್ನು ಅವನ ಕೈಯಿಂದ ಎಳೆದುಕೊಂಡನು. ಅವನು ತೋರಿಸಿದ್ದ ಒಂದು ಕಾಗದದ ಚೂರಿನ ಎಡೆಯಲ್ಲಿಯೂ ತನ್ನ ದಸ್ಕತನ್ನು ಗೀಚಿದನು. ಉತ್ಸುಕತೆಯಿಂದ ಅಲುಗಾಡುತ್ತಿರುವ ಬೆರಳು ಗಳಿಂದ ಲಕ್ಕೋಟೆಯನ್ನು ಹರಿದು ತನ್ನ ತಂತಿಗೆ ಬಂದ ಜವಾಬನ್ನು ಓದಿ ನೋಡಿದನು....

ನಾಯಕನಿಗೆ ತಲೆಗೆ ಸಿಡಿಲು ಬಡಿದಂತಾಯಿತು. ಎಲ್ಲವೂ ಅಂಧ ಕಾರಮಯವಾಯಿತು. 'ಕಮಲೆ..ಕಮಲೆ' ಎಂದು ಕರೆದನು. ಕಮ ಲೆಯು ಅವನ ಹತ್ತಿರ ಓಡಿ ಹೋದಳು. ಅವನು ಅವಳನ್ನು ಬಿಗಿದಾಗಿ ಅಪ್ಪಿಕೊಂಡನು. 'ನಾನು ಪಾಪಿಷ್ಠನು! ನನ್ನಷ್ಟು ಪಾಪಿಷ್ಠನು ಈ ಲೋಕದಲ್ಲಿ ಬೇರೆ ಯಾರೂ ಇಲ್ಲ!' ಎಂದು ತನ್ನ ಹಣೆಯನ್ನು ಬಡಿದು ಕೊಳ್ಳಲಾರಂಭಿಸಿದನು. ತನ್ನ ಎರಡೂ ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡು ಮಕ್ಕಳಂತೆ ಅತ್ತನು. ತನ್ನ ಮಾವನ ಅವಸ್ಥೆಯನ್ನು ನೋಡಿ ಕಮಲೆಯ ಕಣ್ಣುಗಳಲ್ಲಿಯೂ ನೀರು ತುಂಬಿತು. ಆದರೂ ಅವನನ್ನು ಸಂತೈಸಲಿಕ್ಕೆ ಪ್ರಯತ್ನಿಸಿದಳು.

'ಮಾವಯ್ಯ! ದೊಡ್ಡವರು ಅಳುವುದಿಲ್ಲವಲ್ಲವೇ?'

'ಇಲ್ಲ, ಮಗೂ. ದೊಡ್ಡವರು ಅಳುವುದಿಲ್ಲ. ಆದರೆ ನಾನು ಅಳು ವಂತೆ ಮಾಡಿಕೊಂಡಿದ್ದೇನೆ....ನಾನೊಬ್ಬ ಪಾಪಿಷ್ಠನು, ಮಗು ಒಂದು ನರಪಿಶಾಚಿಯು....'

'ಮಾವಯ್ಯ, ಅಮ್ಮ, ಇಲ್ಲಿ ಬರುವುದಿಲ್ಲವೇ?'

'ಇಲ್ಲ, ಮಗು....'

'ಎಂದಾದರೂ ಬರಲಿಕ್ಕಿಲ್ಲವೇ?'

'ಇಲ್ಲ, ಮಗು. ಅವಳು ನಿನ್ನ ಅಪ್ಪನ ಹಿಂದೆಯೇ ಹೋಗಿರುವಳು—'

'ಮಾವಯ್ಯ..ಮಾವಯ್ಯ..ನನ್ನನ್ನೂ ಕರಕೊಂಡು ಹೋಗ ಬಹುದಿತ್ತಲ್ಲವೇ?..ಅಮ್ಮ!..ಅಪ್ಪ!....'

ಆ ಬಾಲೆಯು ಶೋಕಿಸುವುದನ್ನು ನೋಡಿ ನಾಯಕನ ಎದೆಗೆ ಶೂಲವನ್ನು ಹಾಕಿದಂತಾಯಿತು. ತಾನು ಪಡುವ ದುಃಖವನ್ನು ಬಿಗಿದಾಗಿ

ಮಾಡಿಕೊಂಡು ಅವಳ ತಲೆಯನ್ನು ತನ್ನ ಎರಡು ಕೈಗಳಲ್ಲಿ ಹಿಡಿದು ಕೊಂಡನು. ಅವಳ ವಿಶಾಲವಾದ ಕಣ್ಣುಗಳಲ್ಲೇ ನೋಡುತ್ತಾ ಅವಳ ಹಣೆಗೆ ಮುದ್ದಿಟ್ಟನು. ಅನೇಕ ವಿಧದಿಂದ ಅವಳನ್ನು ಸಂತೈಸಿದನು.

'ಮಾವಯ್ಯ, ನಾನು ಅಳುವನ್ನು ಇನ್ನೆಷ್ಟು ಹೊತ್ತು ತಡೆದು ಕೊಳ್ಳಲಿ? ಆಗುವುದಿಲ್ಲ, ಮಾವಯ್ಯ, ನಾನು ಅಳುವೆನು . . ಈಗಲಾದರೂ ಅಳುವೆನು . . . .'

ಹೊರಗಿನಿಂದ ಜನರ ಗಲಾಟೆಯು ಇನ್ನೂ ಕೇಳಬರುತ್ತಿತ್ತು.

ಅದನ್ನು ಕೇಳಿದ ಕೂಡಲೇ ನಾಯಕನ ಮುಖದಲ್ಲಿ ನೂತನವಾದ ಪ್ರಕಾಶವೊಂದು ಹೊಳೆಯಲಾರಂಭಿಸಿತು. ಕಮಲೆಯನ್ನು ಬಿಗಿದಾಗಿ ಅಪ್ಪಿಕೊಂಡು ಅವಳ ಕಣ್ಣುಗಳಲ್ಲಿ ಪುನಃ ನೋಡಿದನು.

'ಮಗೂ, ಕಮಲೇ—'

'ಏನು ಮಾವಯ್ಯ?'

'ನೀನು ಬೇಕಾದಷ್ಟು ಅಳಬಹುದು. ಆದರೆ ಈಗ ಬೇಡ. ನನ್ನ ದೊಂದು ಚಿಕ್ಕ ಕೆಲಸವನ್ನು ಮಾಡುವಿಯಾ? ಆ ಮೇಲೆ ಅಳಬಹುದು . .'

'ಯಾವ ಕೆಲಸ, ಮಾವಯ್ಯ?'

'ಹೊರಗೆ ನೂರಾರು ಜನರಿದ್ದಾರಲ್ಲವೇ?'

'ಹೌದು, ಮಾವಯ್ಯ, ಅವರು ಇನ್ನೂ ಹೋಗಲಿಲ್ಲ.'

'ಅವರ ಮುಂದೆ ಹೋಗಿ ನಿಲ್ಲಲಿಕ್ಕೆ ನಿನಗೆ ಹೆದರಿಕೆಯಾದೀತೇ?'

'ಇಲ್ಲ, ಮಾವಯ್ಯ. ಹೆದರಿಕೆ ಏನು?'

'ನಾನೀಗ ನಿನ್ನ ಹತ್ತಿರ ಹೇಳುವಂಥಾದ್ದನ್ನು ನೀನು ಅವರ ಮುಂದೆ ಹೇಳುವಿಯಾ?'

'ಅಡ್ಡಿಯೇನು, ಮಾವಯ್ಯ? ಏನೆಂದು ಹೇಳಬೇಕು?'

'ಮಗೂ, ಅವರಿದ್ದಲ್ಲಿಗೆ ಹೋಗಿ ನಾನು ನಾಳೆ ಬೆಳಗ್ಗಿನಿಂದ ನನ್ನ ಹತ್ತಿರ ಇದ್ದ ಅಕ್ಕಿಯನ್ನೆಲ್ಲ ಮುಡಿ ಒಂದಕ್ಕೆ ಐದು ರೂಪಾಯಿಯಂತೆ ಮಾರುತ್ತೇನೆಂದು ಹೇಳಿ ಬಾ. . . . ಹೋಗು, ಮಗು.'

ಕಮಲೆಯು ತನ್ನ ಮುಖವನ್ನು ಒರಸಿಕೊಂಡು ಹೊರಗೆ ಹೋದಳು. ಆ ನೂರಾರು ಮಂದಿ ಜನರ ಮುಂದೆ ಜಗಲಿಯ ಮೇಲೆ ನಿಂತುಕೊಂಡಳು.



"ನನ್ನ ಸೋದರರಾದ ಸರ್ವೋತ್ತಮ ನಾಯಕರು ನನ್ನನ್ನು ನಿಮ್ಮ ಹತ್ತಿರ ಕಳುಹಿಸಿದ್ದಾರೆ."

ಅವರೆಲ್ಲರನ್ನು ಒಂದು ಬಾರಿ ನೋಡಿದಳು. ಅವರೆಲ್ಲರೂ ತಾವು ಮಾಡು ತ್ತಿರುವ ಗದ್ದಲವನ್ನು ಕೂಡಲೇ ನಿಲ್ಲಿಸಿ ಆ ಕೋಮಲವಾದ ಬಾಲಿಕೆ ಯನ್ನು ನೋಡಲಾರಂಭಿಸಿದರು.

'ನನ್ನ ಸೋದರಮಾವ ಸರ್ವೋತ್ತಮನಾಯಕರು ನನ್ನನ್ನು ನಿಮ್ಮ ಹತ್ತಿರ ಕಳುಹಿಸಿದ್ದಾರೆ' ಎಂದು ಕಮಲೆಯು ಸ್ವಲ್ಪವಾದರೂ ಭೀತಿಯಿಲ್ಲದೆ ಪ್ರಾರಂಭಿಸಿದಳು. ಅವರೆಲ್ಲರೂ ತಮ್ಮ ತಮ್ಮ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಅವಳು ಹೇಳಬಹುದಾದ ಮಾತುಗಳನ್ನು ಕೇಳ ಲಿಕ್ಕೆ ತವಕಗೊಂಡರು.

ಕಮಲೆಯು ತನ್ನ ಮುಂದೆಯೇ ನೋಡುತ್ತಾ ತನ್ನ ಮೃದುವಾದ ಸ್ವರದಿಂದ ಮೆಲ್ಲಗೆ ಹೇಳಿದಳು:— 'ನನ್ನ ಮಾವ ಸರ್ವೋತ್ತಮ ನಾಯಕರು ನಾಳೆ ಬೆಳಗ್ಗಿನಿಂದ ತಮ್ಮ ಹತ್ತಿರವಿದ್ದ ಅಕ್ಕಿಯನ್ನೆಲ್ಲಾ ಮುಡಿ ಒಂದಕ್ಕೆ ಐದು ರೂಪಾಯಿಯಂತೆ ಮಾರುತ್ತಾರೆ. ಇದನ್ನು ನಿಮಗೆ ತಿಳಿಸಲಿಕ್ಕೆ ನನ್ನನ್ನು ನಿಮ್ಮ ಹತ್ತಿರ ಕಳುಹಿಸಿದ್ದಾರೆ. . . ಇನ್ನು ನೀವೆಲ್ಲರೂ ಹೋಗುವಿರೇನು?'

ಇದನ್ನು ಕೇಳುತ್ತಲೇ ಆ ಬಡಜನರ ಸಂತೋಷಕ್ಕೆ ಪಾರವೇ ಇಲ್ಲ ದಂತಾಯಿತು. ಸರ್ವೋತ್ತಮನಾಯಕರನ್ನು ತುಂಬಾ ಹೊಗಳಲಿಕ್ಕೆ ಪ್ರಾರಂಭಿಸಿದರು. ಆ ಬಾಲಿಕೆಯನ್ನು ತುಂಬಾ ಹರಸಿದರು. ಇಬ್ಬರು ಮುದುಕರು ಮುಂದಕ್ಕೆ ಬಂದು ಕಮಲೆಯ ತಲೆಯ ಮೇಲೆ ತಮ್ಮ ಕೈಗಳನ್ನಿಟ್ಟು, 'ದೇವರು ನಿನಗೆ ಒಳ್ಳೇದು ಮಾಡಲಿ!' ಎಂದರು. ಇದ ನ್ನೆಲ್ಲ ನೋಡಿ ಕಮಲೆಯ ಕಣ್ಣುಗಳಿಗೆ ನೀರು ಬಂತು. ಅವಳು ಕೂಡಲೇ ತನ್ನ ಸೋದರಮಾವನಿದ್ದಲ್ಲಿಗೆ ಓಡಿಹೋದಳು. ನಾಯಕನು ಹೊರಗೆ ಆಗುತಿದ್ದುದನ್ನೆಲ್ಲ ನೋಡುತ್ತಲೂ, ಕೇಳುತ್ತಲೂ ನಿಂತುಕೊಂಡಿದ್ದನು. ಕಮಲೆಯು ತನ್ನ ಹತ್ತಿರ ಬಂದಾಕ್ಷಣ ಅವಳನ್ನು ಬಿಗಿಯಾಗಿ ಅಪ್ಪಿ ಕೊಂಡನು. ಅವಳಲ್ಲಿ ಅಳುವು ಉಕ್ಕಿ ಉಕ್ಕಿ ಬರಲಾರಂಭಿಸಿತು.

'ಮಾವಯ್ಯ. . . ನಾನೀಗಲಾದರೂ. . . . ಅಳಲೇ? ನನಗೆ ಒಹಳ ವಾಗಿ. . ಅಳು. . ಬರುತ್ತದೆ. .'

'ಈಗ ಬೇಕಾದಷ್ಟು ಅಳು, ಮಗು!' ಎಂದು ನಾಯಕನು ಅವಳ ಕೋಮಲವಾದ ತಲೆಯನ್ನು ತನ್ನ ಹೃದಯಕ್ಕೆ ಒತ್ತಿಕೊಂಡು ನೋಡುವವರ ಹೃದಯವು ಕರಗಿ ನೀರಾಗಿ ಹೋಗುವಂತೆ ಅವಳೊಂದಿಗೆ ತಾನೂ ಧಾರಾಳವಾಗಿ ಅತ್ತನು . . .

ನಾಗಣ್ಣನು ಕಥೆಯನ್ನು ಹೇಳುವುದನ್ನು ನಿಲ್ಲಿಸಿದನು. ಕೇಸರಿಯು ಮಾತೆತ್ತದೆ ಅಲ್ಲಿಂದೆದ್ದು ತನ್ನ ಕೊಠಡಿಗೆ ನೆಟ್ಟಗೆ ಹೋದಳು. ನಾನೂ ಅವಳನ್ನು ಹಿಂಬಾಲಿಸಿ ಹೋದೆನು. ಅವಳ ಕಣ್ಣುಗಳು ನೀರಿನಿಂದ ತುಂಬಿ ಕೆಂಪಾಗಿದ್ದುವು. 'ನನಗೆ ಒಂದು ಕ್ಷಣಕ್ಕೆ ಇಲ್ಲಿ ಒಂಟಿಯಾಗಿ ಕೂತು ಕೊಳ್ಳಬೇಕು' ಎಂದಳು. ನನಗೆ ಅರ್ಥವಾಯಿತು. ನಾನು ಕೂಡಲೇ ಹೊರಗೆ ಹೋದೆನು. ಆದರೆ ನಾಗಣ್ಣನು ಅಲ್ಲಿರಲಿಲ್ಲ. ಅವನು ಅಷ್ಟ ರೊಳಗೆ ಪಲಾಯನ ಮಾಡಿಬಿಟ್ಟಿದ್ದನು.



## ರಮೇಶ ∽ ∽ ∽ ∽ ∽

ರಮೇಶನು ತನ್ನ ಕೈಯಲ್ಲಿದ್ದ ಕಾಗದವನ್ನು ಮೂರನೆಯ ಸಾರಿ ಓದಿದನು. ಮೊದಲನೆಯ ಸಾರಿ ಆ ಕಾಗದವನ್ನು ಓದಿದಾಗ ತಾನು ಸ್ವಪ್ನದಲ್ಲಿದ್ದಿರಬಹುದೆಂದು ಅವನು ತಿಳಿದುಕೊಂಡಿದ್ದನು. ಆದುದರಿಂದ ಅವನು ಅದನ್ನು ಎರಡನೆಯ ಸಾರಿ ಓದಿದನು. ಆದರೂ ಆ ಕಾಗದದಲ್ಲಿ ಬರೆದಿದ್ದ ಶಬ್ದಗಳು ಯಾವ ಬದಲಾವಣೆಯನ್ನಾದರೂ ಪಡೆಯದೆ ಹೋದುವು. ಇದನ್ನು ದೃಢಪಡಿಸುವುದಕ್ಕೋಸ್ಕರವೇ ಅವನು ಮೂರನೆಯ ಬಾರಿ ಆ ಕಾಗದವನ್ನು ಅತಿ ಜಾಗರೂಕತೆಯಿಂದ ಓದುತ್ತಿದ್ದನು. ಅದನ್ನು ಓದುವಾಗಲೆಲ್ಲಾ ಅವನ ಕೈಬೆರಳುಗಳು ಉತ್ಸುಕತೆಯಿಂದ ಅಲುಗಾಡುತ್ತಿದ್ದುವು. ಅವನ ಹೃದಯದಲ್ಲಿ ರಕ್ತವು ಬಹಳ ರಭಸದಿಂದ ಹರಿಯಲಾರಂಭಿಸಿತು. ಆಶ್ಚರ್ಯವಲ್ಲ! ಏಕೆಂದರೆ, ಚಿರಕಾಲವೂ ಒಂದೇ ಬಗೆಯ ಅಚ್ಚುಪಡಿಯಂತಿರುವ ಹೋಟೇಲಿನ ಊಟವನ್ನು ಅಂದು ಅವನು ೧೧ ಗಂಟೆಗೆ ಉಂಡು, ತನ್ನ ಬಾಡಿಗೆಯ ಕೋಣೆಯೊಳಗೆ ಸೇರಿದೊಡನೆಯೇ, ಟಪ್ಪಾಲು ಪೇದೆಯು ಅವನ ಕೈಯಲ್ಲಿ ಕೊಟ್ಟ ಆ ಕಾಗದದಲ್ಲಿ ಈ ರೀತಿಯಾಗಿ ಬರೆದಿತ್ತು:—

ಎಸ್. ಶ್ಯಾಮಸುಂದರರಾವ್, ಮಂಗಳೂರು,

ಹೈಕೋರ್ಟ ವಕೀಲ್. ತಾ. ೧೩ನೇ ಫೇಬ್ರುವರಿ ೧೯೧೮

ಪ್ರಿಯರೇ,

ನಿಮ್ಮ ದೊಡ್ಡ ತಂದೆಯವರಾದ ಮ. ರಾ. ರಾ. ಮೂಡುಬೈಲ್ ರಾಮರಾಯರು ಮುಂಬಯಿಯಲ್ಲಿ ನಿನ್ನೆ ಬೆಳಿಗ್ಗೆ ಫಕ್ಕನೇ ತೀರಿಹೋದ ಸಮಾಚಾರವು ನಿಮಗೆ ಇಷ್ಟರೊಳಗೆ ತಿಳಿದಿರಲಿಕ್ಕೆ ಸಾಕು. ಆದರೆ ಅವರು ತಮ್ಮ ಜೀವಮಾನದಲ್ಲಿ ಗಳಿಸಿದ ರೂ. ೫೦,೦೦೦ವನ್ನೆಲ್ಲಾ

ನಿಮ್ಮ ಹೆಸರಿನಲ್ಲಿ ವಿಲ್ಲು ಮಾಡಿದ್ದಾರೆಂಬ ಸಂಗತಿಯಾದರೂ ನಿಮಗೆ ತಿಳಿದಿರಲಿಕ್ಕಿಲ್ಲವೆಂದು ನಂಬುತ್ತೇನೆ. ಈ ವಿಲಿನ ಪ್ರಕಾರ ಕೀರ್ತಿಶೇಷ ರಾದವರ ಹಣದ ವಿಲೇವಾರಿಯನ್ನು ಮಾಡಲಿಕ್ಕೆ ನೀವು ಈ ಕಾಗದ ವನ್ನು ಕಂಡಕೂಡಲೇ ಇಲ್ಲಿಗೆ ಹೊರಟು ಬರಬೇಕೆಂದು ಈ ಮೂಲಕ ಸೂಚಿಸುತ್ತೇನೆ.

ಇತಿ ತಮ್ಮ ವಿಧೇಯ,
ಎಮ್. ಶ್ಯಾಮಸುಂದರರಾವ್.

ಉ—ಪುರದ ತಾಲೂಕು ಕಚೇರಿ ಗುಮಾಸ್ತರಾದ :—

ಮ. ರಾ. ರಾ. ಮೂಡುಬೈಲ್ ರಮೇಶರಾಯರಿಗೆ.

ಐವತ್ತು ಸಾವಿರ ರೂಪಾಯಿ! ಸಾಧಾರಣ ಆರು ತಿಂಗಳಿಂದೀಚೆಗೆ ಪ್ರತಿದಿನವೂ—ರಜಾದಿನಗಳೆಂದು ಕೂಡ ಲೆಕ್ಕಿಸದೆ ಬೆಳಿಗ್ಗೆ ೭॥ ಗಂಟೆ ಯಿಂದ ರಾತ್ರಿ ೯ ಗಂಟೆಯ ವರೆಗೆ ಆ ಹೊಲಸು ತಾಲೂಕು ಕಚೇರಿ ಯಲ್ಲಿ ಕೆಲಸ ಮಾಡಿ ತಿಂಗಳಿಗೆ ಬರೇ ರೂ. ೨೫ನ್ನು ಗಳಿಸುತ್ತಿದ್ದ ರಮೇ ಶನ ತಲೆಯು ತಿರುಗಿತು. ಐವತ್ತು ಸಾವಿರ ರೂಪಾಯಿ! ರಮೇಶನು ಲೋಕದಲ್ಲಿ ಜೀವಿಸುತ್ತಿದ್ದನೋ ಇಲ್ಲವೋ ಎಂಬ ಸಂಗತಿಯನ್ನು ಕೂಡ ಅರಿತುಕೊಳ್ಳಲಿಕ್ಕೆ ಇಷ್ಟಪಡದ ಅವನ ದೊಡ್ಡ ತಂದೆಯು ಈಗ ಅವನ ಧನ ವನ್ನೆಲ್ಲಾ ನಿಜವಾಗಿಯೂ ರಮೇಶನಿಗೆ ಬಿಟ್ಟುಕೊಟ್ಟಿದ್ದನೇ? ರಮೇಶನು ಕನಸಿನಲ್ಲಿಯೂ ಕೂಡ ಇಂತಹ ಭಾಗ್ಯಪ್ರಾಪ್ತಿಯನ್ನು ಯೋಚಿಸಲಾರ ದಿದ್ದನು.

ಅನೇಕ ವರ್ಷಗಳ ಹಿಂದೆ—ರಮೇಶನು ತೀರಾ ಚಿಕ್ಕವನಾಗಿ ದ್ದಾಗ—ರಮೇಶನ ಗರೀಬನಾದ ತಂದೆಯೂ, ದೊಡ್ಡಸ್ತಿಕೆಯುಲ್ಲಿದ್ದ ಅವನ ದೊಡ್ಡ ತಂದೆಯೂ ಯಾವುದೋ ಒಂದು ಕಾರಣಾಂತರದಿಂದ ಜಗಳವಾಡಿ ಒಬ್ಬನ ಮುಖವನ್ನು ಇನ್ನೊಬ್ಬನು ನೋಡುವುದನ್ನು ಕೂಡ ಬಿಟ್ಟಿದ್ದರು. ಆ ಮೇಲೆ ಕೆಲವು ತಿಂಗಳುಗಳಲ್ಲಿಯೇ ರಮೇಶನ ತಂದೆಯು ಪ್ರಾಣಾಂತಿಕಾವಸ್ಥೆಯಲ್ಲಿದ್ದಾಗ — ರಮೇಶನ ತಾಯಿ ಮೊದಲೇ ತೀರಿಹೋಗಿದ್ದಳು — ಅವನು ತನ್ನ ಸಹೋದರನನ್ನು ರಮೇಶನ

ಲಾಲನೆಪಾಲನೆಗಾಗಿ ಎಷ್ಟು ಬೇಡಿಕೊಂಡಿದ್ದರೂ ಆ ಕಲ್ಲೆದೆಯುಳ್ಳ ಪುಣ್ಯಾತ್ಮನು ತನ್ನ ಐಶ್ವರ್ಯದ ಮದದಿಂದ ಅದಕ್ಕೆ ಒಪ್ಪದೆ ಇರಲಾಗಿ, ರಮೇಶನಿಗೂ ಅವನ ದೊಡ್ಡ ತಂದೆಗೂ ಇದ್ದ ಋಣಾನುಬಂಧವು ಅಂದೆಯೇ ಕಡಿದುಬಿಡಲ್ಪಟ್ಟಂತಾಯಿತು. ಆ ಮೇಲೆ ರಮೇಶನು ಹೇಗಾದರೂ ಮಾಡಿ ಅನೇಕ ಕಷ್ಟಪರಂಪರೆಗಳಲ್ಲೇ ಬೆಳೆದು, ಕೆಲವರು ಉದಾರ ಮನಸ್ಸಿನವರು ಅವನ ಮೇಲೆ ಕರುಣೆಯಿಂದ ಚಾಚಿದ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡು, ಸ್ಕೂಲ್ ಫೈನಲ್ ಪರೀಕ್ಷೆಯ ವರೆಗೆ ಚುರುಕುತನದಿಂದ ಕಲಿತುಕೊಂಡು ಆ ಪರೀಕ್ಷೆಯಲ್ಲಿ ಉಚ್ಚರೀತಿಯಿಂದ ತೇರ್ಗಡೆ ಹೊಂದಿದವನಾಗಿ ಈಗ್ಗೆ ಸುಮಾರು ಆರು ತಿಂಗಳುಗಳಿಂದ ಉದಕಪುರದ ತಾಲೂಕು ಕಚೇರಿಯಲ್ಲಿ ರೂ. ೨೫ರ ಒಂದು ಗುಮಾಸ್ತಿಕೆಯನ್ನು ನೋಡಿಕೊಂಡು, ಒಬ್ಬಂಟಿಗನಾದ ತನ್ನ ಉದರ ಪೋಷಣೆಯನ್ನು ಹೇಗಾದರೂ ಸಾಗಿಸಿಕೊಳ್ಳುತ್ತಿದ್ದನು.

ಇದಕ್ಕೆ ಪೂರ್ವದಲ್ಲಿ ರಮೇಶನ ಕೈಯಲ್ಲಿ ಒಮ್ಮೊಮ್ಮೆ ಒಂದು ಕಾಸು ಕೂಡ ಇಲ್ಲದೆ ಅನೇಕಸಾರಿ ಉಪವಾಸ ಮಾಡುವಲ್ಲಿಗೆ ಕೂಡ ಬಂದಿದ್ದಾಗ ಅವನು ಬೇರೆ ಉಪಾಯವಿಲ್ಲದೆ ಆಗಾಗ್ಗೆ ತನ್ನ ದೊಡ್ಡ ತಂದೆಗೆ ಬಂದಿಷ್ಟು ಸಹಾಯಕ್ಕಾಗಿ ಮೊರೆಯಿಟ್ಟು ಬರೆಯುತ್ತಿದ್ದನು. ಆದರೆ ಅವನ ಇಂತಹ ಪ್ರಯತ್ನಗಳೆಲ್ಲವೂ ನಿಷ್ಫಲವಾಗುತ್ತಿದ್ದುವೆಂದು ನಾವು ಪ್ರತ್ಯೇಕವಾಗಿ ಹೇಳಬೇಕಾದುದಿಲ್ಲ. ಅಂತಹ ರಮೇಶನಿಗೆ ಅಂತಹ ಅಪೂರ್ವ ನಡತೆಯ ಅವನ ದೊಡ್ಡ ತಂದೆಯಾದ ರಾಮರಾಯನು ನಿಜವಾಗಿಯೂ ಈಗ ತನ್ನ ರೂ. ೫೦,೦೦೦ವನ್ನೆಲ್ಲಾ ಬಿಟ್ಟುಕೊಟ್ಟನೇ? ನಂಬಲಿಕ್ಕೆ ಸಾಧ್ಯವಿಲ್ಲ. ಆದರೆ ನಂಬಲಿಕ್ಕಸಾಧ್ಯವಾದ ಈ ಸಂಗತಿಯನ್ನೇ ರಾಮರಾಯನ ವಕೀಲರಾದ ಶ್ಯಾಮಸುಂದರರಾಯರ ಕಾಗದವು ಸಂಶಯವಿಲ್ಲದೆ ದೃಢಪಡಿಸುತ್ತಿದೆಯಲ್ಲ! ತನ್ನ ಇಡೀ ಜೀವಮಾನದಲ್ಲಿ ತನಗೆ ಮಕ್ಕಳುಮರಿ ಇಲ್ಲದಿದ್ದರೂ ಕೂಡ ತನ್ನ ಸಹೋದರನ ತಪ್ಪಿಗಾಗಿ ಅವನ ಮಗನ ಕೂಡ ನಿಷ್ಠುರತೆಯಿಂದ ವರ್ತಿಸಿದ ರಾಮರಾಯನು ಈಗ ಮರಣಾಂತರದಿಂದ ತನ್ನ ಋಣಾನುಬಂಧವನ್ನು

ರಮೇಶನೊಂದಿಗೆ ಫಕ್ಕನೇ ಬೆಳಸಿದನೋ? ನಿಜವಾಗಿಯೂ ಲೋಕದ ವ್ಯವಹಾರವು ಬಹಳ ವಿಚಿತ್ರವಾದುದು.

ಐವತ್ತು ಸಾವಿರ ರೂಪಾಯಿ! ಸಹಕಾರಿ ಬ್ಯಾಂಕಿನಲ್ಲಿಟ್ಟರೆ ವರ್ಷಂ ಪ್ರತಿ ಒರುವ ಬಡ್ಡಿಯೇ ಮೂರು ಸಾವಿರ ರೂಪಾಯಿಗಳಿಗಿಂತಲೂ ಮಿಕ್ಕಿ ಹೋಗುತ್ತಿದೆಯಲ್ಲ! ತಿಂಗಳಿಗೆ ಇನ್ನೂರೈವತ್ತು ರೂಪಾಯಿಗಳಿಗಿಂತಲೂ ಹೆಚ್ಚಾಗುತ್ತಿದೆಯಲ್ಲ! ಮನೆಯಲ್ಲಿ ಏನೂ ಮಾಡದೆ, ಕೂತಲ್ಲಿಯೇ ಸಿಗುವ ಈ ಇನ್ನೂರೈವತ್ತು ರೂಪಾಯಿಗಳೆಲ್ಲಿ? ಆ ಹಾಳು ತಾಲೂಕು ಕಚೇರಿಯಲ್ಲಿ ಅಹೋರಾತ್ರಿ ದುಡಿದು ಸಿಗುತ್ತಿರುವ ಇಪ್ಪತ್ತೈದು ರೂಪಾಯಿಗಳೆಲ್ಲಿ?

ಸ್ವರ್ಗಸುಖದಂತೆ ತೋರಿಬರುತ್ತಿರುವ ಇಂತಹ ಪ್ರತೀಕ್ಷೆಯನ್ನು ಮನಸ್ಸಿನಲ್ಲಿ ಗ್ರಹಿಸಿಕೊಂಡಾಕ್ಷಣವೇ, ರಮೇಶನು ತನ್ನಲ್ಲಿ ಉಕ್ಕಿಬರುವ ಮನೋಲ್ಲಾಸವನ್ನು ತಾಳಲಾರದೆ, ಹುಚ್ಚನಂತೆ ಅಲ್ಲಿದ್ದ ಮೇಜಿನ ಸುತ್ತುಮುತ್ತು ಓಡಿದನು. ನಾಲ್ಕೈದು ಸಾರಿ ಮೇಜಿನಿಂದ ಕೆಳಗೆ ಧುಮುಕಿದನು. ಏಳೆಂಟು ಬಾರಿ ನೆಲದ ಮೇಲೆ ಲಾಗಹೊಡೆದನು. ದೂರದಲ್ಲಿ ಕಸಗುಡಿಸುತ್ತಿದ್ದ ದೂಮನು ರಮೇಶನ ವಿಚಿತ್ರವಾದ ಈ ನಡತೆಯನ್ನು ನೋಡಿ, ಅಲ್ಲಿಯೇ ಸ್ತಬ್ಧನಾಗಿ ನಿಂತನು.

ರಮೇಶನು ಅವನನ್ನು ನೋಡಿ 'ದೂಮಾ, ಇಲ್ಲಿ ಬಾ' ಎಂದು ಕರೆದನು. ಅರ್ಥಗರ್ಭಿತವಾದ ಮುಗುಳ್ನಗೆಯ ಸಮೇತನಾಗಿ ದೂಮನು ಆ ಕ್ಷಣವೇ ರಮೇಶನ ಹತ್ತಿರ ಹೋಗಲಿಕ್ಕೆ ವಿಶೇಷ ಕುತೂಹಲ ಪಡಲಿಲ್ಲ.

'ದೂಮು, ದೂಮು! ಇಲ್ಲಿ ಬರುತ್ತೀಯೋ ಇಲ್ಲವೋ?' ಎಂದು ರಮೇಶನು ತನ್ನ ಸ್ವರವನ್ನು ಏರಿಸಿ ಗದರಿಸಿ ಕೇಳಿದನು.

ದೂಮುನಿಗೆ ರಮೇಶನು ಅರಚಿದಂತೆ ಕೇಳಿತು; ಭಯದಿಂದ ಅವನ ಕೂದಲು ಗರಿಗಳಂತೆ ಅವನ ತಲೆಯ ಮೇಲೆ ನೀಟಾಗಿ ನಿಂತಿತು. ಅವನ ಕಣತಲೆಯಲ್ಲಿ ಬೆವರಿನ ಹನಿಗಳು ಯಥೇಷ್ಟವಾಗಿ ಬಂದಿಳಿದುವು. ತನ್ನ ಸುತ್ತುಮುತ್ತಲೂ ಬಹಳ ಜಾಗರೂಕತೆಯಿಂದ ನೋಡುತ್ತಾ ದೂಮನು ರಮೇಶನ ಬಳಿಗೆ ಮೆಲ್ಲಮೆಲ್ಲನೆ ಸರಿದನು.

'ದೂಮಾ, ನಿನ್ನ ಕೈ ಬೆಚ್ಚಗೆ ಮಾಡದೆ ಅನೇಕ ದಿವಸಗಳಾದುವು, ಇಗೋ !'

ದೂಮುನು ಚಾಚಿದ ಕೈಯಲ್ಲಿ ರೂಪಾಯಿಯ ನಾಣ್ಯವೊಂದು ಮಿಂಚಹತ್ತಿತು.

'ಇದೇನು ಸ್ವಾಮಿಾ, ತಮಗೆ ಗೋವೆಯ ಸೋಡ್ತಿಯಲ್ಲಿ ದೊಡ್ಡ ಬಹುಮಾನವೇನಾದರೂ ಸಿಕ್ಕಿದೆಯೋ ?'

ದೂಮುನು ರಮೇಶನನ್ನು 'ತಾವು' ಎಂದು ಸೂಚಿಸಿದುದು– ಅನೇಕ ದಿವಸಗಳಿಂದ ಇದೇ ಮೊದಲನೆಯ ಸಾರಿ. ಕೈಯಲ್ಲಿದ್ದ ನಾಣ್ಯವು ದೂಮುನಿಗೆ ಅವನ ಸಹಜವಾದ ಸ್ಥಾನವನ್ನು ಬಲವಾಗಿ ತಿಳಿಸಿಕೊಟ್ಟಿ ತೆಂದು ಗ್ರಹಿಸಬೇಕಾಗಿದೆ.

ದೂಮುನಲ್ಲಿ ಹಣದಿಂದುಂಟಾದ ಈ ವಿಚಿತ್ರ ಪರಿಣಾಮವನ್ನು ನೋಡಿ, ರಮೇಶನು ಗಟ್ಟಿಯಾಗಿ ನಕ್ಕುಬಿಟ್ಟನು. 'ದೂಮಾ, ನಿನ್ನ ಯಜಮಾನನನ್ನು ಈಗಲೇ ನನ್ನಲ್ಲಿಗೆ ಕರೆದುಕೊಂಡು ಬಾ.'

'ಸ್ವಾಮಿಾ, ೧೧ ಗಂಟೆ ಆಗಲೇ ಆಗಿಹೋಗಿದೆ. ತಾವು ಈವೊತ್ತು ಕಚೇರಿಗೆ ಹೋಗುವುದಿಲ್ಲವೇನು ?'

'ಕಚೇರಿ ಹಾಳಾಗ ! ನಿನಗೆ ಹೇಳಿದ ಕೆಲಸವನ್ನು ಕೂಡಲೆ ಮಾಡು.'

'ತಾವೇ ಅವರ ಹತ್ತಿರ ಹೋಗಿ ಮಾತನಾಡಬಾರದೋ ?'

'ಎಲಾ, ಅಧಿಕಪ್ರಸಂಗಿ ! ನೀನು ಆ ಹೊಟೇಲ್ ಮಾಲಕನನ್ನು ಈಗಲೇ ಕರೆದುಕೊಂಡು ಬರುತ್ತೀಯೋ ಇಲ್ಲವೋ ?'

ದೂಮುನು ಇನ್ನೊಂದು ಮಾತೆತ್ತದೆ ಅಲ್ಲಿಂದ ಮಾಯವಾದನು. ರಮೇಶನು ವಕೀಲರ ಕಾಗದವನ್ನು ಮತ್ತೊಂದು ಬಾರಿ ಓದಿ, ಅದನ್ನು ಬಹಳ ಜಾಗ್ರತೆಯಿಂದ ತನ್ನ ಜುಬ್ಬದ ಜೇಬಿನಲ್ಲಿಟ್ಟುಕೊಂಡನು. ಆ ಮೇಲೆ ಒಂದು ಕುರ್ಚಿಯ ಮೇಲೆ ಕುಳಿತು. ತನ್ನ ಕಾಲುಗಳನ್ನು ಉದ್ದ ವಾಗಿ ಚಾಚಿಕೊಂಡು, 'ಹಿಂದೂ' ದೈನಿಕ ಪತ್ರಿಕೆಯನ್ನೋದುವುದರಲ್ಲಿ ಮಗ್ನನಾದನು.

ಸ್ವಲ್ಪ ಸಮಯದಲ್ಲಿಯೇ ಮೇಘಶ್ಯಾಮವರ್ಣನಾದ ಹೋಟೆಲ್ ಮಾಲಕನು, ತನ್ನ ನುಣುಪಾದ ಲಂಬೋದರವನ್ನು ತನ್ನ ಮುಂದೆ ಅಟ್ಟಿಕೊಂಡು, ರಮೇಶನ ಮುಂದೆ ಬಂದು ನಿಂತನು. ಸಂಪೂರ್ಣವಾಗಿ ತೆರೆಯಲ್ಪಟ್ಟ ಆ 'ಹಿಂದೂ' ಪತ್ರಿಕೆಯೊಳಗಿಂದ, ಎರಡು ಕಾಲುಗಳನ್ನು ಹೊರಕ್ಕೆ ಚಾಚಿದ ವಿಚಿತ್ರವಾದ ವ್ಯಕ್ತಿಯನ್ನು ನೋಡಿ, ಅವನು ಸ್ವಲ್ಪ ಬೆರಗಾದನು. 'ಇದೇನು, ರಮೇಶರಾಯರೇ, ನನ್ನಲ್ಲಿ ನಿಮಗಿರಬಹುದಾದ ಅಷ್ಟು ಜರೂರಿನ ಕೆಲಸವೇನು?' ಎರಡು ಕಾಲುಗಳಿದ್ದ ಆ 'ಹಿಂದೂ' ಪತ್ರಿಕೆಯು ಮಾತನಾಡಲಾರದೆ ಹೋಯಿತು.

'ರಮೇಶರಾಯರೇ?......ಏನು?......ರಮೇಶರಾಯರೇ! ನನ್ನ ಸಮಯಕ್ಕೆ ಬೆಲೆಯುಂಟು. ರಮೇಶರಾಯರೇ!'

'ಅಂ!—ಯಾರದು?—ನೀವೋ? ಇಗೋ, ಕೇಳಿ. ನಿಮ್ಮ ಮೆಣಸಿಲ್ಲದ ಸಾರನ್ನೂ, ಖಾರವಿಲ್ಲದ ಮೇಲೋಗರಗಳನ್ನೂ, ಪಿಂಡಕ್ಕೆ ಮಾತ್ರ ಯೋಗ್ಯವಾಗಿರುವ ಅನ್ನವನ್ನೂ ಉಂಡು ಉಂಡು ಬೇಸರಹತ್ತಿದೆ. ಇನ್ನು ಮುಂದೆ ಹಾಗಾಗದ ಹಾಗೆ ನೋಡಿಕೊಳ್ಳಿ—ಅಷ್ಟೇ!'

ನೀಲವರ್ಣನಾದ ಹೋಟೆಲ್ ಮಾಲಕನು ಇದನ್ನು ಕೇಳಿ, ನೇರಳೆ ವರ್ಣವನ್ನು ತಾಳಿಕೊಂಡನು. 'ಎಲ—ಎಲ—ಎಲಾ! ನಮ್ಮ ಹೊಟೇಲಿನ ಊಟ ಉಂಡು ಬೇಸರಹತ್ತಿದೆಯೋ?....(ತಕ್ಕು ವಿನಯದ ಕಂಠದಿಂದ) ಮಹಾಸ್ವಾಮಿಾ, ಘೋರ ತಪ್ಪಾಯಿತು, ಕ್ಷಮಿಸಬೇಕು. ಆದರೆ ತಮ್ಮಿಂದ ನನಗೆ ಮೂರು ತಿಂಗಳಿನ ಬಾಬ್ತು ಬರತಕ್ಕದ್ದು ಇನ್ನೂ ಬಾಕಿ ಉಂಟೆಂಬುದನ್ನು ಮಾತ್ರ ಜ್ಞಾಪಕದಲ್ಲಿಟ್ಟುಕೊಳ್ಳಿ! ನಮ್ಮ ಊಟದಿಂದ ಬೇಸರಹುತ್ತಿದರೆ ಆ ಬಾಕಿಯನ್ನು ನನ್ನ ಮುಂದೆ ಈಗಲೇ ಇಟ್ಟು, ಬೇರೆ ಹೊಟೇಲನ್ನು ಈ ಕ್ಷಣವೇ ತಮ್ಮಾಶ್ರಯದಿಂದ ಪವಿತ್ರವನ್ನಾಗಿ ಮಾಡಲಿಕ್ಕೆ ನನ್ನಡ್ಡಿಯೇನೂ ಇಲ್ಲ—'

'ಎಷ್ಟು ಮಾತೋ, ನಿಮಗೆ? ನಿಮಗೆ ಸಲ್ಲಬೇಕಾದ ಹಣವೆಷ್ಟು? ಬೇಗನೆ ಹೇಳಿ; ಈಗಲೇ ಕೊಡುವೆನು.'

ಮೇಘಶ್ಯಾಮನು ಕೂಡಲೆ ಗುಣಿಸತೊಡಗಿದನು. ಬಾಯಿಯಿಂದ

ಏನೋ ಮಣಮಣವೆಂದು ಪಠಿಸಿ, ಊಟಕ್ಕೆ ೧೨ ರೂಪಾಯಿ ಪ್ರಕಾರ ೩ ತಿಂಗಳು....೩೬ ರೂಪಾಯಿ; ಕೋಣೆಯ ಬಾಡಿಗೆ ೧೨ ರೂ.... ಬಿಸಿನೀರಿಗೆ....ರಾತ್ರಿ ಹಾಲಿಗೆ....' ಕಡೆಗೆ ದೊಡ್ಡ ಸ್ವರದಿಂದ, 'ಒಟ್ಟಿಗೆ ೫೧ ರೂಪಾಯಿ ೬ ಆಣೆ ೮ ಪೈ' ಎಂದನು.

ರಮೇಶನಿಗೆ ತನ್ನ ಹತ್ತಿರ ಅಷ್ಟು ಹಣವಿರಬಹುದೋ ? ಎಂಬ ಸಂಶಯವುಂಟಾಯಿತು. ಆದರೂ ಅವನು ಹಿಂದೆ ಮುಂದೆ ನೋಡದೆ ತನ್ನ ಟ್ರಂಕಿನ ಬಾಗಿಲನ್ನು ಕೂಡಲೇ ತೆರೆದು, ತನ್ನಲ್ಲಿದ್ದ ಹಣವನ್ನು ಲೆಕ್ಕ ಮಾಡಿದನು. ದೈವವಶಾತ್, ೫೪ ರೂಪಾಯಿ, ೪ ಆಣೆ, ೬ ಪೈ ಇತ್ತು. ರಮೇಶನಿಗೆ ಧೈರ್ಯ ಬಂತು.

'೫೨ ರೂಪಾಯಿ—ಅಷ್ಟೆಯೋ ?—ಆ !' ಎಂದು ೫೨ ರೂ. ನೋಟುಗಳನ್ನು ಹೊಟೇಲು ಮಾಲಕನಿದ್ದೆಡೆಗೆ ಬಿಸಾಡಿದನು. ಮತ್ತು ತನ್ನಲ್ಲಿ ಚಿಲ್ಲರೆಯಾಗಿದ್ದ ೪ ಆಣೆ ೬ ಪೈಗಳನ್ನು ತೆಗೆದುಕೊಂಡು, ಅಲ್ಲಿ ಹಿಂದೆಯೇ ನಿಂತಿದ್ದ ದೂಮನನ್ನು ನೋಡಿ 'ದೂಮಾ, ಇಗೋ ಈ ಚಿಲ್ಲರೆಯಿಂದ ನನಗೆ ಬಹಳ ತೊಂದರೆಯೇ ಸರಿ. ಅದನ್ನು ನೀನು ತಕ್ಕೋ' ಎಂದು ಹೇಳಿ, ಅದನ್ನು ದೂಮನಿಗೆ ಕೊಟ್ಟನು. ರಮೇಶನಿಗೆ ನಿಜವಾಗಿಯೂ ಹುಚ್ಚು ಹಿಡಿದಿದೆ–ಎಂದು ದೂಮನು ತಿಳಿದುಕೊಂಡಿದ್ದರೂ, ಆ ಚಿಲ್ಲರೆಯನ್ನು ಸ್ವೀಕರಿಸಲಿಕ್ಕೆ ಅವನು ಲೇಶಮಾತ್ರವೂ ಹಿಂಜರಿಯಲಿಲ್ಲ.

ಅತ್ತ ಆ ಹೊಟೇಲ್ ಮಾಲಕನು ತನಗೆ ಬರಬೇಕಾದ ಹಣವನ್ನು ಕಳೆದು, ಬಾಕಿ ೯ ಆಣೆ ೪ ಪೈಯನ್ನು ರಮೇಶನಿಗೆ ವಾಪಸು ಕೊಡಬೇಕೆಂಬ ಇಚ್ಛೆಯಿಂದ, ತಾನು ಉಟ್ಟುಕೊಂಡಿದ್ದ ಕಾಫಿ ವರ್ಣದ ವಸ್ತ್ರದಲ್ಲಿ ಕಟ್ಟಿದ–ಒಂದು ಚಿಕ್ಕ ಗಂಟಿನ ಕೂತ, ಬೆವರು ಬರುವ ವರೆಗೆ ಚಡಪಡಿಸುತ್ತಿದ್ದನು. ರಮೇಶನು ಇದನ್ನು ನೋಡಿ, 'ನೀವು ಚಿಲ್ಲರೆಗಾಗಿ ಅಷ್ಟು ತೊಂದರೆ ಪಡುವುದು ಬೇಡ. ನನಗೆ ಆ ಚಿಲ್ಲರೆಯು ಅವಶ್ಯವಿಲ್ಲ.' ಎಂದು ಹೇಳಿ ಅವನನ್ನು ಕಳುಹಿಸಿದನು.

ರಮೇಶನ ಹತ್ತಿರ ಈಗ ಉಳಿದುದು ಬರೀ ಎರಡು ರೂಪಾಯಿ.

ಮಂಗಳೂರಿಗೆ ಹೋಗುವ ಬಸ್ ಟಿಕೇಟಿಗೆ ಮಾತ್ರ ಸಾಕಾಗಿತ್ತು. ಆದರೂ ರಮೇಶನು ರವೆಯಷ್ಟಾದರೂ ವ್ಯಸನಪಡಲಿಲ್ಲ. ಮಂಗಳೂರಿಗೆ ಹೋದಾಕ್ಷಣವೇ ಅವನ ಪಾಲಿಗೆ ೫೦ ಸಾವಿರ ರೂಪಾಯಿ ಬರುತ್ತಿದೆಯಲ್ಲವೇ? ತನ್ನ ರಿಸ್ಟವಾಚನ್ನು ನೋಡಿ, ೧೨ ಗಂಟೆಗೆ ೧೫ ಮಿನಿಟುಗಳಿವೆ ಎಂದು ತಿಳಿದುಕೊಂಡನು. ನಾಟಕದ ಹಾಡೊಂದನ್ನು ಗುಂಯಿಗುಂಯಿ ಎಂದು ಮನಸ್ಸಿನಲ್ಲಿಯೇ ತಿರುಗಿಸುತ್ತ, ತನ್ನ ಅಂಗಿಯನ್ನು ತೊಟ್ಟುಕೊಂಡು, ರಮೇಶನು ತಾಲೂಕು ಕಚೇರಿಗೆಂದು ಸಾವಧಾನದಿಂದ ಹೊರಟುಹೋದನು.

## ೨

೧೨ ಗಂಟೆಯ ಸಮಯ. ತಾಲೂಕು ಕಚೇರಿಯು ಆಗಲೆ ಪ್ರಾರಂಭವಾಗಿ ಗುಮಾಸ್ತರೆಲ್ಲರೂ ಅವರವರ ಸ್ಥಾನದಲ್ಲಿ ಕುಳಿತುಕೊಂಡು, ಅವರವರ ಕೆಲಸದಲ್ಲಿ ಮಗ್ನರಾಗಿದ್ದರು. ರಮೇಶನು ಕುಳಿತುಕೊಳ್ಳುವ ಸ್ಥಾನವು ಮಾತ್ರ ಖಾಲಿಯಿತ್ತು. ತಹಶಿಲ್ದಾರರೂ ಬಂದಿದ್ದುದರಿಂದ ಹರಟೆ ಮಾತುಗಳೆಲ್ಲವೂ ನಿಂತುಬಿಟ್ಟಿದ್ದುವು. ಲೇಖನಿಗಳ ಗಿರಿಗಿರಿ ಶಬ್ದ, ಕಾಗದದ ಹಾಳೆಗಳನ್ನು ಮಗುಚುವ ಪರಪರ ಶಬ್ದ; ಪೇದೆಯೊಬ್ಬನು ತಹಶಿಲ್ದಾರರಿಗೋಸ್ಕರ ಪಂಕವನ್ನು ಎಳೆಯುವ ಕಿರೀಕಿರೀ ಶಬ್ದ; ಇವುಗಳ ಹೊರತು ಆ ಕಚೇರಿಯಲ್ಲಿ ಎಲ್ಲವೂ ನಿಶ್ಶಬ್ದವಾಗಿತ್ತು. ಕಚೇರಿಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಕಾಗದದ ದಪ್ಪವಾದ ಕಟ್ಟುಗಳನ್ನು ಒಯ್ಯುತ್ತಿದ್ದ ಪೇದೆಗಳು ಸಹ ಪ್ರೇತಗಳಂತೆ ಸದ್ದಿಲ್ಲದೆ ಸಂಚರಿಸುತ್ತಿದ್ದರು. ಆದರೆ ಗುಮಾಸ್ತರಲ್ಲಿ ಒಬ್ಬಿಬ್ಬರು ನಶ್ಯವನ್ನು ಸೇದುತ್ತ ಕಚೇರಿಯಲ್ಲೆಲ್ಲಾ ಮಹಾ ಉಪಟಳವನ್ನು ಎಬ್ಬಿಸುತ್ತಿದ್ದರೆಂಬುದೇನೋ ನಿಜವು.

ರಮೇಶನೂ ಕಚೇರಿಯೊಳಕ್ಕೆ ಬಂದನು. ಅವನ ಬರುವಿಕೆಯನ್ನು ತಹಶಿಲ್ದಾರರು ಕನ್ನಡಕದ ಅಂಚಿನ ಮೇಲಿನಿಂದ– ತೀಕ್ಷ್ಣ ದೃಷ್ಟಿಯಿಂದ ನೋಡಿದರು. ಇದು ರಮೇಶನಿಗೆ ಗೊತ್ತಿದ್ದರೂ ಅವನು ಅದನ್ನು ಎಳ್ಳಷ್ಟಕ್ಕೂ ಲಕ್ಷಿಸದೆ, ಆ ಕ್ಷಣವೇ ಎರಡು ಇಂಚು ಉದ್ದ ಬೆಳೆದವನಂತೆ

ರಾಜಠೀವಿಯಿಂದ ಹೆಜ್ಜೆಗಳನ್ನಿಡುತ್ತಾ, ಗುಮಾಸ್ತರಿರುವ ಕೊಠಡಿಗೇ ನೆಟ್ಟಗೆ ಹೋಗಿ, ತನ್ನ ಕುರ್ಚಿಯಲ್ಲಿ ಕುಳಿತನು. ಅಲ್ಲಿದ್ದ ಗುಮಾಸ್ತರೆಲ್ಲರ ದೃಷ್ಟಿಯೂ ಅವನ ಕಡೆಗೆ ತಿರುಗಿತು.

ರಮೇಶನು ತಾನು ಕೆಲಸ ಮಾಡುವ ಸ್ಥಳದಲ್ಲಿ ಕುಳಿತುಕೊಂಡರೂ ಯಾವ ಕೆಲಸವನ್ನು ಮಾಡುವ ಇಚ್ಛೆಯನ್ನೂ ತೋರಿಸದೆ, ತಾನು ಕೂತುಕೊಂಡ ಕುರ್ಚಿಯನ್ನು—ಅದರ ಹಿಂದಿನ ಎರಡು ಕಾಲುಗಳ ಮೇಲೆ ನಿಲ್ಲಿಸಿ, ಹಿಂದಿರುವ ಗೋಡೆಯ ವರೆಗೆ ಅದನ್ನು–ಹಿಂದೆಮುಂದೆ ತೂಗುತ್ತಾ, ಗುಮಾಸ್ತರೆಲ್ಲರೂ ಅವನ ಕಡೆಗೆ ತಿರುಗಿಸಿದ ಭೀಕರ ದೃಷ್ಟಿಯನ್ನು ತನ್ನ ಮೋಹನಕರವಾದ ಮಂದಹಾಸದಿಂದ ಎದುರುಗೊಂಡನು.

ಇದನ್ನು ನೋಡಿ ಅವನ ಹತ್ತಿರದಲ್ಲಿದ್ದ ಗುಮಾಸ್ತನೊಬ್ಬನು ಅವನ ಕಿವಿಯಲ್ಲಿ 'ಈವೊತ್ತೇನು ನಿನಗೆ ಹುಚ್ಚು ಹಿಡಿದಿದೆಯೇ?' ಎಂದು ಕಿಶಿಬಿಶಿಯಾಗಿ ಕೇಳಿದನು. ಅದಕ್ಕೆ ರಮೇಶನು 'ಹುಚ್ಚು? ಹುಚ್ಚು ನನಗಲ್ಲ—ನಿಮಗೆ! ಬೆಳಗ್ಗೆ ೭ ಗಂಟೆಯಿಂದ ರಾತ್ರಿ ೯ ಗಂಟೆಯ ವರೆಗೆ ಗಾಣದ ಎತ್ತುಗಳಂತೆ ಕೆಲಸ ಮಾಡುತ್ತಿರುವ ನಿಮಗೆ ಹುಚ್ಚು! ಈ ಹಾಳು ಕಚೇರಿಯ ಕೆಲಸ ಮಾಡುವುದಕ್ಕಿಂತಲೂ ದಿನಗೂಲಿಯಾಗಿ ಬಾಳುವುದು ಎಷ್ಟೋ ಲೇಸು!' ಎಂದು ಸ್ವಲ್ಪವಾದರೂ ದಾಕ್ಷಿಣ್ಯವನ್ನಿಡದೆ ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಒದರಿದನು.

ಇದರ ಪರಿಣಾಮವು ಭಯಂಕರವಾಗುವುದೆಂದು ತಿಳಿದುಕೊಂಡು ಗುಮಾಸ್ತರೆಲ್ಲರೂ ಚಕಾರ ಶಬ್ದವನ್ನೆತ್ತದೆ, ಅವರವರ ಮೇಜುಗಳ ಮೇಲೆ ಕಾಯಿಪಲ್ಯದಂತೆ ಪಸರಿಸಲ್ಪಟ್ಟ ಕಾಗದದ ಹಾಳೆಗಳಲ್ಲಿ ಅವರವರ ತಲೆಗಳನ್ನು ಅಡಗಿಸಿಕೊಂಡರು. ರಮೇಶನು ಮರುದಿನವೇ ಅರ್ಧಲಕ್ಷಾಧಿಪತಿಯಾಗುವನೆಂದು ಅವರಿಗೇನು ಗೊತ್ತು?

ಸ್ವಲ್ಪ ಸಮಯದಲ್ಲಿಯೇ ಪೇದೆಯೊಬ್ಬನು ರಮೇಶನಿದ್ದಲ್ಲಿಗೆ ಬಂದು 'ರಾಯರು ತಮ್ಮನ್ನು ಕರೆಯುತ್ತಾರೆ' ಎಂದನು. ಇದನ್ನು ಕೇಳಿ ಇತರ ಗುಮಾಸ್ತರೆಲ್ಲರೂ ತಲೆಯಲ್ಲಾಡಿಸುತ್ತಾ ಒಬ್ಬರನ್ನೊಬ್ಬರು ನೋಡಿದರು. ಬೇರೆ ಸಮಯದಲ್ಲಿ ಪೇದೆಯ ಬಾಯಿಂದ 'ರಾಯರು'

ಎಂಬ ಶಬ್ದವು ಹುಟ್ಟುವಷ್ಟರೊಳಗೇ ರಮೇಶನು ಕುರ್ಚಿಯಿಂದ ತಟಕ್ಕನೆ ಎದ್ದು, ರಾಯರಿದ್ದಲ್ಲಿಗೆ ಹೋಗಲಿಕ್ಕೆ ಸಿದ್ಧನಾಗುತ್ತಿದ್ದನು. ಆದರೆ ಆಗ ಅವನಿಗೆ ಐವತ್ತು ಸಾವಿರ ರೂಪಾಯಿಗಳಿಗೆ ಒಡೆಯನಾಗುವ ಸಂಭವವೇನೂ ಇರುತ್ತಿದ್ದಿಲ್ಲ. ಈಗ ಪೇದೆಯು ಹೇಳಿದುದನ್ನು ಬಹಳ ಸಾವಧಾನದಿಂದ ಕೇಳಿ 'ನಾನು ಈಗಲೇ ಬರುವೆನೆಂದು ರಾಯರಿಗೆ ತಿಳಿಸು' ಎಂದು ಉತ್ತರವನ್ನು ಕಳುಹಿಸಿದನು.

'ರಾಯರಿಗೆ ಪ್ರತ್ಯುತ್ತರವನ್ನು ಕಳುಹಿಸಿದನೇ? ಎಂತಹ ದುಡುಕಿದು!' ಎಂದು ಅಲ್ಲಿದ್ದ ಗುಮಾಸ್ತರೆಲ್ಲರೂ ಎಂದುಕೊಂಡು, ರಮೇಶನಿಗಾಗಿ ಮನಸ್ಸಿನಲ್ಲಿಯೇ ಬಹಳವಾಗಿ ನೊಂದುಕೊಂಡರು.

ರಮೇಶನು ಎದ್ದುನಿಂತು, ತನ್ನ ತಲೆಯನ್ನು ಎತ್ತರವಾಗಿ ಹಿಡಿದುಕೊಂಡು, ಸುತ್ತುಮುತ್ತಲೂ ನೋಡಿದನು, 'ಇದೇನು, ಈ ಹೊತ್ತು ನಾನೆಲ್ಲಿ ನೋಡಿದರೂ ಸಪ್ಪೆ ಮೋರೆಗಳೇ ನನ್ನ ಕಣ್ಣಿಗೆ ಬೀಳುತ್ತವೆ? ಇಂದು ನಿಮಗೆ ಏನಾಗಿದೆ? ರಾಯರಿಲ್ಲದಿರುವಾಗ ನೀವು ಮಾಡುವ ಗಲಭೆಗೆ ಮಿತಿಯೇ ಇರುವುದಿಲ್ಲ! ಆಡುವ ಹರಟೆಗೆ ತುದಿ ಮೊದಲೇ ಇರುವುದಿಲ್ಲ! ಈಗ ಮಾತ್ರ ಮೂಕರಂತೆ ಸುಮ್ಮನೇ ಬಿದ್ದುಕೊಂಡಿದ್ದೀರಿ!' ಎಂದು ಹೇಳಿ, ರಾಯರ ಕೋಣೆಗೆ ನೆಟ್ಟಗೆ ಹೋಗಿ, ಅವರು ಕುಳಿತಿರುವ ಕುರ್ಚಿಯ ಹತ್ತಿರವೇ ಇದ್ದೊಂದು ಕುರ್ಚಿಯನ್ನು ತನ್ನ ಕಡೆಗೆ ಸರ್ರನೆ ಎಳೆದುಕೊಂಡು, ಅದರ ಮೇಲೆ ಕುಳಿತುಕೊಂಡನು.

ರಾಯರ ಮುಖವು ಕೆಂಪೇರಿತು. ಗುಮಾಸ್ತರು ಅವರ ಮುಂದೆ ಐದ್ಯೆದು ತಾಸುಗಳ ವರೆಗೆ ನಿಂತುಕೊಂಡು ಕಾಲಹರಣ ಮಾಡುವುದಾದರೂ, ಅವರಿಗೆ 'ಕುಳಿತುಕೊಳ್ಳಿ' ಎಂದು ಹೇಳಿದರೆ, ತನ್ನ ಪದವಿಯ ಗೌರವವು ಹೋದೀತೆಂಬ ಸಿದ್ಧಾಂತವನ್ನವಲಂಬಿಸಿಕೊಂಡಿರುತ್ತಿದ್ದ ಆ ರಾಯರಿಗೆ, ಇಂದು ರಮೇಶನು ಮಾಡಿದ ಕೃತ್ಯವನ್ನು ನೋಡಿ ಕೋಪ ಬಂದುದರಲ್ಲಿ ಆಶ್ಚರ್ಯವೇನು? ರಾಯರ ಮುಂದೆಯೇ ಕುಳಿತುಕೊಳ್ಳಲಿಕ್ಕೆ ಹಿಂಜರಿಯದ ರಮೇಶನು ತಹಶಿಲ್ದಾರರಂತಹರ ಪವಿತ್ರ ಪದವಿಗೆ ನಿಜವಾಗಿಯೂ ಎಂತಹ ಕಳಂಕವನ್ನು ತಂದುಬಿಟ್ಟನು!

ರಾಯರಿಗೆ ಕೋಪ ಬಂದುದನ್ನು ನೋಡಿ ರಮೇಶನು ಮನಸ್ಸಿನಲ್ಲಿಯೇ ಹಿಗ್ಗಿಕೊಂಡನು. ಮತ್ತು ಸ್ವಲ್ಪ ಸಮಯದ ಮೇಲೆ ತನ್ನ ಅತ್ಯಂತ ಶಾಂತಸ್ವರದಿಂದ 'ನನ್ನನ್ನು ನೀವು ಕರೆಕಳುಹಿಸಿದುದು ಏತಕ್ಕೆ?' ಎಂದು ರಾಯರನ್ನು ಕೇಳಿದನು.

ಇದರಿಂದ ರಾಯರ ಕೋಪವು ಮತ್ತಿಷ್ಟು ಹೆಚ್ಚಿತು. ಅವರಿಗೆ ಕೋಪದ ಆವೇಶದಿಂದ ಫಕ್ಕನೆ ಏನು ಮಾತಾಡಬೇಕೆಂಬುದು ತಿಳಿಯುಲಿಲ್ಲ. ಕೊನೆಗೆ ತಮ್ಮ ಕೋಪವನ್ನು ಬಲವಾಗಿ ತಡೆದುಕೊಂಡು, 'ಈಗೆಷ್ಟು ಸಮಯವಾಗಿರಬಹುದೆಂಬುದು ನಿಮಗೆ ತಿಳಿದಿದೆಯೋ?' ಎಂದು ಕೇಳಿದರು.

'ನೋಡಿ ಹೇಳುತ್ತೇನೆ' ಎಂದು ರಮೇಶನು ಬಹಳ ಕ್ಷಮೆಯಿಂದ ತನ್ನ ರಿಸ್ಟ್ ವಾಚನ್ನು ನೋಡಿ, '೧ ಗಂಟೆ ೧೬ ಮಿನಿಟು ೩೧ ಸೆಕಂದು' ಎಂದನು.

'ಕಚೇರಿಯು ೧೧ ಗಂಟೆಗೇ ಪ್ರಾರಂಭವಾಗುತ್ತದೆಂಬುದು ನಿಮಗೆ ಗೊತ್ತಿರಬಹುದು.'

'ಹೌದು, ಗೊತ್ತುಂಟು. ಆದರೆ ನೀವು ಹೇಳಿದಂತೆ ಬೆಳಗ್ಗೆ ೭॥ ಗಂಟೆಯಿಂದ ೧೦ ಗಂಟೆಯವರೆಗೆ ಕೆಲಸ ಮಾಡುವುದಾದರೆ ೧೧ ಗಂಟೆಗೆ ಸರಿಯಾಗಿ ಪುನಃ ಕೆಲಸಕ್ಕೆ ಬರಲಿಕ್ಕೆ ಸಾಧ್ಯವಾಗುವುದಿಲ್ಲ.'

ರಾಯರು ಇತರ ಗುಮಾಸ್ತರು ಇರುವಲ್ಲಿ ಬೆರಳು ತೋರಿಸಿ, 'ಅವರಿಗೆ ಹೇಗೆ ಸಾಧ್ಯವಾಗುತ್ತದೆ?' ಎಂದು ಕೇಳಿದರು.

'ಅವರಿಗೆ ಸಾಧ್ಯವಾಗಬಹುದು; ನನಗೆ ಸಾಧ್ಯವಾಗುವುದಿಲ್ಲ' ಎಂದು ರಮೇಶನು ಉತ್ತರ ಕೊಟ್ಟನು.

'ಯಾಕೆ?'

'ಯಾಕೆಂಬ ಅಧಿಕಪ್ರಸಂಗವು ನಿಮಗೆ ಬೇಡ. ನಮ್ಮಿಂದ ನೀವು ಕೆಲಸ ಮಾಡಿಸಿಕೊಳ್ಳುವ ಬದಲಿಗೆ ನೀವೇ ಮಾಡಿ ನೋಡಿ. ಆಗ ತಿಳಿಯುವುದು.'

'ಯಾರ ಮುಂದೆ ಮಾತಾಡುತ್ತೀರೆಂಬುದನ್ನು ನೆನಪಿಟ್ಟುಕೊಳ್ಳಿ!'

'ಯಾರ ಮುಂದೆ ಮಾತಾಡುತ್ತೇನೆಂಬುದು ನನಗೆ ಚೆನ್ನಾಗಿ ತಿಳಿದಿರುವುದರಿಂದಲೇ ನಾನು ಹೀಗೆ ಮಾತಾಡುತ್ತೇನೆ. ಯಾರ ಮುಂದೆ ಎಂದು ಸ್ಪಷ್ಟವಾಗಿ ವಿವರಿಸಲು ನನಗಿಷ್ಟವಿಲ್ಲ.'

'ನಾನಿನ್ನೊಮ್ಮೆ ಹೇಳುತ್ತೇನೆ! ಜಾಗ್ರತೆಯಿಂದ ಮಾತಾಡಿ! ಜೋಕೆ! ಫಲವು ವಿಪರೀತವಾಗಬಹುದು!'

'ನಿಮ್ಮ ಬೆದರಿಕೆಗೆ ಹೆದರುವವನಲ್ಲ, ನಾನು. ಜಾಗ್ರತನಾಗಿ ಕಣ್ಣುಗಳನ್ನು ತುಂಬಾ ತೆರೆದಿದ್ದೇನಾಗಿರುವುದರಿಂದಲೇ ಜಾಗ್ರತೆಯಿಂದ ಮಾತನಾಡುತ್ತಿದ್ದೇನೆ. ನೀವೇನೋ ಈ ಹಾಳು ತಾಲೂಕು ಕಚೇರಿಯ ಕೆಲಸಕ್ಕಾಗಿಯೇ ಹುಟ್ಟಿರಬಹುದು. ಆದರೆ ನಾನು ಹಾಗಲ್ಲ; ಆ ಹಾಳು ೨೫. ರೂಪಾಯಿಗಳಿಗಾಗಿ, ಇವರೆಲ್ಲರ ಹಾಗೆ ನಿಮ್ಮ ದಾಸಾನುದಾಸ ನಾಗುವ ಇಷ್ಟವು ನನಗಿಲ್ಲ.'

'ನಿಮ್ಮ ತಲೆಯು ಈ ಹೊತ್ತು ಸರಿಯುಂಟೋ? ಅಥವಾ ನೀವು ಕುಡಿದು ಬಂದಿದ್ದೀರೋ?'

ರಾಯರು ಕೋಪದಿಂದ ಕಿಡಿಕಿಡಿಯಾದರು. ಗುಮಾಸ್ತರು, ಪೇದೆಯವರು ಎಲ್ಲರೂ ಇಂತಹ ಅಪೂರ್ವವಾದ ಸಂಭಾಷಣೆಯನ್ನು ಕೇಳಿ ಸ್ತಂಭಿತರಾದರು.

'ನೀವು ಇನ್ನು ನನ್ನ ಆಫೀಸಿನಲ್ಲಿ ಕೆಲಸ ಮಾಡಬೇಕಾದದ್ದಿಲ್ಲ. ನಿಮ್ಮನ್ನು ಡಿಸ್‌ಮಿಸ್ ಮಾಡಲಿಕ್ಕೆ ಈಗಲೇ ಕಲೆಕ್ಟರ್ ಸಾಹೇಬರಿಗೆ ಬರೆಯುತ್ತೇನೆ. ನೀವು ಇನ್ನು ಇಲ್ಲಿಂದ ಹೋಗಬಹುದು.'

'ರಾಯರೇ, ಅವಸರ ಮಾಡಬೇಡಿ, ಇಕ್ಕೊಳ್ಳಿ, ನಿಮ್ಮ ೨೫ ರೂಪಾಯಿಯ ಹಾಳು ಕೆಲಸಕ್ಕೆ ನನ್ನ ರಾಜೀನಾಮೆಯನ್ನು ನಾನು ಆಗಲೇ ಬರೆದು ತಂದಿದ್ದೇನೆ.' ಎಂದು ರಮೇಶನು ಹೇಳಿ, ತನ್ನ ರಾಜೀನಾಮೆಯನ್ನು ಬರೆದ ಪತ್ರವನ್ನು ರಾಯರ ಮೇಜಿನ ಮೇಲೆ, ಅವರ ಮೂಗಿನ ಕೆಳಗೆ ಬಿಸಾಡಿ, ಕುರ್ಚಿಯಿಂದೆದ್ದು ನಿಂತನು; ಮತ್ತು ಪರಿಹಾಸ್ಯದ ಸ್ವರದಿಂದ, 'ರಾಯರೇ, ಇನ್ನು ನನಗೆ ಹೋಗಲಿಕ್ಕೆ ಅಪ್ಪಣೆ ಕೊಡೋಣಾಗಲಿ. ಕಡೆಯ ಸಾರಿ ಬೀಳ್ಕೊಳ್ಳುವೆನು....ಏನು, ನನ್ನ

ನಮಸ್ಕಾರವನ್ನು ಕೂಡಾ ನನಗೆ ಒಪ್ಪಿಸಲಾರಿರಾ? ನಿಮ್ಮ ಈ ಅಟ್ಟಹಾಸದ ಹೆಗ್ಗಳಿಕೆಗೆ ಬೆಂಕಿ ಬೀಳಲಿ!' ಎಂದು ಕೂಗಿಕೊಂಡು, ತಾನೇ ರಾಯರೋ ಎಂಬಂತೆ ಗುಮಾಸ್ತರಿರುವ ಕೊಠಡಿಯೊಳಗೆ ಹೋಗಿ ಬಿಟ್ಟನು.

ರಮೇಶನ ದುಡುಕಿನ ವರ್ತನೆಯನ್ನು ನೋಡಿ ಕಚೇರಿಯ ಗುಮಾಸ್ತರೆಲ್ಲರೂ ಬೆಚ್ಚಿಬಿದ್ದಿದ್ದರು. ಇದನ್ನು ನೋಡಿ ರಮೇಶನಿಗೆ ಗೋಲ್ಡ್‌ಸ್ಮಿತ್ ಎಂಬ ಆಂಗ್ಲೇಯ ಕವಿಯ ಒಂದು ನಾಟಕದೊಳಗಿನ ಒಂದು ಮಾತು ಹಠಾತ್ತಾಗಿಯೂ ನೆನಪಿಗೆ ಬಂದು, ಅದಕ್ಕನುಸಾರವಾಗಿ, "Boys, why do you pop up and stare like frightened rabbits in a warren?" ಎಂದು ನಸುನಗುತ್ತಾ ಕೇಳಿದನು; ಆ ಮೇಲೆ ಸ್ವಲ್ಪ ಗಾಂಭೀರ್ಯದಿಂದ 'ಏನ್ರೀ, ನಿಮಗೆ ಬದುಕಬೇಕೆಂಬಾಸೆಯಿದ್ದರೆ ನಾನೀಗ ಮಾಡಿದಂತೆಯೇ ಮಾಡಿ, ನಿಮ್ಮ ರಾಯರ ಹೆಮ್ಮೆಯನ್ನು ಮುರಿಯುವುದಕ್ಕೆ ಮೊದಲು ಪ್ರಯತ್ನಿಸಿರಿ. ಇಲ್ಲವಾದರೆ ನಿಮಗೆ 'ಗೆಲ್ಲಿ ಸ್ಲೇವ'ರ (Galley Slave) ಗತಿಯೇ ಪ್ರಾಪ್ತಿ' ಎಂದು ಹೇಳಿ, ತನ್ನಷ್ಟು ಸುಖಿಯು ಲೋಕದಲ್ಲಿ ಇನ್ನಾರು ಇಲ್ಲದಂತೆ ಸಿಳ್ಳು ಹಾಕುತ್ತಾ ಆ ತಾಲೂಕು ಕಚೇರಿಯಿಂದ ಹೊರಗೆ ಬಂದನು.

ಆ ದಿನ ತಹಶಿಲ್ದಾರರೂ ಗುಮಾಸ್ತರೂ ರಾತ್ರಿ ಒಂಬತ್ತು ಗಂಟೆಯ ವರೆಗೆ ಕೆಲಸಕ್ಕೆಂದು ಕುಳಿತರೂ, ಕಚೇರಿಯ ಕೆಲಸವು ಅಷ್ಟೇನೂ ವೃದ್ಧಿ ಹೊಂದಲಿಲ್ಲವೆಂದು ನಾವು ಪುನಃ ಹೇಳಬೇಕಾದದ್ದಿಲ್ಲ.

೩

ರಮೇಶನಿಗೆ ಆ ರಾತ್ರಿ ನಿದ್ರೆಯೇ ಹತ್ತಲಿಲ್ಲ. ಸೊಳ್ಳೆಗಳ ಕಾಟದಿಂದಾಗಿರಬಹುದೆಂದು ವಾಚಕರು ಹೇಳಬಹುದು. ಸೊಳ್ಳೆಗಳ ಕಾಟ ಏನ್ತೇನೋ ನಿಜವು. ಆದರೆ ಲೋಕದಲ್ಲಿರುವ ಎಲ್ಲಾ ಸೊಳ್ಳೆಗಳು ಕೂಡಿ, ಅವನ ಮೇಲೆ ಒಮ್ಮೆಯೇ ದಂಡೆತ್ತಿ ಬಂದಿದ್ದರೂ ರಮೇಶನು ಆ ರಾತ್ರಿ ಅದನ್ನು ಲಕ್ಷಿಸಲಾರದವನಾಗಿದ್ದನು. ಅಂದು ಮಧ್ಯಾಹ್ನ ತಾಲೂಕು ಕಚೇರಿಯಲ್ಲಿ ತಹಶಿಲ್ದಾರರ ಕೂಡ ಅವನು ಹುಚ್ಚನಂತೆ

ವರ್ತಿಸಿದುದಕ್ಕೆ ಅವನು ಲೇಶಮಾತ್ರವೂ ವ್ಯಸನಪಡುತ್ತಿರಲಿಲ್ಲ. ಅವನ ವಿಚಾರವೆಲ್ಲಾ ಅವನ ಮುಂದಿನ ಸದ್ಗತಿಯ ಕಡೆಗೆಯೆ ತಿರುಗಿತ್ತು. ಮರುದಿನವೇ ಅವನಿಗೆ ಸಿಗಬಹುದಾದ ೫೦ ಸಾವಿರ ರೂಪಾಯಿಗಳಲ್ಲಿಯೇ ಅವನು ಲೋಲಾಡುತ್ತಿದ್ದನು. ಅಂತೇ ಅವನ ನಿದ್ರೆಗೆ ಭಂಗ.

೫೦ ಸಾವಿರ ರೂಪಾಯಿ! ಇಷ್ಟು ಹೇರಳವಾದ ದ್ರವ್ಯದಿಂದ ಯಾವುದನ್ನು ಸಾಧಿಸಲಿಕ್ಕಾಗದು? ಇಷ್ಟು ಹೇರಳವಾದ ದ್ರವ್ಯದ ಸಹಾಯವಿರುವಾಗ ಇನ್ನು ತನ್ನ ಜೀವನವನ್ನು ಯಾವ ರೀತಿಯಲ್ಲಿ ಸಾಗಿಸಬೇಕೆಂಬ ಆಲೋಚನೆಯಲ್ಲಿಯೇ ರಮೇಶನು ಆ ಇಡೀ ರಾತ್ರಿ ಮಗ್ನನಾದನು. ಅವನ ಮುಂದೆ ಎರಡು ಹೆದ್ದಾರಿಗಳು—ಎರಡೂ ಬಹಳ ಮನೋರಂಜಕವಾಗಿ—ತೆರೆಯುವಂತೆ ಅವನಿಗೆ ತೋರಿಬಂತು.

ಆ ಹಣವನ್ನೆಲ್ಲಾ ಬಡ್ಡಿಗೆ ಹಾಕಿ, ಅದರಿಂದ ವರ್ಷಂಪ್ರತಿ ಬರುವ ಮೂರು ಸಾವಿರ ರೂಪಾಯಿಗಳಿಂದ ಜೀವನ ಮಾಡಬಹುದಾದ ಮೊದಲನೆಯ ದಾರಿಯು. ಇದರಲ್ಲಿ ಅವನಿಗೆ ಚಿತ್ತಾಕರ್ಷಕವಾಗಿ ತೋರಿದುದೇನೆಂದರೆ—ಕುಟುಂಬದಾಸೆಯೇ. ತೀರಾ ಚಿಕ್ಕ ಪ್ರಾಯದಿಂದಲೇ ಒಂಟಿಯಾಗಿ ಜೀವಿಸುತ್ತಿದ್ದ ರಮೇಶನು ಕುಟುಂಬ ಪ್ರೀತಿಗಾಗಿ ಹಂಬಲಿಸುತ್ತಿದ್ದುದರಲ್ಲಿ ಆಶ್ಚರ್ಯವೇನು? ಅನೇಕ ಸಾರಿ ರಾತ್ರಿಯಲ್ಲಿ ನಿದ್ದೆ ಮಾಡುವುದರ ಬದಲಾಗಿ, ತನ್ನ ಸಾರವಿಲ್ಲದ ಜೀವನದ ವಿಷಯಕ್ಕೆ ಅತಿರೇಕವಾಗಿ ಪಶ್ಚಾತ್ತಾಪ ಪಟ್ಟು, ಇಡೀ ರಾತ್ರಿಯೆಲ್ಲಾ ಅತ್ತತ್ತು, ಕಣ್ಣೀರಿನಿಂದ ತನ್ನ ಹಾಸಿಗೆಯನ್ನೆಲ್ಲಾ ತೋಯಿಸುತ್ತಿದ್ದನು. ತನ್ನಲ್ಲಿ ಅನೇಕ ಕಾಲದಿಂದಲೂ ಬಲವಾಗಿ ನೆಲೆಗೊಂಡಿದ್ದ ಆ ಲಾಲಸೆಯನ್ನು ದೇವರ ಅನುಗ್ರಹದಿಂದ ಈಗಲಾದರೂ ಸಮಾಧಾನ ಪಡಿಸಬಹುದೆಂದು ಅವನು ತಿಳಿದುಕೊಂಡಾಕ್ಷಣವೇ ಅವನ ಕಣ್ಣುಗಳಲ್ಲಿ ಆನಂದಬಾಷ್ಪಗಳು ಉದ್ಭವಿಸಿದುವು.

ಆದರೆ ರಮೇಶನಲ್ಲಿ ಇನ್ನೊಂದು ಬಯಕೆಯು ಬಲವಾಗಿ ನೆಲೆಗೊಂಡಿತ್ತು. ಅದೇನೆಂದರೆ, ಒಂದು ಕೊಲೇಜ್ ಡಿಗ್ರಿಯನ್ನು ಪಡೆಯಬೇಕೆಂದು. ಅವನ ಆ ವರೆಗಿನ ಸ್ಥಿತಿಗತಿಯಿಂದ ಸಾಧ್ಯವಾಗದೆ ಇದ್ದ ಆ

ಮಹದಾಸೆಯನ್ನು ಈಗಲಾದರೂ ಕೈಗೂಡಿಸಲಿಕ್ಕೆ ಅವನಿಗೆ ಸಾಧ್ಯ ವಾಗಿದೆಯಲ್ಲವೇ? ಇದೇ ಅವನಿಗೆ ಅಂದು ರಾತ್ರಿ ತೋರಿದ ಎರಡನೆಯ ಮನೋರಂಜಕವಾದ ದಾರಿಯು.

ಹೀಗೆಯೇ ರಮೇಶನು ತನ್ನ ಮುಂದಿನ ಸುಖಜೀವನದ ನಾನಾ ವಿಚಾರಗಳನ್ನು ಕಲ್ಪಿಸಿಕೊಂಡು, ಅವನ ಜೀವಮಾನದಲ್ಲಿ ಇನ್ನೂ ಅವನ ಪಾಲಿಗೆ ಬರಬಹುದಾದ ಸುಖವನ್ನೆಲ್ಲಾ ಆ ರಾತ್ರಿಯೇ ತನ್ನ ಮಾನಸಿಕ ರಾಜ್ಯದಲ್ಲಿ ಭೋಗಿಸಿ, ಬೆಳಕು ಯಾವಾಗಾಗುವದೋ, ಬಸ್ಸಿನಲ್ಲಿ ಕುಳಿತುಕೊಂಡು ಮಂಗಳೂರಿಗೆ ಯಾವಾಗ ತಲುಪಲಿಕ್ಕಾಗುವದೋ ವಕೀಲ ಶಾಮಸುಂದರರಾಯರಲ್ಲಿಗೆ ಹೋಗಿ ತನ್ನ ದ್ರವ್ಯವಾದ ಆ ೫೦ ಸಾವಿರ ರೂಪಾಯಿಯನ್ನು ಯಾವಾಗ ತನ್ನ ವಶ ಮಾಡಿಕೊಳ್ಳಲಿ ಕ್ಕಾಗುವುದೋ ಎಂಬ ಚಿಂತನೆಯಿಂದಲೇ ಹೇಗಾದರೂ ಮಾಡಿ, ಆ ರಾತ್ರಿಯನ್ನು ದೂಡಿದನು.

ಬೆಳಕು ಹರಿಯುತ್ತಲೇ ರಮೇಶನು ನಿಶ್ಚಯಿಸಿದ ಹಾಗೆ ಬಸ್ಸಿನಲ್ಲಿ ಪ್ರಯಾಣವನ್ನು ಬೆಳಸಿ, ಹನ್ನೊಂದು ಗಂಟೆಗೆ ಸರಿಯಾಗಿ ಮಂಗಳೂರಿಗೆ ತಲ್ಪಿದನು. ಮಂಗಳೂರಿಗೆಂದು ಹೊರಡುವ ಮುಂಚೆ, ಅವನು ಪ್ರಯಾಣದ ಉತ್ಸುಕತೆಯಿಂದ ಯಾವ ಆಹಾರವನ್ನೂ ತಕ್ಕೊಂಡಿರಲಿಲ್ಲ. ಇದರಿಂದ ಅವನು ಮಂಗಳೂರಿಗೆ ತಲ್ಪುತ್ತಲೇ ಅವನಿಗೆ ಕ್ಷುದ್ಬಾಧೆಯು ಬಹಳ ಹೆಚ್ಚಾಯಿತು. ಬಾಯಾರಿಕೆಯಿಂದಲೂ ಅವನು ಬಹಳವಾಗಿ ಬಳಲಿದನು. ಅಲ್ಲದೆ ಕಳೆದ ಇಡೀ ರಾತ್ರಿ ಅವನಿಗೆ ನಿದ್ದೆಯಿಲ್ಲದಿದ್ದುದ ರಿಂದಲೂ, ಆ ಮೇಲೆ ಅವನು ಕೈಗೊಂಡ ಬಸ್ಸಿನ ಪ್ರಯಾಣದ ದೆಸೆ ಯಿಂದಲೂ, ಅವನು ಮೈಯಲ್ಲಿ ಬಹಳ ಆಯಾಸಪಟ್ಟನು. ಆದರೆ ಒಂದು ಕಾಲು ಗಂಟೆಯ ವಿಶ್ರಾಂತಿಯನ್ನಾದರೂ ತೆಗೆದುಕೊಳ್ಳೋಣ ವೆಂದರೆ ಅಪರಿಚಿತವಾದ ಸ್ಥಳದಲ್ಲಿ ಅವನೆಲ್ಲಿಗೆ ಹೋಗಬೇಕು? ಅದೂ ಅಲ್ಲದೆ ಅವನಲ್ಲಿದ್ದ ಹಣವೆಲ್ಲವೂ ಖರ್ಚಾಗಿ ಅವನ ಕೈಯಲ್ಲಿ ಒಂದು ಕಾಸು ಕೂಡ ಇದ್ದಿಲ್ಲ. ಆದರೇನು? ಅವನು ಇನ್ನು ಸ್ವಲ್ಪ ಸಮಯ ದಲ್ಲಿಯೇ ಐವತ್ತು ಸಾವಿರ ರೂಪಾಯಿಗಳ ಒಡೆಯನಾಗುವನಲ್ಲವೇ? ಈ

ಮಹದಾಸೆಯಿಂದಲೇ ಅವನಿಗೆ ವಿಶೇಷ ಶಕ್ತಿ ಬಂದಂತಾಗಿ, ಅವನು ಕೂಡಲೇ ವಕೀಲ ಶಾಮಸುಂದರರಾಯರ ಮನೆಯನ್ನು ಹುಡುಕಿ ಕೊಂಡು ಹೋದನು. ಮಾರ್ಗದಲ್ಲಿ ಅವನಿಗೆ ಅನೇಕ ಸಾರಿ ದಾರಿ ತಪ್ಪಿ ದರೂ, ಹೇಗಾದರೂ ಮಾಡಿ ಮುಕ್ಕಾಲು ಗಂಟೆಯೊಳಗೆ ಶಾಮಸುಂದರ ರಾಯರ ಮನೆಯ ಬಾಗಿಲಿನ ಮುಂದೆ ಬಳಲುತ್ತಾ ಬಂದು ನಿಂತು ಕೊಂಡನು.

ಆದರೆ ಮನೆಯೊಳಗೆ ಹೋಗಲಿಕ್ಕೆ ರಮೇಶನಿಗೆ ಫಕ್ಕನೆ ಧೈರ್ಯ ವಾಗದೆ ಹೋಯಿತು. ಅವನ ಕಾಲುಗಳು ಕಾರಣವಿಲ್ಲದೆ ನಡುಗಲಾ ರಂಭಿಸಿದುವು. ಅವನ ಹೃದಯವು ಡಬಡಬಯೆಂದು ಶಬ್ದಮಾಡಲಾ ರಂಭಿಸಿತು. ಅವನ ಕೈಬೆರಳುಗಳು ತಣ್ಣಗಾದುವು. ಅವನ ಮುಖದಲ್ಲಿ ಬೆವರು ಯಥೇಷ್ಟವಾಗಿ ಒಂದಿಳಿಯಿತು. ಮಾತನಾಡಲಿಕ್ಕೆ ಕೂಡ ಅವನಿಗೆ ಶಕ್ತಿಬಾರದೆ ಹೋಯಿತು. ಈ ಇಡೀ ಪ್ರಕರಣವನ್ನು ಯಾರಾ ದರೂ ಒಬ್ಬ ಪೋಕರಿಯು ತನ್ನನ್ನು ಪರಿಹಾಸ್ಯಮಾಡಬೇಕೆಂಬ ದುರ್ಬುದ್ಧಿಯಿಂದ ಉಂಟುಮಾಡಿದ್ದಾನೋ ಎಂಬ ಭಯಂಕರವಾದ ಸಂಶಯವು ಅವನ ತಲೆಗೆ ಹತ್ತಿತು. ಈ ಸಂಶಯವು ಅವನಿಗೆ ಬರುತ್ತಲೇ ಅವನ ಮುಖವು ಕಾಗದದ ಹಾಳೆಯಂತೆ ಬೆಳ್ಳಗಾಯಿತು. ಕೂಡಲೇ ತನ್ನ ಜೇಬಿನಲ್ಲಿದ್ದ ಶ್ಯಾಮಸುಂದರರಾಯರ ಕಾಗದವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದನು. ಆದರೆ ಇದರಿಂದ ಅವನ ಸಂಶಯವು ಕಡಿಮೆಯಾದಂತಾ ಗಲಿಲ್ಲ. ಕಾಗದವನ್ನು ತನ್ನ ಜೇಬಿನೊಳಗೇ ಜಾಗ್ರತೆಯಿಂದಿಟ್ಟನು. ಇದೆಲ್ಲವೂ ಕಪಟನಾಟಕವಾದರೆ ತಾನು ಅಲ್ಲಿಯ ವರೆಗೆ ಹೇಗಾದರೂ ಬಂದುದಾಯಿತು. ಈ ಕಪಟನಾಟಕದ ಅಂತ್ಯವನ್ನು ನೋಡದೆ ಹಿಂತಿರುಗ ಲಾರೆನೆಂದು ರಮೇಶನು ದೃಢವಾಗಿ ಮನಸ್ಸಿನಲ್ಲಿ ನಿಶ್ಚಯಿಸಿದನು. ಮತ್ತು ಅಲ್ಲಿದ್ದೊಬ್ಬ ಹುಡುಗನನ್ನು ನೋಡಿ, 'ವಕೀಲರು ಮನೆಯಲ್ಲಿದ್ದಾರೊ?' ಎಂದು ಕೇಳಿದನು. ಹುಡುಗನು 'ಇದ್ದಾರೆ' ಎಂದು ಹೇಳಿದ ಕೂಡಲೆ ರಮೇಶನು ತನ್ನ ಹೆಸರನ್ನು ಆ ಹುಡುಗನಿಗೆ ತಿಳಿಸಿ, ತಾನು ಬಂದ ವಾರ್ತೆಯನ್ನು ವಕೀಲರಿಗೆ ತಿಳಿಸಬೇಕೆಂದು ಅವನನ್ನು ಬೇಡಿಕೊಂಡನು.

ಹುಡುಗನು ಕೂಡಲೇ ಮಾಳಿಗೆಗೆ ಹೋದನು. ಅವನ ಬರುವಿಕೆಯನ್ನೇ ನಿರೀಕ್ಷಿಸುತ್ತಾ ರಮೇಶನು ಕೆಳಕ್ಕೆ ನಿಂತನು.

ಕೊಂಚ ಸಮಯದನಂತರ ಹುಡುಗನು ಕೆಳಗೆ ಬಂದಿಳಿದನು. 'ವಕೀಲರು ಮಾಳಿಗೆಯಲ್ಲಿದ್ದಾರೆ. ನೀವು ಅಲ್ಲಿಗೆ ಹೋಗಬೇಕೆಂದು ಹೇಳಿದ್ದಾರೆ' ಎಂದು ರಮೇಶನಿಗೆ ಹೇಳಿದನು. ರಮೇಶನು ಮಾಳಿಗೆಯ ಮೆಟ್ಟಿಲುಗಳನ್ನು ಕೂಡಲೆ ಹತ್ತಿಕೊಂಡು ಮೇಲೆ ಹೋದನು.

ವಕೀಲ ಶಾಮಸುಂದರರಾಯರು ರಮೇಶನನ್ನು ಕೊಂಚ ಸಮಯ ದಿಟ್ಟಿಸಿ ನೋಡಿ, ಅವನಿಗೊಂದು ಕುರ್ಚಿಯನ್ನು ತೋರಿಸಿದರು. ರಮೇಶನು ಅದರಲ್ಲಿ ಕುಳಿತುಕೊಂಡನು. ಶಾಮಸುಂದರರಾಯರು ಬಾರಿ ಬಾರಿಗೂ ರಮೇಶನ ಮುಖವನ್ನೇ ನೋಡಿದರು, ಆದರೆ ಯಾವ ಮಾತನ್ನೂ ಆಡಲಿಲ್ಲ. ರಮೇಶನ ಕೋಮಲವಾದ ಮುಖವೂ, ವಿಶಾಲವಾಗಿದ್ದ ನಿರ್ಮಲವಾದ ಅವನ ಕಣ್ಣುಗಳೂ, ಅವನ ಎಳೆಯ ಪ್ರಾಯವೂ, ಇವುಗಳೆಲ್ಲಾ ಮಕ್ಕಳುಮರಿ ಇಲ್ಲದ ಶ್ಯಾಮಸುಂದರರಾಯರನ್ನು ವಿಶೇಷವಾಗಿ ಮರುಳುಮಾಡಿದಂತೆ ಕಂಡಿತು. ರಮೇಶನಾದರೋ ಶ್ಯಾಮಸುಂದರರಾಯರು ತನ್ನ ಕೂಡೆ ಮಾತನಾಡಲಿಕ್ಕೆ ಏತಕ್ಕೆ ಅಷ್ಟು ವಿಳಂಬಮಾಡುತ್ತಿರುವರೆಂದು ತಳಮಳಿಸಲಿಕ್ಕೆ ತೊಡಗಿದನು. ಕೊನೆಗೆ ಧೈರ್ಯವನ್ನು ತಾಳಿ, 'ನೀವು ನನ್ನನ್ನು ಇಲ್ಲಿ ಬರಬೇಕೆಂದಾಜ್ಞಾಪಿಸಿದಂತೆ ನಾನು ಈವೊತ್ತೇ ಉ—ಪುರದಿಂದ ಹೊರಟು ಬಂದಿದ್ದೇನೆ. ನಿಮ್ಮ ಕಾಗದವನ್ನು ನೋಡಿ' ಎಂದು ರಮೇಶನು ತನ್ನ ಜೇಬಿನಿಂದ ಶ್ಯಾಮಸುಂದರರಾಯರು ತನಗೆ ಬರೆದ ಕಾಗದವನ್ನು ಹೊರಗೆ ತೆಗೆದು ಮೇಜಿನ ಮೇಲಿಟ್ಟನು.

ಇದಕ್ಕೆ ಪ್ರತ್ಯುತ್ತರವಾಗಿ ಶ್ಯಾಮಸುಂದರರಾಯರು 'ನಿನ್ನ ಮುಖವು ಪ್ರಯಾಣದ ದೆಸೆಯಿಂದ ಬಹಳವಾಗಿ ಬಾಡಿಹೋಗಿದೆ. ನಾವು ಮೊದಲು ಊಟಮಾಡೋಣ. ಆಮೇಲೆ ನೀನು ಬಂದ ಕಾರ್ಯದ ವಿಷಯ ಇಷ್ಟಾನುಸಾರವಾಗಿ ಮಾತನಾಡಬಹುದು' ಎಂದು ತಂದೆಯು ಮಗನನ್ನು ಸಂತೈಸುವಂತೆ ಮೃದುಭಾಷಣದಿಂದ ರಮೇಶನಿಗೆ ಹೇಳಿದರು.

ರಮೇಶನಿಗೆ ಇದರಿಂದ ಏನೋ ಸಂಶಯ ಹುಟ್ಟಿತು. ಅವನ ಸಂದೇಹಗ್ರಸ್ತವಾದ ಮನಸ್ಸಿನ ವ್ಯಾಕುಲವು ಮತ್ತಷ್ಟು ಹೆಚ್ಚಿತು. ಕೂಡಲೇ ಕುರ್ಚಿಯಿಂದೆದ್ದು 'ನೀವು ನನಗೆ ಹೇಳಿದ ಪ್ರಕಾರ ಇಲ್ಲಿ ಬಂದಿದ್ದೇನೆ. ನಿಮ್ಮ ಮಾತುಗಳಿಂದ ನನ್ನ ಮನಸ್ಸಿನಲ್ಲಿ ವರ್ಣಿಸಲಾಗ ದಂತಹ ವ್ಯಾಕುಲವು ಉಂಟಾಗಿದೆ. ನನಗೆ ಯಥಾರ್ಥವನ್ನೇ ಹೇಳಿ. ನನ್ನ ದೊಡ್ಡ ತಂದೆಯವರು ತಮ್ಮ ಧನವನ್ನೆಲ್ಲಾ ನಿಜವಾಗಿಯೂ ನನಗೆ ಬಿಟ್ಟಿದ್ದಾರೋ ಇಲ್ಲವೋ? ನೀವು ಏನು ಹೇಳಿದರೂ ನಾನು ಅದನ್ನು ಕೇಳಲಿಕ್ಕೆ ಸಿದ್ಧನಾಗಿದ್ದೇನೆ. ಆದರೆ ದಯಮಾಡಿ ನನ್ನನ್ನು ಇಂತಹ ಭಯಂಕರವಾದ ಸಂದೇಹದಲ್ಲಿಡಬೇಡಿ!'

ಶ್ಯಾಮಸುಂದರರಾಯರು ಕೆಲವು ಸಮಯ ಆಲೋಚಿಸುವವ ರಾದರು. ಆ ಮೇಲೆ ರಮೇಶನನ್ನು ನೋಡಿ, ಹೀಗೆ ಹೇಳಿದರು:— 'ರಮೇಶಾ, ನೀನು ಇನ್ನೂ ಬಾಲಕನು. ನಾನು ನಿನಗೆ ಈಗ ಏನು ಹೇಳಿದರೂ ನೀನು ಕೇಳಲಿಕ್ಕೆ ಸಿದ್ಧನಾಗಿರುವೆ– ಎಂಬ ಅಭಯವನ್ನು ನೀನು ಕೊಟ್ಟಿರುವುದರಿಂದಲೇ ನೀನು ಬಯಸುತ್ತಿರುವ ಯಥಾರ್ಥ ವನ್ನೇ ಹೇಳುತ್ತೇನೆ. ನಾನು ಹೇಳುವುದನ್ನೆಲ್ಲಾ ಸಾವಧಾನದಿಂದ ಕೇಳು. ನಿನ್ನ ದೊಡ್ಡ ತಂದೆಯವರು ಒಂದು ವರ್ಷದ ಕೆಳಗೆ ಮುಂಬಯಿ ಯಿಂದ ಮಂಗಳೂರಿಗೆ ಬಂದಿದ್ದಾಗ, ಅವರು ತಮ್ಮ ಧನವನ್ನೆಲ್ಲಾ ನಿನ್ನ ಹೆಸರಿನಲ್ಲಿಯೇ ವೀಲುಮಾಡಿದರೆಂಬುದು ನಿಜವೇ. ಆ ವೀಲನ್ನು ನಾನೇ ಬರೆಯಿಸಿದೆನು. ವೀಲುಮಾಡುವಾಗ ತಮ್ಮ ಜೀವಮಾನದಲ್ಲಿ ಈ ಸಂಗತಿ ಯನ್ನು ನಿನಗೆ ತಿಳಿಸಬಾರದೆಂದು ಅವರು ನನಗೆ ಆಜ್ಞಾಪಿಸಿದ್ದರು. ಆದುದರಿಂದ ನಾನು ಇಷ್ಟರವರೆಗೆ ಅದರ ವಿಷಯವಾಗಿ ಮೌನವನ್ನು ತಾಳಿಕೊಳ್ಳಬೇಕಾಯಿತು. ನೀನು ಹಣದ ಸಹಾಯವಿಲ್ಲದೆ ಅಷ್ಟು ಬಳಲುತ್ತಿರುವಾಗ ಕೂಡ, ನಾನು ನಿನ್ನ ವಿಷಯ ಮನಸ್ಸಿನಲ್ಲೇ ನೊಂದು ಕೊಂಡು ಸುಮ್ಮನಿರಬೇಕಾಗಿತ್ತು. ಆದರೂ ನಿನಗೆ ತಿಳಿಯದಂತೆ ನಿನಗೆ ಕೆಲಸವಾಗುವ ಮೊದಲು ನನ್ನಿಂದಾಗುವಷ್ಟು ಸಹಾಯವನ್ನು ನಿನಗೆ ಆಗಾಗ ಮಾಡುತ್ತಿದ್ದೆನು......'

ರಮೇಶನ ಮುಖವು ಅತ್ಯಾಶ್ಚರ್ಯವನ್ನು ಸೂಚಿಸಿತು.

'.... ಮೊನ್ನೆ ನಿನ್ನ ದೊಡ್ಡತಂದೆಯವರು ತೀರಿಹೋದ ಸಂಗತಿಯು ನನಗೆ ತಿಳಿದಾಕ್ಷಣವೇ ನನ್ನ ಕರ್ತವ್ಯದಂತೆ ಆ ವೀಲಿನ ಸಂಗತಿಯನ್ನು ನಿನಗೆ ತಿಳಿಸಿದೆನು....ಆದರೆ....'

'ಆದರೇನು?....ದಯಮಾಡಿ ಬೇಗನೆ ಹೇಳಿ!'

'ಆದರೆ ಅವರು ತೀರಿಹೋಗುವ ಸ್ವಲ್ಪ ಸಮಯದ ಮುಂಚೆ ಅವರು ಆ ವೀಲನ್ನು ರದ್ದುಪಡಿಸಿ, ಇನ್ನೊಂದು ವೀಲನ್ನು ಬರೆದಿಟ್ಟ ಸಂಗತಿಯು ನನಗೆ ನಿನ್ನೆ ಸಂಜೆ ಮಾತ್ರ ತಂತಿಯ ಮೂಲಕ ತಿಳಿದು ಬಂತು. ತತ್ಕ್ಷಣವೇ ಈ ಸಂಗತಿಯನ್ನು ನಿನಗೆ ತಿಳಿಸಿ, ನೀನು ಇಲ್ಲಿ ಬರುವುದು ಅನಾವಶ್ಯಕವೆಂದು ನಿನಗೆ ತಂತಿಯನ್ನು ಬಿಟ್ಟೆನು. ದುರ್ದೈವವಶಾತ್ ಆ ತಂತಿಯು ನಿನಗೆ ಸಿಕ್ಕಲಿಲ್ಲವೆಂದು ಕಾಣುತ್ತದೆ....'

'ಇಲ್ಲ....ಸಿಕ್ಕಲಿಲ್ಲ....ಇಲ್ಲದಿದ್ದರೆ..ಇಲ್ಲಿಗೆ ಬರುತ್ತಿದ್ದಿಲ್ಲ. ....ಆ ಬೇರೆ ವೀಲಿನಲ್ಲಿ ಏನಿದೆ ಎಂದು ತಿಳಿದಿರುತ್ತದೋ?'

'ಅವರ ಎಲ್ಲಾ ಧನವನ್ನು ಮಂಗಳಾದೇವಿ ದೇವಸ್ಥಾನಕ್ಕೆ ಬಿಟ್ಟಿದ್ದಾರೆಂದು.'

'ಈ ಬೇರೆ ವೀಲಿನಲ್ಲಿ....ಸಂಶಯಗಳೇನಾದರೂ....ಇಲ್ಲವೇನು?' ರಮೇಶನ ಸ್ವರವು ಒಂದು ಪ್ರೇತದಿಂದ ಹೊರಡುವಂತೆ ತೋರಿಬಂತು.

'ಇಲ್ಲ, ಅಂತಹ ಸಂಶಯಗಳಿಗೆ ಯಾವ ಆಸ್ಪದವೂ ಇಲ್ಲ.'

ತತ್ಕ್ಷಣವೇ ರಮೇಶನಿಗೆ ಲೋಕವೆಲ್ಲವೂ ಅಂಧಕಾರಮಯವಾಯಿತು. ಆಕಾಶಕ್ಕೆ ಎಸೆದ ಕಲ್ಲನ್ನು ಭೂಮಿಯು ಆಕರ್ಷಿಸುವಂತೆ, ತುದಿ ಅಡಿ ಇಲ್ಲದ ಪಾತಾಳವು ರಮೇಶನನ್ನು ಕೆಳಗೆ-ಕೆಳಗೆ-ಕೆಳಗೆ-ಎಳೆದುಕೊಳ್ಳುವಂತೆ ಅವನಿಗೆ ತೋರಿಬಂತು. ಕುರ್ಚಿಯಲ್ಲಿ ಕುಳಿತಿದ್ದಾಗಲೇ ಅವನ ದೇಹವು ಹಿಂದೆ ಮುಂದೆ ಎರಡು ಮೂರು ಸಲ ಆಂದೋಳಿಸಿ, ದೊಪ್ಪನೆ ನೆಲದ ಮೇಲೆ ಬಿತ್ತು. ಶ್ಯಾಮಸುಂದರರಾಯರು ಕೂಡಲೇ ರಮೇಶನು ಬಿದ್ದಕಡೆಗೆ ಬಂದು, ಅವನನ್ನು ಪರೀಕ್ಷಿಸಿ ನೋಡಿದರು. ಶಾಂತವಾದ ಆ ಶರೀರದಲ್ಲಿ ಪ್ರಾಣದ ಚಿಹ್ನೆಯು ಯಾವುದೂ ಕಂಡು ಬರಲಿಲ್ಲ.

---



" ಅವನ ದೇಹವು ಹಿಂದೆಮುಂದೆ ಎರಡು ಮೂರು ಸಲ ಹೊಯ್ದಾಡಿ ನೆಲದ ಮೇಲೆ ಬಿತ್ತು. "

## ಆತ್ಮಹತ್ಯೆ

ಇಹಪರದಲ್ಲಿ ನನ್ನ ಸುಖದುಃಖಗಳಿಗೆ ಸಹಭಾಗಿಯಾಗಬೇಕೆಂದು ಹಿಂದು ಮುಂದು ನೋಡದೆ ನನ್ನ ಕೈಹಿಡಿದಿದ್ದ ನನ್ನ ಕೇಸರಿಯನ್ನು ಕರಕೊಂಡು 'ದೇವೀಪ್ರಸಾದ ನಾಟಕ ಮಂಡಳಿ'ಯ ದಿವ್ಯವಾದ ರಂಗ ಭವನವನ್ನು ಪ್ರವೇಶಿಸಿದೆನು. ಎರಡೆರಡು ರೂಪಾಯಿಗಳ ಟಿಕೆಟು ಗಳನ್ನು ಪಡಕೊಂಡಿದ್ದರಿಂದ ರಂಗಭವನದ ಮುಂದಿನ ಸೀಟುಗಳಲ್ಲಿ ನಮಗೆ ಒಟ್ಟಿಗೆ ಕೂತುಕೊಳ್ಳಲಿಕ್ಕೆ ಅನುಕೂಲವಾಯಿತು. ಹಾಗೆ ಕೂತುಕೊಂಡ ಕೂಡಲೆ ನಾನು ಸುತ್ತುಮುತ್ತಲೂ ನೋಡಿದೆನು.

'ಆಹಾ, ಎಷ್ಟು ಜನರು! ಎಲ್ಲಿ ನೋಡಿದರೂ ಪ್ರೇಕ್ಷಕರ ತಲೆ ಗಳು. ಒಂದು ಸಾವಿರ ರೂಪಾಯಿಗಳನ್ನಾದರೂ ಕಂಪನಿಯವರು ಇಂದು ಹೊಡೆದಿರಬೇಕು.' ಎಂದೆನು.

ಕೇಸರಿಯ ದೃಷ್ಟಿಯು ಸಹಜವಾಗಿ ಹೆಂಗಸರು ಕೂತುಕೊಂಡ ಲ್ಲಿಗೆ ಹೋಯಿತು. ಅವಳ ವಿಚಾರಲೋಕವೇ ಬೇರೆ. 'ಎಷ್ಟು ಚಲೋ ದಾದ ಸೀರೆಗಳು!' ಎಂದಳು.

'ಆಶ್ಚರ್ಯವೇನು? ಇಡೀ ಮಂಗಳೂರು ತನ್ನ ಹೆಂಡತಿಯನ್ನು ಕರೆದುಕೊಂಡು ಬಂದಿದೆ' ಎಂದೆನು.

'ದೇವೀಪ್ರಸಾದ ನಾಟಕ ಮಂಡಳಿ'ಯ ನಾಟಕಗಳು ವಿಶೇಷ ಪ್ರಖ್ಯಾತಿಯನ್ನು ಹೊಂದಿದ್ದವು. ಆದರೆ ಅವರು ಆಡಿದ ಹೆಚ್ಚಿನ ನಾಟಕ ಗಳು ಪುರಾತನ ರೀತಿಗಳನ್ನು ಅನುಸರಿಸಿದ್ದವು. ನವೀನ ನಾಟಕ ಪ್ರಿಯ ನಾದ ನನಗೆ ಅವುಗಳು ಅಷ್ಟೇನೂ ರುಚಿಸಿರಲಿಲ್ಲ. ಅವರು ಒಂದಾದರೂ ನವೀನ ರೀತಿಯ ಸಾಮಾಜಿಕ ನಾಟಕವನ್ನು ಆಡಿತೋರಿಸಬೇಕೆಂದು ನನಗೆ ಬಹಳ ಆಸೆಯಿತ್ತು. ನನ್ನ ಈ ಆಸೆಯು ಅವರ ತಿಳುವಳಿಕೆಗೆ

ಬಂತೋ ಇಲ್ಲವೋ ನನಗೆ ಗೊತ್ತಿಲ್ಲ. ಕೆಲವು ದಿನಗಳಲ್ಲಿಯೇ ತಾವು ಒಂದು ನವೀನ ಸಾಮಾಜಿಕ ನಾಟಕವನ್ನು ಆಡಿತೋರಿಸುವೆವು ಎಂದು ಅವರು ಪ್ರಸಿದ್ಧಿಗೊಳಿಸಿದರು. ನನ್ನ ಆನಂದಕ್ಕೆ ಪಾರವೇ ಇಲ್ಲದಂತಾ ಯಿತು. ಸಿಕ್ಕಿಸಿಕ್ಕಿದವರನ್ನು ದಾರಿಯಲ್ಲಿ ನಿಲ್ಲಿಸಿ 'ನೀವು ಅಗತ್ಯವಾ ಗಿಯೂ ಈ ನವೀನ ನಾಟಕಕ್ಕೆ ಬರಬೇಕು' ಎಂದು ಹೇಳಿದೆನು. ಕಂಪನಿ ಯವರಿಗೆ ನನ್ನ ಈ ಉತ್ಸಾಹವು ತಿಳಿದುಬರುತ್ತಿದ್ದರೆ ಅವರು ತಮ್ಮ ನಾಟಕಗಳಿಗೆಲ್ಲ ನನಗೊಂದು ಸೋಫಾದ ಫ್ರೀ ಪಾಸು ಕಳುಹಿಸಿಕೊಡು ತ್ತಿದ್ದರೋ ಏನೊ! ಆದರೆ ಅವರಿಗೆ ನನ್ನ ಈ ಉತ್ಸಾಹವು ತಿಳಿದು ಬರ ಲಿಲ್ಲವೆಂದು ಕಾಣುತ್ತದೆ. ನಾನು ಹಣಕೊಟ್ಟೇ ಆ ನಾಟಕಕ್ಕೆ ಕೇಸರಿ ಯನ್ನೂ ಕರಕೊಂಡು ಹೋಗುವ ಪ್ರಸಂಗ ಬಂತು.

'ಕೇಸರೀ, ನೀನು ಭಯಪಡಲಿಕ್ಕಿಲ್ಲವೇನು?'

'ಯಾಕೆ?'

'ಈ ನಾಟಕವು ಭಯಂಕರದ್ದಾಗಿರಬೇಕು. 'ಆತ್ಮಹತ್ಯ'ವಂತೆ, ತುಂಬಾ ಶೋಕರಸದಿಂದ ಕೂಡಿದ್ದಿರಬೇಕು....'

'ನಿಮ್ಮ ಈ ನವೀನ ನಾಟಕಗಳ ಹಣೆಬರಹವೇ ಅದು. ಕಳೆದ ವರ್ಷ 'ಏಕಚಪ್ಯಾಲಾ'ಗೆ ಹೋಗಿ ದುಡ್ಡು ಕೊಟ್ಟು ಮೂರು ಗಂಟೆಗಳ ವರೆಗೆ ಅತ್ತಂತಾಯಿತು. ಈ ನಾಟಕವು ಹಾಗೇ ಆಗಿರಬೇಕೆಂದು ತೋರುತ್ತದೆ. ಇರಲಿ, ನಿಮ್ಮ ಕೈವಸ್ತ್ರವನ್ನಾದರೂ ಇತ್ತಲಾಗೆ ಕೊಡಿ.'

ಕೇಸರಿಯು ಹೀಗೆ ಗುಣಗುಟ್ಟುವದನ್ನು ನೋಡಿ ನನಗೆ ಸ್ವಲ್ಪ ನಗು ಬಂತು. 'ನೀನು ದುಡ್ಡು ಕೊಟ್ಟು ಅಳಬಾರದೆಂತಲೋ ಮೊನ್ನೆ 'ಹರಿಶ್ಚಂದ್ರ' ನಾಟಕಕ್ಕೆ ಹಟ ಹಿಡಿದು ಹೋದದ್ದು?' ಎಂದು ಕೇಳಿದೆನು.

'ಹರಿಶ್ಚಂದ್ರ ನಾಟಕವು ಶೋಕರಸದಿಂದ ತುಂಬಿದ್ದರೇನು? ಅಂತ್ಯ ದಲ್ಲಿಯಾದರೂ ಆತ್ಮಕ್ಕೆ ಶಾಂತಿಯುಂಟಾಗುತ್ತದೆ. ಆದರೆ ನಿಮ್ಮ ಈ ನವೀನ ನಾಟಕಗಳಲ್ಲಿ....'

ಕೇಸರಿಗೆ ಆಗಲೇ ನಾಟಕ ಕಲೆಯ ವಿಷಯವಾಗಿ ಒಂದು ದೊಡ್ಡ

ಭಾಷಣವನ್ನು ಕೊಡಬೇಕೆಂದಿದ್ದೆನು. ಆದರೆ ಆವಳ ಮಾತು ಮುಗಿಯು ವಷ್ಟರೊಳಗೆ ರಂಗಸ್ಥಳದೊಳಗಿನಿಂದ ಮೂರನೆಯ ಬಾರಿಗೆ ಗಿಣಿಗಿಣಿ ಘಂಟೆಯಾಯಿತು. ನಾಟಕ ಶಾಲೆಯೊಳಗೆಲ್ಲ ನಾಟಕ ಪ್ರಾರಂಭವಾಯಿ ತೆಂದು ಆ ಕ್ಷಣವೇ ನಿಶ್ಶಬ್ದ ದೇವಿಯು ವ್ಯಾಪಿಸಿಕೊಂಡಳು. (ನಿಶ್ಶಬ್ದ ವನ್ನು 'ದೇವಿ' ಎಂದು ನಮ್ಮ ಬರಹಗಾರರು ಯಾಕೆ ಸಂಬೋಧಿಸು ವರೊ, ನನಗೆ ತಿಳಿಯದು. ನಿಶ್ಶಬ್ದದಲ್ಲಿರುವ ದೇವಿಯರನ್ನು ನಾನು ಇನ್ನೂ ನೋಡಬೇಕಷ್ಟೆ.)

ಅಂಕದ ಪರದೆಯು ಮೇಲಕ್ಕೇರಿತು.

'ನಾಂದಿಯು ಕೂಡ ಇಲ್ಲವೇ?' ಎಂದು ಕೇಸರಿ ಕೇಳಿದಳು.

'ಇಲ್ಲ, ನಾಂದಿಯು ಇರುವುದು ಹರಿಶ್ಚಂದ್ರ ನಾಟಕಕ್ಕೆ' ಎಂದು ಸ್ವಲ್ಪ ನಿರ್ದಾಕ್ಷಿಣ್ಯದಿಂದ ಉತ್ತರ ಕೊಟ್ಟೆನು.

ಎಷ್ಟು ಸೊಗಸಾದ ದೃಶ್ಯವು! ಎಷ್ಟು ಸಹಜವಾದುದು! ಒಂದು ಗುಡಿಸಲಿನೊಳಗಿರುವ ಒಂದೇ ಒಂದು ಕೊಠಡಿಯೆಂದು ಬೋಧೆಯಾ ಯಿತು. ಗುಡಿಸಲಿಗೆ ಹಿಂದುಗಡೆಯಿಂದ ಒಂದು ಬಾಗಿಲು ಇತ್ತು. ಬಾಗಿಲು ಮುಚ್ಚಲ್ಪಟ್ಟಿತ್ತು. ಮೇಲಿನಿಂದ ಮಾಡಿನ ಹುಲ್ಲು ಕೂಡ ಕಾಣ ಬರುತ್ತಿತ್ತು. ಒಂದು ಮೂಲೆಯಲ್ಲಿ ಒಲೆಯೂ, ಮಣ್ಣಿನ ಪಾತ್ರೆಗಳೂ ಇದ್ದುವು. ನವೀನ ನಾಟಕ ಪ್ರಿಯನಾದ ನನಗೆ ಇಂತಹ ವಾಸ್ತವಿಕ ದೃಶ್ಯವನ್ನು ನೋಡಿ ಮನಸ್ಸಿನಲ್ಲಿ ವಿಶೇಷ ಆಹ್ಲಾದವುಂಟಾಯಿತು.

'ನೋಡಿದೆಯಾ! ಎಷ್ಟು ಸಹಜವಾಗಿದೆ ದೃಶ್ಯವು!' ಎಂದೆನು.

ಕೇಸರಿಯು 'ಹೂಂ' ಎಂದಳು.

ಕೊಠಡಿಯಲ್ಲಿ ಯಾರೂ ಇಲ್ಲ.— ತಪ್ಪಾಯಿತು! ಆ ಮೂಲೆಯಲ್ಲಿ ಏನೋ ಬಿದ್ದುಕೊಂಡಿರುತ್ತದೆ. ಏನಾಗಬಹುದು? ತಿಳಿಯಿತು, ಒಂದು ಮುದುಕಿ! ಹಾಸಿಗೆಯಲ್ಲಿ ಮಲಗಿಕೊಂಡಿದ್ದಾಳೆ. ಅವಳ ಕೂದಲು ಬಿಳುಪಾಗಿದೆ. ಮುಖವು ಒಣಗಿದ ಖರ್ಜೂರದಂತಿದೆ. ಆದರೆ, ಅಬ್ಬಬ್ಬ, ಅವಳ ಕಣ್ಣುಗಳೇ! ಎಷ್ಟು ತೀಕ್ಷ್ಣವಾಗಿವೆ! ಮುಖದಲ್ಲಿ ಹೇಗೆ ತಿರುಗುತ್ತವೆ!

'ನಾಟಕದ ಕಥೆ ಏನೆಂದು ನಿಮಗೆ ಗೊತ್ತಿದೆಯೇ?' ಎಂದು ಕೇಸರಿಯು ಕೇಳಿದಳು.

'' ಇಲ್ಲ, ಗೊತ್ತಿಲ್ಲ. ನೋಟೀಸಿನಲ್ಲಿಯೂ ಇಲ್ಲ. ಆದರೆ ಚಲೋದಾಗಿರಬೇಕು; ನೋಡೋಣ.' ಎಂದೆನು.

ಮುದುಕಿಯು ಆಗಾಗ್ಗೆ ಬಾಗಿಲಿನ ಕಡೆಗೆ ನೋಡುತ್ತಾಳೆ. ಅವಳ ಮುಖದಲ್ಲಿ ಒಂದು ವಿಶೇಷ ತರದ ವ್ಯಾಕುಲತೆಯು ತೋರಿಬರುತ್ತದೆ.

'ನೋಡು, ಕೇಸರಿ, ಬಾಗಿಲಿನ ಕಡೆಗೆ ನೋಡು. ಈಗ ಯಾರೋ ಒಳಗೆ ಬರುವಂತಿದೆ.'

ಅಷ್ಟರೊಳಗೆ ಬಾಗಿಲಿನ ಹಿಂದುಗಡೆಯಿಂದ ಒಂದು ಹಾಡು ಕೇಳಿ ಬಂತು. ಆದರೆ ಹಾಡಿಗೆ ಹಾರ್ಮೋನಿಯಮ್ ಸ್ವರದ ಜೋಡಣೆ ಇರಲಿಲ್ಲ. ಇದನ್ನು ನೋಡಿ ನಾಟಕಕ್ಕೆ ಸಂಗೀತ ಅಗತ್ಯವಿಲ್ಲ ಎಂಬ ಮತವನ್ನು ಅವಲಂಬಿಸಿದ ನನಗೆ ಪರಮಾನಂದವಾಯಿತು. ಏಕೆಂದರೆ ಆ ವ್ಯಕ್ತಿಯು ಹಾಡುತ್ತಿರುವ ಹಾಡು ಸಹಜವಾದ ಹಾಡಾಗಿತ್ತು. ಮಧ್ಯರಾತ್ರಿಯಲ್ಲಿ ಒಬ್ಬಂಟಿಗನಾಗಿಯೇ ಮನೆಗೆ ಬರುವಾಗ ಮಾರ್ಗದಲ್ಲಿ ಹಾಡುವ ಹಾಡಿಗೆ ಹಾರ್ಮೋನಿಯಮ್ ಸ್ವರವನ್ನು ಜೋಡಿಸುವುದು ಸಾಧ್ಯವೇ? ಅಂತಹ ಹಾಡು ಇದಾಗಿತ್ತು. ಸ್ವಲ್ಪ ತಾಳಿ... ಹಾಡು ನಿಂತಿತು...ಕೆಮ್ಮು ಜೋರಾಯಿತು....ಕೆಮ್ಮು ನಿಂತಿತು, ಹಾಡು ಜೋರಾಯಿತು.... ಕೆಮ್ಮು....ಹಾಡು....ಹಾಡು ಇದ್ದದ್ದು——ಇದೇನು?—— ಕೂಗು ಆಯಿತು....ಕೂಗು ಇದ್ದದ್ದು ಹಾಡು ಆಯಿತು.... ಹಾಡು...ಕೂಗು...ಕೆಮ್ಮು....ಹಾಡು.... ಇಂತಹ ಹಾಡಿಗೆ ಯಾವ ಹಾರ್ಮೋನಿಯಮ್ ಸ್ವರದ ಜೋಡಣೆಯು ಸಾಧ್ಯವು?

ಕೇಸರಿಯು ಬೆರಗಾದಳು. ನಾನು ಕುತೂಹಲದಿಂದ ಕೂತೆನು.

ಮೆಲ್ಲಮೆಲ್ಲಗೆ ಗುಡಿಸಲಿನ ಬಾಗಿಲು ತೆರೆಯಿತು. ಮುದುಕಿಯು ತನ್ನ ಜೀವವನ್ನೆಲ್ಲ ತನ್ನ ಕಣ್ಣುಗಳಲ್ಲಿರಿಸಿಕೊಂಡು ಬಾಗಿಲಿನ ಕಡೆಗೆ ನೋಡಿದಳು. ಬಾಗಿಲಿನಿಂದ ಒಂದು ಆಜಾನುಬಾಹುವಾದ ವ್ಯಕ್ತಿಯು ಕೆಮ್ಮುತ್ತಾ, ಹಾಡುತ್ತಾ, ಕೂಗುತ್ತಾ, ನಾನಾವಿಕಾರಗಳನ್ನು

ಮಾಡುತ್ತಾ ಕೊಠಡಿಯೊಳಗೆ ಬಂದುಬಿಟ್ಟಿತು. ವ್ಯಕ್ತಿಯು ಉಟ್ಟುಕೊಂಡಿದ್ದ ಧೋತರದ ತುಂಡು ಮೈಲಿಗೆಯಿಂದ ತುಂಬಿತ್ತು. ಹಾಕಿಕೊಂಡಿದ್ದ ಅಂಗಿಯು ಹರುಕುಮುರುಕಾಗಿದ್ದಿತು. ಅವನೊಬ್ಬ ಕೂಲಿ ಕೆಲಸದವನು ಎಂದು ತಿಳಿದು ಬಂತು. ನೋಡಲಿಕ್ಕೆ ಯುವಕನಾಗಿದ್ದನು. ಆದರೆ..ಆದರೆ..ಅವನ ದೇಹವು ಅವನ ಸ್ವಾಧೀನದಲ್ಲಿರಲಿಲ್ಲ.... ಮದ್ಯದ ಅಮಲಿನ ಗಾಢಾಲಿಂಗನದಲ್ಲಿದ್ದನು.

ಸಭಿಕರು ಅವನನ್ನು ನೋಡಿದ ಕೂಡಲೇ ಒಮ್ಮತದಿಂದ ಚಪ್ಪಾಳೆ ಹಾಕಿದರು. ಏಕೆಂದರೆ ಅವನೇ ಇಡೀ ದಕ್ಷಿಣ ಕನ್ನಡ ಜಿಲ್ಲೆಯ ಪ್ರೇಕ್ಷಕ ವೃಂದದ ಮೆಚ್ಚುಗೆಯನ್ನು ಸೂರೆಗೊಂಡಿದ್ದ ಪ್ರಖ್ಯಾತ ನಟಶಿರೋಮಣಿಯಾದ ವಿಶ್ವೇಶ್ವರರಾಯನಾಗಿದ್ದನು! ಅವನ ಕುಡಿಕನ ನಟನೆಯು ನಮಗೆ ಯಾವಾಗಲೂ ಮೆಚ್ಚುಗೆಯಾದುದೇ.

ಕುಡಿಕನ ಕೆಮ್ಮು ನಿಂತಿಲ್ಲವಾದರೂ ಹಾಡು ನಿಂತಿತು. ಆದರೆ ಹಾಡು ನಿಂತರೆ ಮಾತು ಹೊರಟಿತು. ಮಾತಿನೊಂದಿಗೆ ಅರ್ಥವಿಲ್ಲದ ನಗೆಯು ಪ್ರಾರಂಭಿಸಿತು. ನಗೆಯೊಡನೆ ಬೈಗಳೂ ಬಂದುವು. ಆದರೆ ಇದೇನು? ಮುದುಕಿಯು ಮಲಗಿದ್ದಲ್ಲಿಂದ ಸ್ವಲ್ಪವಾದರೂ ಕದಲುವುದಿಲ್ಲವಲ್ಲ? ಮದ್ಯದ ವಶನಾದ ತನ್ನ ಮಗನನ್ನು ಸುಮ್ಮನೆ ಬಿರಬಿರನೆ ನೋಡುತ್ತಾಳಷ್ಟೆ. ಅವನಾದರೋ ತನ್ನ ನಾಲಗೆಯ ಲಗಾಮನ್ನು ತೀರಾ ಸಡಿಲುಬಿಟ್ಟಿರುವನು. ಆದರೆ ಇಲ್ಲ, ಅವಳು ಸುಮ್ಮನೆ ಇಲ್ಲ—ಮಲಗಿದ್ದಲ್ಲಿಂದಲಾದರೂ ಏನೋ ಮಾತನಾಡುತ್ತಾಳೆ; ಅವನಿಗೆ ಸಾಕಷ್ಟು ಬುದ್ಧಿವಾದವನ್ನು ಮೆಲ್ಲಮೆಲ್ಲಗೆ ಹೇಳುತ್ತಾಳೆ. ಆದರೆ ಅವಳು ಸ್ವಲ್ಪವಾದರೂ ಕದಲುವುದಿಲ್ಲ. ಏಕೆ? ಅವಳಿಗಾದ ಕಾಯಿಲೆಯು ಏನಾಗಿರಬಹುದು.

'ಬಹುಶಃ, ಕೇಸರೀ, ಅವಳ ಕಾಯಿಲೆಯು ಪಕ್ಷವಾತವೆಂದು ತೋರುತ್ತದೆ. ಇಲ್ಲದಿದ್ದರೆ ಅವಳ ಮಗನು ಇಂತಹ ಸ್ಥಿತಿಯಲ್ಲಿ ಮನೆಗೆ ಬಂದಿದ್ದರೂ ಅವಳು ಸ್ವಲ್ಪವಾದರೂ ಕದಲದೆ ಮಲಗಿದ್ದಲ್ಲೇ ಇರುತ್ತಿದ್ದಳೇ?'

ಕುಡಿಕನ ಪೀಕಲಾಟವು ಹೆಚ್ಚೆಚ್ಚಾಗುತ್ತಾ ಬಂತು. ಒಲೆಯ ಮೇಲಿದ್ದ ಮೂರು ಮಣ್ಣಿನ ಪಾತ್ರೆಗಳು ಚೂರುಚೂರಾಗಿ ನೆಲದ ಮೇಲೆ ಬಿದ್ದುವು.

'ಮಣ್ಣಿಗೆ ಮಣ್ಣು ಕೂಡಿತು' ಎಂದು ಕೇಸರಿಯು ಹೇಳಿದಳು.

ಒಡೆದ ಪಾತ್ರೆಗಳನ್ನು—ಪಾತ್ರೆಗಳ ಚೂರುಗಳನ್ನು ಎಂದು ನಾನು ಹೇಳಬೇಕು—ನೋಡಿದ ಕೂಡಲೆ ಮುದುಕಿಯು ತನ್ನ ನಾಲಿಗೆಯನ್ನು ಒಮ್ಮೆಯೇ ಸಡಿಲುಬಿಟ್ಟಳು. ಅವಳ ಕರ್ಕಶವಾದ ಧ್ವನಿಯು ಇಡೀ ನಾಟಕ ಶಾಲೆಯೊಳಗೆ ತುಂಬಿಹೋಯಿತು.

'ಅವಳಿಗೆ ಪಕ್ಷವಾತವಾಗಿದ್ದರೂ ಅವಳ ನಾಲಿಗೆಗೆ ಪಕ್ಷವಾತವಾಗಿಲ್ಲವೆಂದು ತೋರುತ್ತದೆ' ಎಂದು ಕೇಸರಿಯು ಹೇಳಿದಳು.

'ಹೌದು, ಹಾಗೆಯೇ ತೋರುತ್ತದೆ' ಎಂದೆನು.

ಮುದುಕಿಯ ನಾಲಿಗೆಯ ನಾಗಾಲೋಟದ ಮುಂದೆ ಅವಳ ಮಗನ ನಾಲಿಗೆಯ ಓಟವು ಕಡಿಮೆಯಾಯಿತು. ಅವನ ತಲೆಗೆ ಏರಿದ್ದ ಅಮಲಿನ ಪ್ರಭಾವವು ಮೆಲ್ಲಮೆಲ್ಲಗೆ ಇಳಿಯುವಂತೆ ತೋರಿತು. ಇಲ್ಲಿ ವಿಶ್ವೇಶ್ವರರಾಯನು ತನ್ನ ಆತ್ಮವನ್ನೆಲ್ಲ ತನ್ನ ನಟನೆಯ ಶಕ್ತಿಯಲ್ಲಿ ಹೊಯಿದುಬಿಟ್ಟನು. ಅಮಲಿನ ಪೂರ್ಣ ವಶನಾದವನು ಶತಪ್ರಯತ್ನಗಳಿಂದ ಅಮಲಿನ ಗಾಢಾಲಿಂಗನದಿಂದ ಬಿಡಿಸಿಕೊಂಡು ಮೆಲ್ಲಮೆಲ್ಲನೆ ಸಹಜಾವಸ್ಥೆಗೆ ಬರುವ ನಟನೆಯನ್ನು ಅತ್ಯದ್ಭುತಕರವಾಗಿ ತೋರಿಸಿ ಬಿಟ್ಟನು. ಕೂಡಲೇ ಪ್ರೇಕ್ಷಕರ ಕೈಚಪ್ಪಾಳೆಯು ಜೇಷ್ಠಮಾಸದ ಗುಡುಗಿನಂತೆ ಪರಿಣಮಿಸಿತು.

ನಾನು ಆನಂದಮಯನಾದೆನು. 'ಕೇಸರಿ, ಇದು ಹೇಗೆ?' ಎಂದೆನು. ಕೇಸರಿಯು ತನ್ನ ಕಣ್ಣಿನಲ್ಲಿ ಆಗ ತಾನೆ ಜಿನುಗುತ್ತಿದ್ದ ನೀರಿನ ಒಂದು ತಟಕನ್ನು ಒರಸಿಕೊಂಡಳು.

ಆದರೆ ವಿಶ್ವೇಶ್ವರರಾಯನ ನಟನೆಯ ಚಾತುರ್ಯವು ಇಲ್ಲಿಗೇ ಮುಗಿಯಲಿಲ್ಲ. ಮುದುಕಿಯ ನಾಲಿಗೆಯು ಬೆಳೆದಾಗಲೆಲ್ಲ ಅವನ ಮುಖದಲ್ಲಿ ಪಶ್ಚಾತ್ತಾಪದ ಚಿಹ್ನೆಗಳು ಬೆಳೆಯಲಾರಂಭಿಸಿದವು. ತನ್ನ ಮೇಲೆ



‘‘ಕುಡಿಕನು ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡು ಸುತ್ತುಮುತ್ತಲೂ ಬಿರಬಿರನೆ ನೋಡಿದನು.’’

ಸಂಪೂರ್ಣವಾಗಿ ಆಧರಿಸಿಕೊಂಡಿದ್ದ, ಆದರಲ್ಲಿಯೂ ಅಸ್ವಸ್ಥದಲ್ಲಿ ನರಳು ತ್ತಿದ್ದ, ತನ್ನ ಮುದಿ ತಾಯಿಯು ಮನೆಯಲ್ಲಿರುವಾಗ್ಗೆ ತಾನು ತನಗೆ ಸಿಕ್ಕಿದ ಎರಡು ಕಾಸುಗಳನ್ನು ಕೂಡ, ಆ ಹಾಳು ಮದ್ಯಕ್ಕೋಸ್ಕರ ವೆಚ್ಚ ಮಾಡಿ, ತನ್ನ ಮಾನುಷತ್ವವನ್ನೇ ಕಳೆದುಕೊಳ್ಳುತ್ತೇನಲ್ಲ! ಪಶು ಸಮಾನನಾದ ತನ್ನಂತಹ ಮಗನಿದ್ದು ಅವಳಿಗೇನು ಪ್ರಯೋಜನ? ತಾನು ಬದುಕಿ ಫಲವಿಲ್ಲ. ಸಾಯುವುದೇ ಲೇಸು, ಎಂಬ ಇವೇ ಮೊದಲಾದ ಭಾವನೆಗಳನ್ನು ವಿಶ್ವೇಶ್ವರರಾಯನು ನಮ್ಮ ಹೃದಯವು ಒಡೆಯುವಂತೆ ತನ್ನ ಮುಖದಲ್ಲಿ ವ್ಯಕ್ತಗೊಳಿಸಿದನು. ತನ್ನ ತಲೆಯನ್ನು ಎರಡೂ ಕೈಗ ಳಿಂದ ಒತ್ತಿ ಹಿಡಿದುಕೊಂಡನು. ಫಕ್ಕನೆ ಅಲ್ಲಿಯೇ ಕುಳಿತುಕೊಂಡು ಮುದುಕಿಯನ್ನು ಏಕದೃಷ್ಟಿಯಿಂದ ನೋಡಿದನು. ಕೂಡಲೇ ಬಿಕ್ಕಿಬಿಕ್ಕಿ ಅಳಲಾರಂಭಿಸಿದನು. ಇದನ್ನು ನೋಡಿದಾಗ ಮುದುಕಿಯ ನಾಲಿಗೆಯು ಬಿಗಿಯಾಯಿತು.

ಕೇಸರಿಯು ನನ್ನ ಕೈಯನ್ನು ಮುಟ್ಟಿದಳು. 'ನೋಡಿ, ಕುಡಿಕನು ಫಕ್ಕನೆ ಎದ್ದಿರುವನು. ಅವನು ಈಗೇನು ಮಾಡುವನು?'

'ಗೊತ್ತಿಲ್ಲ. ಕೋಣೆಯ ಸುತ್ತುಮುತ್ತಲೂ ನೋಡುತ್ತಾನೆ... ಅವನಿಗೆ ಏನೋ ಬೇಕಾಗಿದೆ......ಆಹಾ, ಕೋಣೆಯನ್ನು ಬಿಟ್ಟು ಹೋದನು!....ಅವನಿಗೆ ಏನು ಬೇಕಾಗಬಹುದು? ನೋಡು, ಕೇಸರೀ, ಮುದುಕಿಯು ಪುನಃ ಬಾಗಲಿನ ಕಡೆಗೆ ನೋಡುತ್ತಾಳೆ.'

ನಾವಿಬ್ಬರೂ ಕುತೂಹಲದಿಂದ ಕೂತೆವು.

ಕುಡಿಕನು ಕೋಣೆಯೊಳಗೆ ಹಿಂದಿರುಗಿ ಬಂದನು. ಅವನ ಕಂಕು ಳಲ್ಲಿ ಇರುವದೇನು?....ಬಾವಿಯ ಹಗ್ಗ!......

'ಅವನೇಕೆ ಹಗ್ಗ ತೆಗೆದುಕೊಂಡಿರುವನು?'

'ಹಗ್ಗ ತೆಗೆದುಕೊಳ್ಳಲಿಕ್ಕೆ, ಮತ್ತೇಕೆ?' ಎಂದು ನಾನು ಹೀಗೆ ಆಲೋಚಿಸದೆ ಹೇಳಿಬಿಟ್ಟೆನು.

ಕುಡಿಕನು ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡು ಸುತ್ತು ಮುತ್ತಲೂ ಬಿರಬಿರನೇ ನೋಡಿದನು. ಕಡೆಗೆ ಕೋಣೆಯ ಮಾಡನ್ನು

ತಲೆ ಎತ್ತಿ ನೋಡಿದನು. ಮುದುಕಿಯು ತನ್ನ ಕಣ್ಣುಗಳಲ್ಲಿ ಆಶ್ಚರ್ಯ ವನ್ನು ಪ್ರಕಟಿಸಿದಳು. ಅವಳ ಕಣ್ಣುಗಳಲ್ಲಿದ್ದ ಆಶ್ಚರ್ಯಛಾಯೆಯು ಕೂಡಲೇ ಭೀತಿಯಾಗಿ ಪರಿಣಮಿಸಿತು.

ನನಗೆ ಆ ಕುಡಿಕನ ತಲೆಯಲ್ಲಿದ್ದುದು ಫಕ್ಕನೆ ಮನಸ್ಸಿಗೆ ಹೊಳೆ ಯಿತು.

'ಕೇಸರೀ, **ಆತ್ಮಹತ್ಯೆ !**' ಎಂದೆನು.

ಕೇಸರಿಯು ನನ್ನ ಬಳಿಗೆ ಸರಿದಳು.

'ಭಯಪಡಬೇಡ, ಕೇಸರೀ, ಇದು ನಾಟಕವಲ್ಲವೇ?'

ಆದರೂ ಕೇಸರಿಯು ನನ್ನ ಬಳಿಗೆ ಇನ್ನೂ ಸ್ವಲ್ಪ ಸರಿದಳು. ಕೇಸ ರಿಯು ಹಾಗೆ ಭಯಪಟ್ಟದ್ದು ಆಶ್ಚರ್ಯವಲ್ಲ. ಈಗ ತಾನೇ ವಿಶ್ವೇಶ್ವರ ರಾಯನು ತನ್ನ ಅದ್ಭುತವಾದ ನಟನಾಶಕ್ತಿಯನ್ನು ನಮಗೆಲ್ಲ ಪ್ರಕಟ ಗೊಳಿಸಲಿಲ್ಲವೇ? ಅಂಥವನು ಈ ಆತ್ಮಹತ್ಯವನ್ನು ಅತ್ಯಂತ ವಾಸ್ತವಿಕ ವಾಗಿ ನಟಿಸಿ ನಮ್ಮ ಹೃದಯವನ್ನು ಅಡಿಮೇಲಾಗಿ ಮಾಡಲಿಕ್ಕಿಲ್ಲವೆಂದು ಯಾರು ತಾನೆ ಹೇಳಬಹುದು?

ಕುಡಿಕನು ಕೋಣೆಯ ಮಧ್ಯದಲ್ಲಿ ಬಂದು ನಿಂತನು. ತನ್ನ ಕೈಯ ಲ್ಲಿದ್ದ ಹಗ್ಗದ ಒಂದು ತುದಿಯನ್ನು ಕೋಣೆಯ ಮಾಡಿನ ಕಡೆಗೆ ಎಸೆದನು. ಅದು ಒಂದು ಜಂತಿಯ ಮೇಲಿನಿಂದ ಕೆಳಗೆ ಬಂದಂತೆ ಬೋಧೆಯಾಯಿತು. ಆ ಎರಡು ತುದಿಗಳನ್ನು ತನ್ನ ಕೈಗಳಿಂದ ಬಿಗಿಯಾಗಿ ಹಿಡಿದು ಒಂದು ಕ್ಷಣಕ್ಕೆ ತೂಗಿಕೊಂಡನು. ಆಜಾನುಬಾಹುವಾದ ದೇಹ. ಆದರೂ ಆ ಜಂತಿಯು ಅವನ ದೇಹದ ಭಾರವನ್ನು ತಾಳಿಕೊಂಡಿತು.

'ಆತ್ಮಹತ್ಯ! ತನ್ನ ಸ್ವಂತ ಮುದಿ ತಾಯಿಯ ಮುಂದೆ!.... ಅವರಲ್ಲಿಯೂ ಅವಳು ಅಸ್ವಸ್ಥದಲ್ಲಿರುವಳು!....ಅವಳಿಗೆ ಕದಲಲಿಕ್ಕೆ ಕೂಡ ಆಗುವುದಿಲ್ಲ!....ಎಷ್ಟು ಭಯಂಕರವು......!'

'ಹೆದರಬೇಡ, ಕೇಸರೀ. ಎಷ್ಟಾದರೂ ನಾಟಕವಲ್ಲವೇ? ಇಗೋ, ನಿನ್ನ ಕೈಯನ್ನು ನನ್ನ ಕೈಯಲ್ಲಿ ಇಡು.'

ಕುಡಿಕನು ಸುತ್ತುಮುತ್ತಲೂ ನೋಡಿ ಒಂದು ಹಳೆಯ ಸ್ಟೂಲನ್ನು

ಕೋಣೆಯ ಮಧ್ಯದಲ್ಲಿ ತಂದಿರಿಸುತ್ತಾನೆ....ಸ್ಟೂಲನ್ನು ಹತ್ತಿ ಆದರ ಮೇಲೆ ನಿಲ್ಲುತ್ತಾನೆ....ಅವನ ಭುಜದ ಮೇಲೆ ನಮಗೆ ಕಾಣುವುದಿಲ್ಲ ..:.ತನ್ನ ಕುತ್ತಿಗೆಯು ಈಗ ನೆಲದಿಂದ ಎಷ್ಟು ಮೇಲೆ ಇದೆ ಎಂದು ನೋಡಿ ಆದಕ್ಕೆ ಸರಿಯಾಗಿ ಆ ಹಗ್ಗಕ್ಕೆ ಒಂದು ಉರ್ಲು ಹಾಕುತ್ತಾನೆ. ಮುದುಕಿ!....ಎಷ್ಟು ಭಯಂಕರವಾದ ದೃಷ್ಟಿಯಿಂದ ಅವನನ್ನೇ ನೋಡುತ್ತಾಳೆ! ಅವಳ ಕಣ್ಣುಗಳು ತಮ್ಮ ಗೂಡಿನಿಂದ ಈಗಲೇ ಒಡೆದು ಹೊರಗೆ ಬರುವುವೋ ಎಂಬಂತೆ ತೋರುತ್ತದೆ.

ಕೇಸರಿಯ ಶ್ವಾಸವು ಬಿಗಿಯುತ್ತಾ ಬರುತ್ತದೆ.

ಕುಡಿಕನು ತಾನು ಕಟ್ಟಿದ ಹಗ್ಗದ ಉರುಲನ್ನು ತನ್ನ ಕುತ್ತಿಗೆಗೆ ಹಾಕಿಕೊಳ್ಳುತ್ತಾನೆ. ನಾವೆಲ್ಲರೂ ಚಕಾರ ಶಬ್ದವನ್ನು ಕೂಡ ಎತ್ತದೆ ಸುಮ್ಮನಿದ್ದೇವೆ. ಮುದುಕಿಯು ನಾನಾ ವಿಕಾರದ ಕೂಗುಗಳನ್ನು ಹೊರಡಿಸುತ್ತಾಳೆ. ಅವಳ ಸ್ಥಿತಿಯು ನಿಜವಾಗಿಯೂ ಭಯಂಕರ ವಾದುದು. ಅವಳ ಏಕಮಾತ್ರ ಪುತ್ರನು ಅವಳ ಕಣ್ಣೆದುರಿಗೆನೇ ಆತ್ಮ ಹತ್ಯ ಮಾಡಿಕೊಳ್ಳುತ್ತಾನೆ! ಆದರೂ ಅವನು ಹಾಗೆ ಮಾಡದಂತೆ ಅವನಿಗೆ ಅಡ್ಡಿ ಬರಲು ಅವಳಿಂದಾಗುವುದಿಲ್ಲ ....ಭಯಂಕರವು.... ಈ ನಾಟಕವನ್ನು ಕಲ್ಪಿಸಿದ ಕವಿಯ ಬುದ್ಧಿಶಕ್ತಿಯು ಸಾಮಾನ್ಯವಾದು ದಲ್ಲ. ಅವನು ಇಂತಹ ನಾಟಕಗಳನ್ನು ಅನೇಕ ಬರೆದಿರುವನೇ?.... ನೋಡಬೇಕು......

ನಾವು ರೆಪ್ಪೆಗೆ ರೆಪ್ಪೆ ತಾಗಿಸದೆ ಕೂತುಕೊಂಡೆವು. ಕುಡಿಕನು ಸ್ಟೂಲಿನ ಮೇಲೆ ನಿಂತಿರುವನು. ಕುತ್ತಿಗೆಗೆ ಹಗ್ಗದ ಉರುಲನ್ನು ಹಾಕಿಕೊಂಡಿರುವನು. ಆದರೆ ಅವನ ಎದೆಯ ಮೇಲಿನ ಭಾಗವು ನಮಗೆ ಕಾಣಿಸುವುದಿಲ್ಲ. ಮೇಲೆ ಸುರುಳಿದ ಪರದೆಯು ನಮಗೆ ಅಡ್ಡ ಬಂದಿದೆ. ಏನು, ಕಥೆಯಲ್ಲಿ ಅವನು ನಿಜವಾಗಿಯೂ ಆತ್ಮಹತ್ಯ ಮಾಡಿ ಕೊಳ್ಳುವನೆ?......

ಕಾಲಿನ ಕೆಳಗಿದ್ದ ಸ್ಟೂಲನ್ನು ಕುಡಿಕನು ಒದೆದು ಬಿಟ್ಟನು. ಸ್ಟೂಲು ಕೊಠಡಿಯ ಒಂದು ಮೂಲೆಗೆ ಹಾರಿ ಹೋಗಿ ಬಿಟ್ಟಿತು. ಮುದುಕಿಯು

ಅರಚಿದಳು. ಕೇಸರಿಯು ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡಳು. ಕುಡಿಕನ ಕಾಲುಗಳು ವಾಯುವಿನಲ್ಲಿ ತೂಗಹಾಕಿದಂತಾದುವು....

'ಭಯಪಡಬೇಡ, ಕೇಸರೀ,....ನಾಟಕವಲ್ಲವೇ....ಅದ್ಭುತಕರವಾದ ನಟನೆ, ಅಷ್ಟೆ.'

'ಇಲ್ಲ ನನಗೆ ನೋಡುವುದಕ್ಕಾಗುವುದಿಲ್ಲ. ನೀವು ನೋಡಿ ನನಗೆ ಹೇಳಿ.' ಎಂದಂದುಕೊಂಡು ಕೇಸರಿಯು ಕಣ್ಣುಮುಚ್ಚಿಕೊಂಡಳು.

ನೇತಾಡುವವನ ಕೈಕಾಲುಗಳು ಕಂಪಿಸಲಿಕ್ಕೆ ಪ್ರಾರಂಭಿಸಿದುವು.. ಕೊರಳಿನಿಂದ ಭಯಂಕರವಾದ ಶಬ್ದಗಳು ಹೊರಟವು....! ಜೀವವು ತನ್ನನ್ನು ಬಂದಿಯಾಗಿಟ್ಟುಕೊಂಡ ದೇಹದೊಡನೆ ಹೋರಾಡುವಂತೆ ತೋರಿ ಬಂತು....ಅದ್ಭುತವು!....ಅತ್ಯದ್ಭುತವು!....ಕಾಲುಗಳು ಕ್ರಮೇಣ ಕೊಕ್ಕೆಯಾದುವು....ಕೈಗಳು ಒಮ್ಮೆಲೇ ಮರದ ತುಂಡುಗಳಂತೆ ಸುಮ್ಮಗಾದುವು..ಭಯಂಕರವಾದ ಆತ್ಮಹತ್ಯವೊಂದು ನಮ್ಮ ಕಣ್ಣೆದುರಿಗೆ ನೆರವೇರಿತು....ಇಡೀ ದೇಹವು ಒಮ್ಮೆ ವಾಯುವಿನಲ್ಲಿ ತಿರುಗಿತು....ಎಷ್ಟು ವಾಸ್ತವಿಕವಾದ ನಟನೆ! ಎಷ್ಟು ಅದ್ಭುತಕರವಾದುದು!

ಇನ್ನೊಮ್ಮೆ ಸಭಿಕರ ಕೈಚಪ್ಪಾಳೆಯು ನಾಟಕ ಶಾಲೆಯೊಳಗೆಲ್ಲ ಗುಡುಗಿತು

ಆದರೆ ಇದೇನು? ಮಲಗಿಕೊಂಡ ಮುದುಕಿಯು ಫಕ್ಕನೆ ಎದ್ದು ಕೂತುಕೊಳ್ಳುತ್ತಾಳೆ? ಅವಳ ಪಕ್ಷವಾತವು ಗುಣವಾಯಿತೆ? ನೇತಾಡುವ '**ಶವ**'ವನ್ನೇ ದೃಷ್ಟಿಸಿ ನೋಡುತ್ತಾಳೆ. ಅವಳ ಮನಸ್ಸಿನಲ್ಲಿ ಗಾಬರಿಯಾಗಿದೆ. ಆಗಾಗ್ಗೆ ತೆರೆಯ ಕಡೆಗೆ ನೋಡುತ್ತಾಳೆ....ಏನು? ....ಏನು?....ಕೂತುಕೊಂಡವಳು ಎದ್ದೇ ಬಿಟ್ಟಳು! ಇದೂ ನಾಟಕದಲ್ಲಿಯೇ? ಅಥವಾ....ಅಥವಾ....ಒಂದು ಭಯಂಕರವಾದ ಸಂಶಯವು ನನ್ನ ಮನಸ್ಸಿಗೆ ಬಂತು....ಏನಾದರೂ ಪ್ರಮಾದವಾಗಿಲ್ಲವೇನು?....ಮುದುಕಿಯು ರಂಗಸ್ಥಳದೊಳಗೆ ಓಡಿ ಬಿಟ್ಟಳು. ಅವಳು

ಮುಂದುಕಿಯುಂತೆ ಆಗ ಕಾಣಲಿಲ್ಲ! ಕೂಡಲೇ ನಾಲ್ಕಾರು ಅರ್ಧವೇಷ ಧಾರಿಗಳು ರಂಗಸ್ಥಳದ ಮೇಲೆ ಬಂದರು. ಅಂಕದ ಪರದೆಯು ಕೆಳಗೆ ಮೆಲ್ಲಗೆ ಬಂತು. ಇಲ್ಲ, ಪೂರ್ಣ ಬರಲಿಲ್ಲ. ಅರ್ಧದಲ್ಲಿಯೇ ನಿಂತಿತು. ಅಲ್ಲೇ ಮೇಲಕ್ಕೆ ಹೋಯಿತು!....ರಂಗಸ್ಥಳದ ಮೇಲೆ ವಿಶೇಷ ಕೋಲಾಹಲ ವುಂಟಾಗಿದೆ. ಒಬ್ಬನು ಚೂರಿಯಿಂದ ಹಗ್ಗವನ್ನು ತುಂಡುಮಾಡುತ್ತಾನೆ. ನಾಲ್ಕಾರು ಜನರು ಶವವನ್ನು—ದೇವ ದೇವಾ!—**ಶವ**ವನ್ನು ಹಿಡಿದು ಕೊಳ್ಳಲಿಕ್ಕೆ ಸುತ್ತಲೂ ನಿಂತಿದ್ದಾರೆ....ಅಂಕದ ಪರದೆಯು ಧೊಪ್ಪನೆ ಕೆಳಗೆ ಬಿತ್ತು.

ನಾಟಕಶಾಲೆಯೊಳಗೆಲ್ಲ ಎಣೆಯಿಲ್ಲದ ಗಲಿಬಿಲಿ ಪ್ರಾರಂಭವಾಯಿತು. ನಾನು ಕೇಸರಿಯ ಕೈಯನ್ನು ಬಿಗಿದಾಗಿ ಹಿಡಿದುಕೊಂಡೆನು. ಎಲ್ಲರೂ ಎದ್ದು ನಿಂತರು. ಎಲ್ಲರೂ ಒಮ್ಮೆಯೇ ಮಾತಾಡಲಿಕ್ಕೆ ಪ್ರಾರಂಭಿಸಿದರು. ಅಷ್ಟರೊಳಗೆ ದೇವೀಪ್ರಸಾದ ನಾಟಕ ಮಂಡಳಿಯ ಪ್ರೊಪ್ರೈಟರನು ರಂಗಸ್ಥಳದಲ್ಲಿ ಅಂಕದ ಪರದೆಯ ಮುಂದೆ ಬಂದು ನಿಂತನು. ತನ್ನ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿದನು. ನಾವೆಲ್ಲರೂ ಸುಮ್ಮಗಾದೆವು.

'ಸಭಿಕರೆ, ನಮ್ಮ ದುರದೃಷ್ಟದಿಂದ ಒಂದು ಭಯಂಕರವಾದ ಅಪಘಾತವು ಸಂಭವಿಸಿದೆ, ಅಭಿನಯ ಶಿರೋಮಣಿಯಾದ....ವಿಶ್ವೇಶ್ವರ ರಾಯರು....ನಿಜವಾಗಿಯೂ.... ಆತ್ಮಹತ್ಯವನ್ನು ಮಾಡಿಕೊಂಡಿದ್ದಾರೆ. ಇದಕ್ಕಿಂತ ಹೆಚ್ಚಿಗೆ ಹೇಳಲು ನನಗೆ ಸಾಧ್ಯವಿಲ್ಲ. ಕ್ಷಮಿಸಿರಿ' ಎಂದು ಹೇಳಿ ಅವನು ಒಳಗೆ ಹೋದನು.

ಕೂಡಲೆ ನಮ್ಮೊಳಗಿದ್ದ ಗಲಿಬಿಲಿಯು ಇಮ್ಮಡಿಯಾಯಿತು. ಒಬ್ಬ ಮುಲೆಯಾಳಿಯು ಎದ್ದುನಿಂತು 'ನ್ಯಾನೋರಿ ವೈದ್ಯನಾಂಣ್' ಎಂದು ಎಲ್ಲರಿಗಿಂತಲೂ ಗಟ್ಟಿಯಾಗಿ ಕೂಗಲಾರಂಭಿಸಿದನು. ಕೇಸರಿಯು ಇದನ್ನೆಲ್ಲ ನೋಡಿ ಮೂರ್ಛೆ ಹೋಗುವಂತಾದಳು. ಅಬ್ಬಬ್ಬ, ಎಂತಹ ಭಯಂಕರ ವಾದ ದೃಶ್ಯವು! ಜೀವವಿರುವವರೆಗೂ ನಾವು ಮರೆಯಲಿಕ್ಕಿಲ್ಲ. ಹಲವು ವರ್ಷಗಳ ವರೆಗೆ ಈ ದೃಶ್ಯವು ಭೀಕರವಾದ ಸ್ವಪ್ನರೂಪದಿಂದ ನಮ್ಮ ನಿದ್ರೆಯನ್ನು ಕೆಡಿಸುವುದೆಂಬುದರಲ್ಲಿ ಸಂಶಯವಿಲ್ಲ .... ಅಹಹಾ, ಒಂದು ಜೀವವೇ ಹೋಗುವಾಗ್ಗೆ ನಾವು ಸಂತೋಷದಿಂದ ಕೈಚಪ್ಪಾಳೆ

ಹಾಕಿದೆವಲ್ಲ! ಎಂತಹ ಪಾಪಿಷ್ಠರು ನಾವು! . . . ನನ್ನ ಕಣ್ಣುಗಳೂ ಮಸಕಾದವು . . . ನಾಟಕ ಶಾಲೆಯು ತಿರುಗುವಂತೆ ತೋರಿಬಂತು . . .

ಕೂಡಲೇ ರಂಗಸ್ಥಳದೊಳಗಿಂದ ಗಿಣಿಗಿಣಿ ಶಬ್ದವಾಯಿತು. ಇದೇನು ಇಂತಹ ಅಪೂರ್ವವಾದ ಸಂದರ್ಭದಲ್ಲಿ ಕೂಡ ನಾಟಕವನ್ನು ಮುಂದರಿಸುವರೇ? . . . . ಅಂಕದ ಪರದೆಯು ಮೇಲಕ್ಕೆ ಹೋಯಿತು. ವಿಶ್ವೇಶ್ವರರಾಯನ ವಿಷಯದಲ್ಲಿ ಸ್ವಲ್ಪವಾದರೂ ಆಸೆಯುಂಟು ಎಂದು ನಮಗೆ ತಿಳಿಸುವರೇ? ಇದನ್ನು ಕೇಳಲಿಕ್ಕೆಂದು ನಾವು ಕುತೂಹಲದಿಂದ ಕೂತುಕೊಂಡೆವು. ಕೂಡಲೇ ಒಂದು ವ್ಯಕ್ತಿಯು ರಂಗಸ್ಥಳದ ಮುಂದೆ ಒಂದು ನಿಂತಿತು———

ಅವನೇ ವಿಶ್ವೇಶ್ವರರಾಯನು!

ವಿಶ್ವೇಶ್ವರರಾಯನು ಹಸನ್ಮುಖವನ್ನು ತಾಳಿಕೊಂಡಿದ್ದನು. ಪ್ರೇಕ್ಷಕರನ್ನು ನೋಡುತ್ತಾ ಹೀಗೆಂದನು:— 'ಸಭಿಕರೇ, ತಾವಿಂದು ನನ್ನ ಮೇಲೆ ಪ್ರೀತಿಯಿಟ್ಟು ಇಲ್ಲಿ ಬಂದು ನೋಡಿದ ನವೀನ ರೀತಿಯ ನಾಟಕವು ನಾನೇ ಬರೆದುದಾಗಿರುತ್ತದೆ.—'

ಅವನಿಗೆ ಮಾತು ಮುಂದರಿಸಲು ಸಾಧ್ಯವಾಗಲಿಲ್ಲ. ಇಡೀ ನಾಟಕ ಶಾಲೆಯು ಅಲುಗಾಡುವಂತೆ ಸಭಿಕರು ೫ ಮಿನಿಟುಗಳವರೆಗೆ ಕೈಚಪ್ಪಾಳೆಯ ಮಳೆಯನ್ನು ಸುರಿದರು. ಈ ಮಳೆಯು ಸ್ವಲ್ಪ ಶಾಂತವಾದ ಮೇಲೆ ವಿಶ್ವೇಶ್ವರರಾಯನು ತನ್ನ ಮಾತನ್ನು ಮುಂದರಿಸಿದನು:———

'ಸಭಿಕರೇ, ಈ ನಾಟಕದಲ್ಲಿ ಯಾವ ರೀತಿಯ ದೋಷಗಳಿದ್ದರೂ ತಾವು ನನ್ನ ಮೇಲೆ ಪ್ರೀತಿಯಿಟ್ಟು ಕ್ಷಮಿಸಬೇಕು — ಈ ನಾಟಕದಿಂದ ಇಂದು ಬಂದ ಒಂದು ಸಾವಿರ ರೂಪಾಯಿಗಳನ್ನೆಲ್ಲ ನಮ್ಮ ಜಿಲ್ಲೆಯಲ್ಲಿ ನೆರೆಯಿಂದ ನಿರಾಶ್ರಿತರಾದ ಜನರ ಸಹಾಯಕ್ಕೆ ಕಳುಹಿಸಬೇಕೆಂದು ನಿರ್ಧರಿಸಿದ್ದೇವೆ. ತಮ್ಮ ಅಪ್ಪಣೆಯಾಗಲಿ!'

ಕೈಚಪ್ಪಾಳೆಯ ಇನ್ನೊಂದು ದೀರ್ಘಕಾಲದ ಮಳೆಯು ಸುರಿಯಿತು.



## ಚಿನ್ನದ ತೊಟ್ಟಿಲು

ರಾತ್ರಿ ಒಂಭತ್ತು ಗಂಟೆ ಸಮಯ. ದೀಪದ ಬೆಳಕು ಕ್ರಿಮಿಕೀಟಾದಿಗಳನ್ನು ಮರುಳುಗೊಳಿಸಿ ಬಲವಾಗಿ ತನ್ನ ಕಡೆಗೆ ಆಕರ್ಷಿಸುವಂತೆ ದೇವೀ ಪ್ರಸಾದ ನಾಟಕ ಮಂಡಳಿಯ ರಂಗಸ್ಥಳವು ಗ್ಯಾಸ್‌ಲೈಟುಗಳಿಂದಲೂ ಎದೆಯನ್ನಪ್ಪಳಿಸುವ ಬೇಂಡ್ ವಾದ್ಯದಿಂದಲೂ ವಿಲಾಸಪುರದ ಜನರನ್ನೆಲ್ಲಾ ಹುರಿದುಂಬಿಸಿ, ತನ್ನ ಕಡೆಗೆ ಬಲಾತ್ಕಾರದಿಂದ ಎಳೆದುಕೊಳ್ಳುತ್ತಿತ್ತು. ಹೆಂಗಸರು, ಗಂಡಸರು, ಮುದುಕರು, ಮಕ್ಕಳು ಎಲ್ಲರೂ ಒಂದೇ ಸವನೆ ಮಾತನಾಡುತ್ತಾ, ಅರಚುತ್ತಾ, ನಗಾಡುತ್ತಾ, ಒಬ್ಬರನ್ನೊಬ್ಬರು ಕೂಗುತ್ತಾ, ನಾಟಕವನ್ನು ನೋಡುವ ಲವಲವಿಕೆಯಿಂದ ನಾಟಕಶಾಲೆಯ ಬಳಿಗೆ ತಂಡತಂಡವಾಗಿ ಹೋಗುತ್ತಿದ್ದರು. ಅಂತಹ ಮರುಳಾಟದಿಂದ ತುಂಬಿದ ಜನರಲ್ಲಿ ಒಬ್ಬ ತರುಣನು ವಿಶೇಷವಾಗಿ ನಮ್ಮ ದೃಷ್ಟಿಗೆ ತುತ್ತಾದನು.

ಈ ತರುಣನೂ ಅಂದಿನ ನಾಟಕವನ್ನು ನೋಡುವುದಕ್ಕೆ ಹೋಗುತ್ತಿದ್ದನೆಂಬುದರಲ್ಲಿ ನಮಗೇನೂ ಸಂಶಯವಿದ್ದಿಲ್ಲ. ಆದರೆ ಅವನ ಮುಖದಲ್ಲಿ ನಾಟಕವನ್ನು ನೋಡುವ ಕುತೂಹಲವು ಎಳ್ಳಷ್ಟೂ ಹೊಳೆಯುತ್ತಿದ್ದಿರಲಿಲ್ಲ. ಅವನ ಸುತ್ತುಮುತ್ತಲೆಲ್ಲ ಲೆಕ್ಕವಿಲ್ಲದ ಜನಕೂಟಗಳು ಇದ್ದರೂ, ಅವನು ಅವುಗಳಲ್ಲೊಂದನ್ನೂ ಸೇರದೇ, ತನ್ನ ದಾರಿಯನ್ನೇ ನೋಡುತ್ತಾ, ಸ್ವಪ್ನಾವಸ್ಥೆಯಲ್ಲಿದ್ದಂತೆ ಮೆಲ್ಲಮೆಲ್ಲನೆ, ನಾಟಕಶಾಲೆಯ ಬಳಿಗೆ ಹೋಗುತ್ತಿದ್ದನು. ಅವನ ಮುಖದ ಕಳೆಯು ತೀರಾ ಬಾಡಿ ಹೋಗಿತ್ತು. ಅವನ ಕಣ್ಣುಗಳು ದೊಡ್ಡವುಗಳಾಗಿ ಸಾಧಾರಣದಲ್ಲಿ ಶುಭ್ರವಾಗಿದ್ದರೂ, ಈಗ ಮಾತ್ರ ಬರಿದಾಗಿ ಯಾವುದೊಂದನ್ನೂ ಸೂಚಿಸುತ್ತಿದ್ದಿಲ್ಲ. ಆದರೆ ಅವನ ತುಟಿಗಳು ಮಾತ್ರ ಒಂದಕ್ಕೊಂದು

ಒತ್ತರದಿಂದ ಹಿಡಿದುಕೊಂಡಿದ್ದುವು; ಅವನ ಉಶ್ವಾಸವು ಮಾತ್ರ ಬಿಗಿದಾಗಿ ಬಹಳ ಕ್ಷೀಣತೆಯಿಂದ ಬರುತ್ತಿತ್ತು. ತರುಣನ ಮನಸ್ಸಿನಲ್ಲಿ ಏನೋ ಒಂದು ಭಯಂಕರವಾದ ಹೋರಾಟವು ನಡೆಯುತ್ತಿತ್ತು.

ಬಾಲ್ಯಾವಸ್ಥೆಯಲ್ಲಿ 'ಸೀರನೋಲಣ ಗುಳ್ಳೆಯಂದದಿ' ಬರುವ ಅಲ್ಪ ಸ್ವಲ್ಪ ದುಃಖಗಳಿಗೆ ಮಾತ್ರ ಪರಿಚಿತರಾಗಿದ್ದ ನಾವು ಫಕ್ಕನೆ ಯೌವನಾ ವಸ್ಥೆಯನ್ನು ಹೊಂದಿದ ಕೂಡಲೇ ನಮ್ಮ ಸುತ್ತುಮುತ್ತಲೂ ಆವರಿಸಿ ಕೊಂಡ ಸಂಸಾರವೆಂಬ ಘೋರವಾದ ಅರಣ್ಯವನ್ನು ನೋಡಿ, ನಮ್ಮಲ್ಲಿ ಯಾರು ತಾನೇ ದಿಗಿಲುಬಿದ್ದು ವರ್ಣಿಸಲಾಗದಂತಹ ಮನಸ್ಸಿನ ಸಂತಾಪ ವನ್ನು ಪಡೆದಿದ್ದಿಲ್ಲ ? ಅಂತಹ ಸಂತಾಪವನ್ನೇ ಆ ತರುಣನು ಆ ಸಮಯ ದಲ್ಲಿ ಅನುಭವಿಸುತ್ತಿದ್ದನು !

ಸತ್ಕರ್ಮಗಳು, ದುಷ್ಕರ್ಮಗಳು, ಹೆಂಗಸರ ನಗುಮುಖಗಳು, ಅವರ ತೀಕ್ಷ್ಣವಾದ ಕಟಾಕ್ಷಗಳು, ಅವರ ಕೋಮಲವಾದ ಸ್ವರಗಳು, ಮುದ್ದುಮಕ್ಕಳ ನಗೆಯು, ಸೃಷ್ಟಿಸೌಂದರ್ಯವು, ಪಕ್ಷಿಗಳ ಇಂಪಾದ ಹಾಡುಗಳು, ಥಳಥಳಿಸುವ ಗಾಜಿನ ಹೂಜೆಗಳಲ್ಲಿ ಮೆರೆಯುವ ಕೆಂದಾ ವರೆಯಂತಹ ಅಮೃತವು, ಮಿತ್ರರ ಸಂಭಾಷಣೆಯು, ಅವರ ಮುಖ ಸ್ತುತಿಯು, ಹೆತ್ತವರ ಪ್ರೀತಿಯು, ಅವರ ಲೋಭವು, ಬಂಧು–ಬಾಂಧವರ ಮಧುವಚನಗಳು, ಅವರ ಅಸೂಯೆಯು, ಮರಣವನ್ನು ಕೂಡ ಜಯಿ ಸುವ ಹೆಂಡತಿಯ ಪ್ರೇಮವು, ಇಲ್ಲವೇ ಹೆಂಡತಿಯ ಪ್ರೇಮವಿಲ್ಲದಿರು ವಿಕೆಯು, ಸತ್ಕೀರ್ತಿಯ ಆಸೆ, ವಿಷಯಲಂಪಟತನವು, ಹಣದಾಸೆಯು, ಸ್ವಾರ್ಥತ್ಯಾಗವು, ಸೇವೆಯು, ಮದಮತ್ಸರವು, ಪಾರಮಾರ್ಥವು, ನಾಸ್ತಿ ಕತನವು, ಘೋರವಾದ ವರ್ಣಿಸಲಾಗದ ಮನಸ್ಸಿನ ಸಂಶಯಗಳು, ಇವೇ ಮೊದಲಾದ ಅನೇಕಾನೇಕ ದೇವದೂತರೂ, ಭೂತಪಿಶಾಚಿಗಳೂ, ಆ ತರುಣನ ಮನಸ್ಸಿನಲ್ಲಿ ಅವನ ಆತ್ಮಕ್ಕಾಗಿ ಭಯಂಕರವಾಗಿ ಹೋರಾಡು ತ್ತಿದ್ದುವು. ಇಂತಹ ಹೋರಾಟದಲ್ಲಿ ಯಾರು ಗೆಲ್ಲುವರು, ಯಾರು ಸೋಲುವರು, ತರುಣನು ಯಾವ ರೀತಿಯಲ್ಲಿ ಜಯಶೀಲನಾಗುವನು, ಎಂದು ಆ ಬಡ ತರುಣನಿಗೇನೇ ಹೇಳಲಸಾಧ್ಯವಾದಾಗ ನಾವೇಕೆ ಸುಮ್ಮನೇ ಊಹಿಸಿಕೊಂಡು ಅದರ ಆಳ ನೋಡಲು ಕೈ ಹಚ್ಚಬೇಕು ?

ತರುಣನು ಕುರ್ಚಿಯ ಟಿಕೆಟನ್ನು ಪಡೆದುಕೊಂಡು, ನಾಟಕಶಾಲೆ ಯನ್ನು ಪ್ರವೇಶಿಸಿ, ತನ್ನ ಸ್ಥಾನದಲ್ಲಿ ಕುಳಿತುಕೊಂಡನು. ನಾಟಕವೂ ಪ್ರಾರಂಭವಾಯಿತು—'ಭೀಷ್ಮ ಪ್ರತಿಜ್ಞೆ.' ತನ್ನ ಮನಸ್ಸಿನಲ್ಲೊದಗುವ ಭಯಂಕರವಾದ ಹೋರಾಟವನ್ನು ಹೇಗಾದರೂ ಸಿಲ್ಲಿಸಬೇಕೆಂದು ನಿಶ್ಚ ಯಿಸಿ, ನಾಟಕವನ್ನು ಎವೆಯಿಕ್ಕದೆ ಶತಪ್ರಯತ್ನಗಳಿಂದ ನೋಡಲಾರಂಭಿ ಸಿದನು. ದೇವೀಪ್ರಸಾದ ನಾಟಕ ಮಂಡಳಿಯ 'ಭೀಷ್ಮಪ್ರತಿಜ್ಞೆ'ಯು ಅವರ ಇತರ ನಾಟಕಗಳಂತೆ ಸಂಗೀತನಾಟಕವಾಗಿತ್ತು. ಸಂಗೀತ ದೇವಿಯು ತನ್ನ ನಿಜವಾದ ಸ್ಥಾನವನ್ನು ಬಿಟ್ಟು ಯಾವಾಗ್ಗೆ ನಮ್ಮ ನಾಟಕರಂಗಸ್ಥಳಕ್ಕೆ ವಶಳಾಗಿ, ಭ್ರಷ್ಟಳಾಗಿ ಹೋದಳೋ, ಆಗ್ಗೆ ನಮ್ಮ ರಂಗಸ್ಥಳಕ್ಕೆ ಸರ್ವಾಂಗವಾಯವಾಗಿರುವ ಅಭಿನಯ ದೇವತೆಯೂ ಭ್ರಷ್ಟ ಳಾಗಿ ಹೋದಳೆಂದು ನಾವು ತಿಳಿಯಬಹುದು. ಆದರೆ ವಾಡುವುದೇನು? ಸಾಮಾನ್ಯ ಜನರಿಗೆ ಸಂಗೀತವಿಲ್ಲದಿದ್ದರೆ ನಾಟಕವು ರುಚಿಕರವಾಗಲಾ ರದು. ಸಂಗೀತನಾಟಕಗಳನ್ನು ನೋಡುವುದೇ ಅವರ ಉದ್ದಾದ ಭ್ರಾಂತಿಯಾಗಿದೆ. ನಾಟಕಕ್ಕೆ ಮುಖ್ಯವಾಗಿ ಬೇಕಾದುದು ಯೊೇಗ್ಯ ಅಭಿನಯವಲ್ಲದೆ ಸಂಗೀತವಲ್ಲವೆಂಬ ತಿಳುವಳಿಕೆಯು ಅವರಿಗೆ ಇನ್ನೂ ಸ್ವಲ್ಪ ಶೂನ್ಯವೇ. ಅದಲ್ಲದೆ ಸಂಗೀತವಿಲ್ಲದೇನೇ ನಾಟಕವನ್ನು ಮನೋ ರಂಜಕವಾಗಿ ಬರೆದವರೂ ನಮ್ಮಲ್ಲಿ ಅಪರೂಪ. ಒಂದು ವೇಳೆ ಅಂತಹ ನಾಟಕಗಳನ್ನು ಬರೆದರೂ ಅವುಗಳನ್ನು ಹೃದಯಂಗಮವಾಗಿ ಆಡಿ ತೋರಿಸುವವರೂ ನಮ್ಮಲ್ಲಿ ತೀರಾ ಅಪರೂಪವೇ. ಹೀಗಾಗಿ ಸಂಗೀತ ನಾಟಕಗಳೇ ನಮ್ಮ ಜನರ ಮುದ್ದಾದ ಭ್ರಾಂತಿಯಾದುದರಲ್ಲಿ ಆಶ್ಚರ್ಯ ವೇನು? ಅಂತಹ ನಾಟಕಗಳು ಕೇವಲ ಹಾಸ್ಯಾಸ್ಪದವಾದುವುಗಳೆಂದು ಬಲ್ಲವರೂ ಹೇಳಿದರೂ ಅವರ ಮಾತುಗಳಿಗೆ ಯಾರು ತಾನೇ ಕಿವಿ ಗೊಡುವರು?

ಅದು ಹೇಗೂ ಇರಲಿ. ದೇವೀಪ್ರಸಾದ ನಾಟಕ ಮಂಡಳಿಯವರ ಸಂಗೀತ ಭೀಷ್ಮಪ್ರತಿಜ್ಞೆಯು ಬಹಳ ಹೆಸರುವಾಸಿಯಾಗಿದ್ದಿತು. ಅದಲ್ಲದೆ ಸಂಗೀತ ಮಹಾಜ್ಞಾನಿಯೂ, ಅಭಿನಯಶಿರೋಮಣಿಯೂ ಎಂದೆನ್ನಿಸಿ

ಕೊಳ್ಳುತ್ತಿದ್ದ ವಿಶ್ವೇಶ್ವರರಾಯನು ಇಂದು ಭೀಷ್ಮನ ಪಾತ್ರವನ್ನು ಧರಿಸಿಕೊಂಡಿದ್ದನು. ಆದರೆ ವಿಶ್ವೇಶ್ವರರಾಯನು ರಂಗಸ್ಥಳದಲ್ಲಿ ಪುರಾಣದ ಶ್ರೇಷ್ಠಪುರುಷರೆಲ್ಲರ ಪಾತ್ರಗಳನ್ನೇ ಧರಿಸಿಕೊಂಡು, ತಾನು ಪ್ರತ್ಯಕ್ಷ ಶ್ರೀರಾಮನೋ, ಶ್ರೀಕೃಷ್ಣನೋ, ದುಷ್ಯಂತನೋ, ನಳಮಹಾರಾಯನೋ, ಅಥವಾ ಭೀಷ್ಮನೋ ಎಂಬಂತೆ ಆಡಿ ತೋರಿಸಿದರೂ, ಸಾಮಾನ್ಯದಲ್ಲಿ ಸ್ತ್ರೀಲೋಲನಾಗಿಯೂ, ಕುಡಿಕನಾಗಿಯೂ, ಮೈಗಳ್ಳನಾಗಿಯೂ ಇದ್ದನು. ಹೀಗಾಗಿ ರಂಗಸ್ಥಳದಲ್ಲಿ ಮಾತ್ರ ಸಾಮಾನ್ಯ ಜನರಿಂದ ಬಹಳವಾಗಿ ಪೂಜಿಸಲ್ಪಟ್ಟು, ರಂಗಸ್ಥಳದ ಹೊರಗೆ ಎಲ್ಲರ ತಾತ್ಸಾರಕ್ಕೂ ಅವಹೇಳನೆಗೂ ಗುರಿಯಾಗಿದ್ದನು. ಅವನ ಸ್ವಜಾತಿಯವರು ಕೂಡ ಅವನನ್ನು ತಮ್ಮೊಟ್ಟಿಗೆ ಕೂಡಿಸಿಕೊಳ್ಳುತ್ತಿರಲಿಲ್ಲ. ಇಂತಹ ಸ್ಥಿತಿಯು ಸಾಧಾರಣವಾಗಿ ಪ್ರಚಾರದಲ್ಲಿದ್ದುದೇ ಎಂದು ವಾಚಕರು ತಿಳಿದಿದ್ದಿರಬಹುದು.

ಆದರೆ ರಂಗಸ್ಥಳದ ಮೇಲೆ ವಿಶ್ವೇಶ್ವರರಾಯನು ಎಲ್ಲಾ ಜನರ ಹೃದಯನಾಯಕನಾಗಿದ್ದನೆಂದು ನಾವು ಹೇಳಿದ್ದೇವೆಯಷ್ಟೇ. ಇಂದು ಆತನು ತಾನು ಧರಿಸಿಕೊಂಡಿದ್ದ ಭೀಷ್ಮನ ಭೂಮಿಕೆಯಲ್ಲಿ ತನ್ನ ಅಭಿನಯದ ಮತ್ತು ಸಂಗೀತದ ಶಕ್ತಿಗಳನ್ನೆಲ್ಲಾ ಹೊಯ್ದು ಸ್ವತಃ ಭೀಷ್ಮನೇ ಮೂರ್ತಿಮಂತನಾಗಿ ಬಂದಿರುವನೋ ಎಂಬಂತೆ, ತನ್ನ ಕೀರ್ತಿಗೆ ಇನ್ನೊಂದು ಬಣ್ಣವನ್ನು ಬರೆದು, ಸಭಿಕರನ್ನೆಲ್ಲಾ ಅತ್ಯಾಶ್ಚರ್ಯಗೊಳಿಸುತ್ತಿದ್ದನು. ನಮ್ಮ ತರುಣನಿಗಂತೂ ನಾಟಕದ ಕಥೆಯೇ ವಿಶೇಷವಾಗಿ ಆಕರ್ಷಿತವಾಗಿತ್ತು. ಆದರಲ್ಲಿಯೂ ನಟಶಿರೋಮಣಿಯೆಂದು ಪ್ರಖ್ಯಾತಿಗೊಂಡ ವಿಶ್ವೇಶ್ವರರಾಯನ ಮೇಲಂತೂ ತರುಣನ ಮನಸ್ಸೆಲ್ಲಾ ಸಂಪೂರ್ಣವಾಗಿ ನಾಟಿಕೊಂಡಿತ್ತು. ನಾಟಕವನ್ನು ನೋಡುವುದಕ್ಕೆ ಮೊದಲು ವಿಶೇಷವಾಗಿ ಆತುರಪಡದ ಈ ತರುಣನು ನಾಟಕವು ಪ್ರಾರಂಭಿಸಿದೊಡನೆಯೇ ಅದರಲ್ಲಿಯೇ ಪೂರ್ಣ ಮಗ್ನನಾದನು. ಆಶ್ಚರ್ಯವಲ್ಲ, ಭೀಷ್ಮಪ್ರತಿಜ್ಞೆಯು ಎಲ್ಲರಿಗೂ ತಿಳಿದಿರುವುದಷ್ಟೇ? ತರುಣನ ಮನಸ್ಸಿನ ಅಲ್ಲೋಲಕಲ್ಲೋಲವಾದ ಸ್ಥಿತಿಯಲ್ಲಿ ಅವನಿಗೂ ಭೀಷ್ಮನ

ಪ್ರತಿಜ್ಞೆಯಂತೆ ಒಂದು ಪ್ರತಿಜ್ಞೆಯು ಬಹಳವಾಗಿ ಅವಶ್ಯಕವಾಗಿದ್ದಿತು. ತನ್ನ ಮನಸ್ಸಿನಲ್ಲಿ ಸಂಭವಿಸುವ ಭಯಂಕರವಾದ ಹೋರಾಟವೇ ಭೀಷ್ಮನ ಮನಸ್ಸಿನಲ್ಲಿಯೂ ನಡೆಯುವಂತೆ ಕಂಡುಬಂತು. ಅಂತಹ ಸಂದರ್ಭದಲ್ಲಿ ಭೀಷ್ಮನು ಏನು ಮಾಡುವನು? ತಾನೂ ಹಾಗೆಯೇ ಮಾಡುವೆನು; ಭೀಷ್ಮನು ಯಾವ ಬಗೆಯಿಂದ ತನ್ನ ಮನಸ್ಸಿನಲ್ಲಿ ಕಾದಾಡುವ ವಿವಿಧವಾದ ಕ್ಲೇಶಗಳಿಂದ ಜಯಶೀಲನಾಗುವನು? ತಾನೂ ಅದೇ ಬಗೆಯಿಂದ ತನ್ನ ಮನಸ್ಸಿನಲ್ಲಿ ಹೋರಾಡುವ ಭೂತಪಿಶಾಚಿಗಳಿಂದ ಜಯಶೀಲನಾಗುವೆನು ಎಂದು ಆ ತರುಣನು ಮನಸ್ಸಿನಲ್ಲಿ ನಿಶ್ಚಯಿಸಿದನು; ಮತ್ತು ತಾನೇ ಭೀಷ್ಮನೋ ಎಂಬಂತೆ ಮೈಮರೆತು ನಾಟಕವನ್ನು ನೋಡುವುದರಲ್ಲಿ ತಲ್ಲೀನನಾದನು.

ಹೀಗೆ ನಾಟಕವನ್ನು ನೋಡುತ್ತಾ ನೋಡುತ್ತಾ, ತರುಣನ ಬರಿದಾದ ಕಣ್ಣುಗಳು ಪುನಃ ಶುಭ್ರವಾಗಿ ತೇಜಸ್ವಿಯಾದುವು. ಬಿಗಿದಾಗಿ ಒತ್ತಲ್ಪಟ್ಟ ತುಟಿಗಳು ಲವಲವಿಕೆಯಿಂದ ವಿಂಗಡಿಸಲ್ಪಟ್ಟುವು. ಅನೇಕ ದಿವಸಗಳಿಂದ ಅವನಲ್ಲಿ ಮಾಯವಾದ ಯೌವನವು ಪುನಃ ಅವನ ಮೈಯೊಳಗೆ ಪರಿಪೂರ್ಣವಾಗಿ ನೆಲೆಗೊಂಡಿತು. ಅಷ್ಟರೊಳಗೆ ಭೀಷ್ಮನು ತನ್ನ ಮಹತ್ತಾದ ಪ್ರತಿಜ್ಞೆಯನ್ನು ಮಾಡುವ ಸಂದರ್ಭವೂ ಒದಗಿತು. ಸಭಿಕರೆಲ್ಲರೂ ಚಕಾರಶಬ್ದವನ್ನು ಕೂಡ ಎತ್ತದೆ ಸ್ತಂಭಿತರಾದರು. ತರುಣನು ತಾನು ಕೂತುಕೊಂಡ ಕುರ್ಚಿಯಲ್ಲಿ ಚಡಪಡಿಸತೊಡಗಿದನು. ಅವನ ಸರ್ವಸ್ವವೂ ಆ ಭೀಷ್ಮನು ಮಾಡುವ ಪ್ರತಿಜ್ಞೆಯ ಮೇಲೆ ಹೊಂದಿಕೊಂಡಿತ್ತು! ಕಟ್ಟಕಡೆಗೆ ವಿಶ್ವೇಶ್ವರರಾಯನು ಗದ್ಗದ ಕಂಠದಿಂದ ಆ ಭಯಂಕರವಾದ ಪ್ರತಿಜ್ಞೆಯನ್ನು ಸಭಿಕರನ್ನೆಲ್ಲಾ ರೋಮಾಂಚಗೊಳಿಸಿ ಪೂರೈಸಿದನು. ಕೂಡಲೇ ಆಕಾಶವೇ ಕೆಳಗೆ ಬಿದ್ದಂತೆ ಸಭಿಕರ ಕೈಚಪ್ಪಾಳೆಯು ಶಬ್ದವಾಯಿತು. ನಮ್ಮ ತರುಣನಾದರೊ ತನ್ನಲ್ಲಿ ಉಕ್ಕಿ ಬರುವ ಸಂತೋಷವನ್ನು ತಾಳಲಾರದೆ, ತಾನು ಕೂತುಕೊಂಡ ಕುರ್ಚಿಯಿಂದ ತಟಕ್ಕನೇ ಎದ್ದು ನಿಂತನು. ಒಂದು ಭೀಕರವಾದ ಸ್ವಪ್ನದಿಂದ ಎಚ್ಚತ್ತಂತಾದನು. ಅವನ ಮನಸ್ಸಿನಲ್ಲಿ ಶೀತಳವಾದ ಶಾಂತಿಯು



“ ಅಹಹ! ಕಲಿಯುಗವೆ! ಜಾತಿಯಿಲ್ಲ, ಧರ್ಮವಿಲ್ಲ, ಕುಲವಿಲ್ಲ, ದೇವರಿಲ್ಲ ”

ಬರಲಾರಂಭಿಸಿತು. ಹೆಚ್ಚೇಕೇ? ಅವನಿಗೆ ಬೇಕಾದ ಮಂತ್ರವೇ ದೊರಕಿತು. ಅವನು ನೂತನ ಯುವಕನಾದನು. ನಾಟಕವು ಅಂತ್ಯವಾಗಬೇಕಾದರೆ ಇನ್ನೂ ನಾಲ್ಕೈದು ಸಾಮಾನ್ಯ ದೃಶ್ಯಗಳಿದ್ದುವು. ಆದರೆ ಅವುಗಳಿಂದೇನು ಅವನಿಗೆ ಪ್ರಯೋಜನ? ಅವನಿಗೆ ಬೇಕಾದ ವೇದವಾಕ್ಯವು ದೊರಕಿತಲ್ಲವೇ? ತನ್ನನ್ನು ಪುನರಪಿ ಜೀವಿತನಾಗಿ ಮಾಡಿದ ಆ ವಿಶ್ವೇಶ್ವರಾಯನನ್ನು ಅವನು ಅತ್ಯಾದರದಿಂದ ಮನಸ್ಸಿನಲ್ಲಿಯೇ ವಂದಿಸುತ್ತಾ ನಾಟಕವು ಅಂತ್ಯವಾಗುವ ಮೊದಲೇ ನಾಟಕಶಾಲೆಯಿಂದ ಹೊರಗೆ ಬಂದು, ಬಿಲ್ಲಿನಿಂದ ಎಸೆದ ಬಾಣದಂತೆ ಹೋಗಿ ತನ್ನ ಮನೆಯನ್ನು ಸೇರಿದನು.

೨

ಅನೇಕ ವರ್ಷಗಳು ಸಂದಿವೆ......

ವಾಸುದೇವರಾಯರು ಶ್ರೀಕೃಷ್ಣದೇವಸ್ಥಾನದ ಮೊಕ್ತೇಸರರು. ದೇವಸ್ಥಾನದ ಕಾರ್ಯಗಳಲ್ಲಿ ಬಹಳ ಉತ್ಸಾಹಕಾರಿಗಳು. ತಮ್ಮ ತನುಮನಧನವನ್ನೆಲ್ಲಾ ತಮ್ಮ ಇಷ್ಟದೇವಾಲಯಕ್ಕೆ ಅರ್ಪಿಸಿದವರು. ದೇವಸ್ಥಾನದ ಶಿಷ್ಯವರ್ಗದಲ್ಲಿ ಮೊದಲನೆಯ ಸ್ಥಾನವನ್ನು ಪಡೆದವರು. ಭಕ್ತಿಮಾರ್ಗವೇ ಮುಕ್ತಿಗೆ ಯೋಗ್ಯಸಾಧನವೆಂಬ ಮತದಿಂದ ತುಂಬಿ ತುಳುಕುತ್ತಿದ್ದವರಾಗಿ ದೇವಸ್ಥಾನದ ಸುತ್ತುಮುತ್ತಲಿನ ಹೆಂಗಸರ ವಿಶೇಷ ಭಕ್ತಿಗೆ ಪಾತ್ರರಾಗಿದ್ದವರು. ಇಂದು ಅವರು ಸ್ನಾನ ಸಂಧ್ಯಾವಂದನೆ ದೇವತಾರ್ಚನೆ ಭೋಜನಾದಿಗಳನ್ನು ತೀರಿಸಿ, ತಮ್ಮ ವಾಸಸ್ಥಾನದ ಜಗಲಿಯಲ್ಲಿ ದೇವಸ್ಥಾನದ ಭಕ್ತಮಂಡಳಿಯವರೊಡಗೂಡಿ ಒಂದು ರತ್ನಗಂಬಳಿಯ ಮೇಲೆ ಒಡ್ಡೋಲಗಸ್ಥರಾಗಿದ್ದರು.

ಸದ್ಯಕ್ಕೆ ವಾಸುದೇವರಾಯರು ವಿಶೇಷವಾಗಿ ಮಾತನಾಡುವ ಭಾವದಲ್ಲಿದ್ದರು:—'ಅಹಹ! ಕಲಿಯುಗವೇ! ಜಾತಿಯಿಲ್ಲ, ಧರ್ಮವಿಲ್ಲ, ಕುಲವಿಲ್ಲ, ದೇವರಿಲ್ಲ! ನಮ್ಮ ಕಾಲದಲ್ಲಿ ಮಕ್ಕಳಿಗಾಗಲಿ, ಮುದುಕರಿಗಾಗಲಿ, ಶ್ರೀಮಂತರಿಗಾಗಲಿ ಬಡವರಿಗಾಗಲಿ ದೇವರೆಂದರೆ ಎಷ್ಟು ನಂಬಿಕೆ, ಜಾತಿಯೆಂದರೆ ಎಂತಹ ಪ್ರೀತಿವಾತ್ಸಲ್ಯ! ಕುಲಧರ್ಮವನ್ನು ಕಾಪಾಡುವುದರಲ್ಲಿ ಎಂತಹ ಸಾಹಸ! ಈಗಲಾದರೋ ಜಾತಿಯೆಂದರೆ

ಎರಡೇ ಜಾತಿ–ಗಂಡು ಮತ್ತು ಹೆಣ್ಣು; ಮಾಡುವುದೇ ಧರ್ಮ, ನಡೆದುದೇ ಆಚಾರ, ಗುರುಹಿರಿಯರೆಂದರೆ ಹೇಳಲಾರದಷ್ಟು ತುಚ್ಛೀಕಾರ! ಹೆಚ್ಚೇಕೆ? ದೇವರೇ ಇಲ್ಲವೆನ್ನುವವರಿಗೆ ಜಾತಿ, ಕುಲ, ಧರ್ಮ, ಆಚಾರವಿಚಾರಗಳೆಲ್ಲ ಏಕೆ? ನಾಶವಾಯಿತು. ಸರ್ವನಾಶವಾಯಿತು! ಕಲಿಯುಗದ ಪ್ರಾಬಲ್ಯ! ಪಾಶ್ಚಾತ್ಯರ ಶಿಕ್ಷಣ, ನವನಾಗರಿಕತೆ! ಇಂತಹ ನಾಸ್ತಿಕರೆಲ್ಲರ ಕಾಲುಗಳನ್ನು ಹಿಡಿದು, ಸಿಕ್ಕಿದವರ ಹತ್ತಿರ ಬೇಡಿಕೊಂಡು, ಹೇಗಾದರೂ ಮಾಡಿ ನಮ್ಮ ಶ್ರೀಕೃಷ್ಣದೇವಸ್ಥಾನವನ್ನು ಪುನಃ ಜೀರ್ಣೋದ್ಧಾರ ಮಾಡಿದಂತಾಯಿತು. ಕಲಿಕಾಲದಲ್ಲಿ ಅಲ್ಪನಾದ ನನ್ನಿಂದ ಇಂತಹ ಪುಣ್ಯಕಾರ್ಯವನ್ನು ಶ್ರೀಕೃಷ್ಣನು ಸಾಗಿಸಿದುದಕ್ಕೆ ನಾನು ನಿಜವಾಗಿಯೂ ಕೃತಾರ್ಥನು. ಆದರೆ–ಆದರೇನು? ಶ್ರೀಕೃಷ್ಣದೇವರಿಗೆ ಒಂದು ಚಿನ್ನದ ತೊಟ್ಟಿಲಿಲ್ಲದೇ ಇರುವವರೆಗೆ ನನ್ನ ಜನ್ಮವು ನಿರರ್ಥಕವು. ಮೊನ್ನೆ ಗೋಕುಲಾಷ್ಟಮಿ ದಿವಸ ದೇವಮೂರ್ತಿಯನ್ನು ತೂಗಾಡಿಸಲಿಕ್ಕೆ ಒಂದು ಚಿನ್ನದ ತೊಟ್ಟಿಲಿದ್ದರೆ ಎಷ್ಟು ಚಲೋದಿತ್ತು! ಚಿನ್ನದ ತೊಟ್ಟಿಲಿಲ್ಲದೆ ನಾವು ಅಷ್ಟು ಪ್ರಯತ್ನಪಟ್ಟರೂ ಗೋಕುಲಾಷ್ಟಮಿಯ ಸೌಂದರ್ಯವು ತೀರಾ ಮರೆಮಾಜಿ ಹೋಯಿತು. ದೇವರಿಗೋಸ್ಕರ ಚಿನ್ನದ ತೊಟ್ಟಿಲೊಂದನ್ನು ಮಾಡಿಸುವ ಪುಣ್ಯಕಾರ್ಯವು ನನ್ನಿಂದ ಸಾಧ್ಯವಾಗುವುದಾದರೆ ನನ್ನ ಜನ್ಮವು ನಿಜವಾಗಿಯೂ ಸಾರ್ಥಕವಾಗುತ್ತಿತ್ತು. ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದ ನನ್ನ ಪುಣ್ಯಕಾರ್ಯವು ನಿಜವಾಗಿಯೂ ಪೂರ್ಣತೆಯನ್ನು ಹೊಂದುತ್ತಿತ್ತು. ಆದರೆ ಮಾಡುವುದೇನು? ಈ ಕಲಿಕಾಲದಲ್ಲಿ ಇಂತಹ ಪುಣ್ಯಕಾರ್ಯಕ್ಕೆ ಕೂಡ ಒಂದು ಕಾಸನ್ನು ದಾನಮಾಡುವವರಿಲ್ಲ! ಕಾಫಿ ಹೊಟೇಲುಗಳಿಗೂ ಬೀಡೀ ಅಂಗಡಿಗಳಿಗೂ ಬೇಕಾದಷ್ಟು ಹಣ ಬರುತ್ತದೆ! ಮೋಟರ್ ಬಸ್ ಮಾಲಿಕರು ಎರಡು ದಿನಗಳಲ್ಲೇ ಲಕ್ಷಾಧಿಪತಿಗಳಾಗುತ್ತಾರೆ! ನಾಟಕ ಸಿನೇಮಾ ಇತ್ಯಾದಿಗಳು ಸಂಗ್ರಹಿಸುವ ಧನಕ್ಕೆ ಈ ಕಾಲದಲ್ಲಿ ಮಿತಿಯೇ ಇಲ್ಲ! ಆದರೆ ದೇವರ ಪುಣ್ಯಕಾರ್ಯಕ್ಕೆಂದು ಒಂದು ಕಾಸನ್ನು ಕೂಡ ದಾನ ಮಾಡುವವರು ಇಲ್ಲ! ಅಹಹಾ, ಕಾಲ

ಮಹಿಮೆಯೋ! ಆದರೂ ನಾನು ಬಿಡೆನು. ಶ್ರೀಕೃಷ್ಣದೇವರಿಗೆ ಒಂದು ಚಿನ್ನದ ತೊಟ್ಟಿಲನ್ನು ಮಾಡಿಸುವವರೆಗೆ ನಾನು ಸಾಯಲಾರೆನು. ಇದು ನಿಶ್ಚಯವು.'

ವಾಸುದೇವರಾಯರ ಮಾತುಗಳ ಆರ್ಭಟವನ್ನು ನೋಡಿ ಅವರನ್ನು ಸುತ್ತುಗೊಂಡ ಭಕ್ತಮಂಡಳಿಯವರು, 'ಭಲೆ, ಒಬ್ಬ ಜ್ಞಾನಿಯು ಮಾತನಾಡುತ್ತಾನೆ' ಎಂದು ತಿಳಿದುಕೊಂಡರು. ವಾಚಕರಲ್ಲನೇಕರು ಅಲ್ಲಿ ಇದ್ದರೆ ವಾಸುದೇವರಾಯರು ಕಾಲಮಹಿಮೆಯ ಮೇಲೆ ಕೊಟ್ಟ ಭಾಷಣದ ವಿಷಯ ಬೇರೆಯಾಗಿಯೇ ಆಲೋಚಿಸುತ್ತಿದ್ದರೆಂಬದರಲ್ಲಿ ಸಂಶಯವಿಲ್ಲ. ಆದರೆ ಶ್ರೀಕೃಷ್ಣದೇವಸ್ಥಾನದ ಆ ಭಕ್ತಮಂಡಳಿಯವರು ಹಾಗಲ್ಲ. ಅವರಿಗೆ ವಾಸುದೇವರಾಯರೇ ಅವರ ಮಾನಸಿಕ ದೇವರ ಹೊರಗಿನ ಪ್ರತಿಬಿಂಬವು. ವಾಸುದೇವರಾಯರ ಮಾತುಗಳೇ ಅವರಿಗೆ ವೇದವಾಕ್ಯವು. ಅಂತಹ ಮಾತುಗಳನ್ನು ಅವರವರ ಮನೆಗಳಲ್ಲಿ ಅವರವರ ಇಷ್ಟಮಿತ್ರರಿಗೂ ಹೆಂಡತಿ ಮಕ್ಕಳಿಗೂ ಪುನಃ ಪುನಃ ಹೇಳುವುದೇ ಅವರ ದೈನಿಕ ಮಂತ್ರೋಚ್ಚಾರಣೆಯು. ಒಂದು ವೇಳೆ ವಾಸುದೇವರಾಯರು ಅವರನ್ನು ಜರಿದು ಅವರಲ್ಲಿ ಪ್ರತಿಯೊಬ್ಬನನ್ನು ಹತ್ತತ್ತು ಅಡಿ ಉದ್ದವಾಗಿ ಎಳೆದರೂ, ಅದು ಕೂಡ ತಮಗೆ ಯೋಗ್ಯ ಪ್ರಾಯಶ್ಚಿತ್ತವೆಂದು ಅವರು ತಿಳಿದುಕೊಳ್ಳುತ್ತಿದ್ದರು. ಹೀಗಾದುದರಿಂದ ವಾಸುದೇವರಾಯರು ಈಗ ತಾನೇ ಕೊಟ್ಟ ಭಾಷಣವನ್ನು ಅವರು ಸಂಪೂರ್ಣವಾಗಿ ಶಿರಸಾವಹಿಸಿಕೊಂಡುದರಲ್ಲಿ ಆಶ್ಚರ್ಯವೇನೂ ಇಲ್ಲ. ಒಬ್ಬಿಬ್ಬರು ಅಲ್ಲಿಯೇ ಆ ದಿವ್ಯ ಉಚ್ಚಾರಣೆಗಳನ್ನು ಜ್ಞಾಪಕಾರ್ಥವಾಗಿ ಕಾಗದದ ಮೇಲೆ ಬರೆದುಕೊಂಡರು.

ಚಿನ್ನದ ತೊಟ್ಟಿಲು! ಶ್ರೀ ಕೃಷ್ಣದೇವರಿಗೊಂದು ಚಿನ್ನದ ತೊಟ್ಟಿಲು! ಮಹಾ ಪುಣ್ಯಕಾರ್ಯವಿದು! ಅಪಾರವಾದ ಪುಣ್ಯವನ್ನು ಗಳಿಸಿ ಸ್ವರ್ಗದಲ್ಲಿ ಒಂದು ಸ್ಥಳವನ್ನು ದೊರಕಿಸಿಕೊಳ್ಳುವುದಕ್ಕೆ ಇದೇ ಅತ್ಯಾನುಕೂಲವಾದ ಸಂದರ್ಭ! ಇಂತಹ ಸುಸಂದರ್ಭವು ಇನ್ನು ಒದಗಲಾರದು! ಚಿನ್ನದ ತೊಟ್ಟಿಲು! ಇಂತಹ ಪುಣ್ಯಕಾರ್ಯವನ್ನು ಸಾಗಿಸಿ

ಕೊಡುವುದಕ್ಕೆ ಯಾರು ಮುಂದೆ ಬರುವರು? ಚಿನ್ನದ ತೊಟ್ಟಿಲು! ಶ್ರೀ ಕೃಷ್ಣದೇವರಿಗೊಂದು ಚಿನ್ನದ ತೊಟ್ಟಿಲನ್ನು ಯಾರು ಕೊಡುವರು? . .

ಚಿನ್ನದ ತೊಟ್ಟಿಲಿಗೋಸ್ಕರ ಹಣವನ್ನು ಕೂಡಿಸಲಿಕ್ಕೆ ಆ ಭಕ್ತ ಮಂಡಳಿಯಲ್ಲಿ ಕೂಡಲೇ ಅನೇಕ ಆಲೋಚನೆಗಳಾದುವು. 'ಒಂದು ವಂತಿಗೆ ಪಟ್ಟಿಯನ್ನು ಕೂಡಲೇ ಹೊರಡಿಸಬೇಕು! ಮದುವೆ ಮುಂಜಿ ಚಪ್ಪರಗಳಲ್ಲಿ ತೊಟ್ಟಿಲಿಗೋಸ್ಕರ ಹಣವನ್ನು ಕೇಳಬೇಕು! ಮೋಟರ್ ಬಸ್ಸು ಸ್ಟೇಶನುಗಳಿಗೆ ಡಬ್ಬಿಗಳನ್ನು ಕಳುಹಿಸಬೇಕು! ವಾರಪತ್ರಿಕೆಗಳಲ್ಲಿ ಹಣಕ್ಕೋಸುಗ ಈ ಪುಣ್ಯ ಕಾರ್ಯವನ್ನು ಪ್ರಕಟಿಸಬೇಕು!' ಇವೇ ಮೊದಲಾದ ಆಲೋಚನೆಗಳನ್ನು ಆ ಭಕ್ತಮಂಡಳಿಯವರಲ್ಲಿ ಒಬ್ಬೊಬ್ಬರು ಒಂದೊಂದಾಗಿ ಕೊಟ್ಟರು. ಆದರೆ ಈ ಆಲೋಚನೆಗಳೆಲ್ಲಾ ಆಗುವಾಗ್ಗೆ ರಾಮಕೃಷ್ಣನೆಂಬ ತರುಣ ಭಕ್ತನೊಬ್ಬನು ಮಾತ್ರ ಏನೋ ಆಲೋಚಿಸುವವನಂತೆ ನಟಿಸುತ್ತಿದ್ದನು. ಸ್ವಲ್ಪ ಸಮಯದ ಮೇಲೆ ಅವನೂ ಮಾತಾಡಲಿಕ್ಕೆ ನಿಶ್ಚೈಸಿ, ಕೈಮುಗಿದುಕೊಂಡು ಎದ್ದು ನಿಂತನು. ಎಲ್ಲರೂ ಬಾಯಿ ತೆರೆದು ಅವನನ್ನೇ ನೋಡಲಾರಂಭಿಸಿದರು. ಅವನು ಮೊನ್ನೆ ತಾನೇ ಅವರ ಮಂಡಳಿಗೆ ಸೇರಿದವನಾಗಿದ್ದನು.

'ಅಲ್ಪನಾದ ನಾನು ಒಂದು ಮಾತನ್ನು ತಮ್ಮೆಲ್ಲರ ಅವಗಾಹನೆಗೆ ಅರ್ಪಿಸುತ್ತೇನೆ,' ಎಂದು ಅವನು ಪ್ರಾರಂಭಿಸಿದನು. 'ಶ್ರೀ ಕೃಷ್ಣ ದೇವರಿಗೊಂದು ಚಿನ್ನದ ತೊಟ್ಟಿಲನ್ನು ಮಾಡಿಸುವ ಮಹಾ ಪುಣ್ಯ ಕಾರ್ಯವನ್ನು ಸಾಗಿಸುವುದಕ್ಕೆ ನಮ್ಮೊಳಗೆ ಇಷ್ಟರ ವರೆಗೆ ಆದ ಆಲೋಚನೆಗಳು ನಮ್ಮ ಭಕ್ತಮಂಡಳಿಗೆ ತುಂಬಾ ಶ್ಲಾಘನೀಯವಾದವುಗಳೇ. ಆದರೆ ಅವುಗಳೆಲ್ಲವು ನಮಗೆ ಬಹಳ ಆಕರ್ಷಿತವಾಗಿ ತೋರಿಬಂದರೂ ತೊಟ್ಟಿಲನ್ನು ಕೂಡಲೇ ಮಾಡಿಸುವುದಕ್ಕೋಸ್ಕರ ಅವುಗಳು ಅಷ್ಟೊಂದು ಸಹಕಾರಿಯಲ್ಲವೆಂದು ನನ್ನ ಅಲ್ಪ ತಿಳುವಳಿಕೆಗೆ ಕಂಡುಬರುತ್ತದೆ. ಏನ್ನಾದರೂ, ನಮ್ಮೊಳಗೆ ಈಗ ಆದ ನಾಲ್ಕೈದು ಆಲೋಚನೆಗಳನ್ನು ನಾವು ಒಂದೇ ಸಾರಿ ಕೈಕೊಂಡರೂ ನಮಗೆ ಬೇಕಾದ ಹಣವು ಕಾಸು ದುಗ್ಗಾಣಿಗಳಿಂದ ಬಂದೀತಲ್ಲದೆ ಒಂದೇ ಸಾರಿ ಬರುವಂತಿಲ್ಲ. ಇದರಲ್ಲಿ

ಸಂಶಯುವಿಲ್ಲ. ಕಾಸು ದುಗ್ಗಾಣಿಗಳಿಂದ ಚಿನ್ನದ ತೊಟ್ಟಿಲು ಹೇಗೆ ಸಾಧ್ಯವಾದೀತು? ಒಂದು ವೇಳೆ ಸಾಧ್ಯವಾಗಬಹುದಾದರೂ ತತ್ಕಾಲಕ್ಕೆ ಎಂದೂ ಸಾಧ್ಯವಾಗುವಂತಿಲ್ಲ. . . . . ನಾಲ್ಕೈದು ವರ್ಷಗಳಾದರೂ ಹೋಗಬಹುದು. ಆದರೆ ಅದನ್ನು ಆದಷ್ಟು ಬೇಗ ದೊರಕಿಸಿಕೊಳ್ಳು ವಂತೆಯೇ ನಾವು ಪ್ರಯತ್ನಿಸಬೇಕಾದುದಲ್ಲವೇ? ಮುಂದಿನ ಗೋಕು ಲಾಷ್ಟಮಿಯೊಳಗಾದರೂ ನಮ್ಮ ದೇವಸ್ಥಾನಕ್ಕೆ ಒಂದು ಚಿನ್ನದ ತೊಟ್ಟಿಲು ಇರುವಂತೆ ನಾವು ಪ್ರಯತ್ನಪಡುವುದು ನಮ್ಮ ಕರ್ತವ್ಯ ವಲ್ಲವೆ? ಆದುದರಿಂದ ನಾನು ಮಾಡುವ ಅರಿಕೆಯೇನೆಂದರೆ, ನಾವು ಸುಮ್ಮನೆ ಬಡಬಗ್ಗರ ಕಾಸು ದುಗ್ಗಾಣಿಗಳನ್ನು ಏತಕ್ಕೆ ಇಸುಕೊಳ್ಳ ಬೇಕು? ಅವುಗಳಿಂದ ತೊಟ್ಟಿಲನ್ನು ಕೂಡಲೇ ಮಾಡಿಸುವ ಸಂಭವವೇನೂ ಇಲ್ಲ. ಇದರ ಬದಲಾಗಿ, ನಮ್ಮೂರಿನ ನಾಲ್ಕೈದು ಸದ್ಗೃಹಸ್ಥರ ಹತ್ತಿರ ಹೋಗಿ, ನಮ್ಮ ಶ್ರೀಕೃಷ್ಣ ದೇವಸ್ಥಾನಕ್ಕೆ ಒಂದು ಚಿನ್ನದ ತೊಟ್ಟಿಲು ಎಷ್ಟು ಅವಶ್ಯಕವೆಂದು ಅವರಿಗೆ ವಿವರಿಸೋಣ; ಆಗ ಅವರು ಇಂತಹ ಶ್ರೇಷ್ಠ ಪುಣ್ಯಕಾರ್ಯಕ್ಕೆ ಕೈ ಹಾಕಿ ಅದನ್ನು ಮುಂದರಿಸಲಿಕ್ಕೆ ಸರ್ವಥಾ ಸಮ್ಮತಿಸದೆ ಇರಲಿಕ್ಕಿಲ್ಲವೆಂದು ನನ್ನ ಅಭಿಪ್ರಾಯ. ತೊಟ್ಟಿಲು ಮುಂದಿನ ವರ್ಷದ ಗೋಕುಲಾಷ್ಟಮಿಯೊಳಗೆ ಸಾಧ್ಯವಾ . . . .'

ವಾಸುದೇವರಾಯರು ಕೂಡಲೇ ರಾಮಕೃಷ್ಣನ ಮಾತುಗಳನ್ನು ಅಡ್ಡಿ ಮಾಡಿದರು: 'ಅಯ್ಯೋ, ರಾಮಕೃಷ್ಣ, ನೀನು ಇನ್ನೂ ಯುವಕನು. ನಿನಗೆ ಲೋಕವ್ಯವಹಾರವು ಹೇಗೆ ತಿಳಿದೀತು? ಇಂತಹ ಪುಣ್ಯಕಾರ್ಯಕ್ಕೆ ಬಡಬಗ್ಗರು ಕೊಡುತ್ತಾರಲ್ಲದೆ ಸದ್ಗೃಹಸ್ಥರೆಂದೆನ್ನಿಸಿಕೊಳ್ಳುವವರು ಕೊಡುತ್ತಾರೆಯೇ? ನಾನು ಅವರ ಕೂಡೆ ಈ ಪ್ರಸ್ತಾಪವನ್ನೆತ್ತಲಿಲ್ಲ ವೆಂದು ತಿಳಿದಿದ್ದೀಯಾ?'

'ಏನು, ಈ ಪ್ರಸ್ತಾಪವು ಪೂರ್ವದಿಂದಲೂ ತಮ್ಮ ಮನಸ್ಸಿ ನಲ್ಲಿದೆಯೋ?'

'ಮತ್ತೇನು? ನಮ್ಮ ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದಂದಿನಿಂದ ಚಿನ್ನದ ತೊಟ್ಟಿಲಿನ ವಿಚಾರವು ನನ್ನ ಮನಸ್ಸನ್ನು

ಕೊರೆಯುತ್ತಲಿದೆ.–ಇಲ್ಲ, ರಾಮಕೃಷ್ಣನ ಆಲೋಚನೆಯ ಪ್ರಯೋಜನ ವಿಲ್ಲ. ನಾನು ಈ ಮೊದಲೇ ಅನೇಕ ಸದ್ಗೃಹಸ್ಥರೆಂದೆನ್ನಿಸಿಕೊಳ್ಳುವವ ರನ್ನು ತೊಟ್ಟಿಲಿನ ವಿಷಯವಾಗಿ ಅನೇಕ ಸಾರಿ ಕೇಳಿದ್ದೇನೆ. ಅವರಲ್ಲಿ ಒಬ್ಬರಾದರೂ ಅದನ್ನು ಮಾಡಿಸಿಕೊಡುವಂತಿಲ್ಲ. ಸಂಸಾರ ಸಾಗರದಲ್ಲಿ ಮುಳುಗಿದವರಿಗೆ ಇಂತಹ ಪುಣ್ಯಕಾರ್ಯಕ್ಕೆ ಕೈಹಾಕಲಿಕ್ಕೆ ಹೇಗೆ ಸಾಧ್ಯವಾದೀತು ?'

'ನಮ್ಮೂರಿನ ರಾಮಚಂದ್ರರಾಯರ ಹತ್ತಿರವಾದರೂ ಇದರ ಪ್ರಸ್ತಾಪವಾಗಿದೆಯೇ ? ಅವರನ್ನಾದರೂ ಕೇಳಬಹುದಿತ್ತಲ್ಲ !'

ರಾಮಚಂದ್ರರಾಯನ ಹೆಸರನ್ನು ಕೇಳಿದ ಕೂಡಲೇ, ಅದನ್ನು ಉಚ್ಚರಿಸಿದ ರಾಮಕೃಷ್ಣನ ವಿನಾ, ಭಕ್ತಮಂಡಳಿಯ ಇತರರೆಲ್ಲರೂ ದಿಗಿಲುಬಿದ್ದರು.'ಏನು, ಎಲ್ಲರನ್ನು ಬಿಟ್ಟು ಆ ರಾಮಚಂದ್ರರಾಯನನ್ನೇ?'

'ಹೌದು, ರಾಮಚಂದ್ರರಾಯರನ್ನೇ' ಎಂದು ರಾಮಕೃಷ್ಣನು ಒತ್ತರದಿಂದ ಹೇಳಿದನು. 'ಅವರಷ್ಟು ಧಾರ್ಮಿಕರೂ, ಕರುಣಾಶಾಲಿ ಗಳೂ, ಬಡಬಗ್ಗರ ಸ್ನೇಹಿತರೂ ನಮ್ಮವರಲ್ಲಿ ಯಾರೂ ಇಲ್ಲವೆಂದು ಅವ ರನ್ನು ಕಂಡವರೆಲ್ಲರೂ ಹೊಗಳುತ್ತಾರೆ. ವಿಷ್ಟೋ ಬಡ ವಿದ್ಯಾರ್ಥಿ ಗಳನ್ನು ಅವರು ತಮ್ಮ ಮನೆಯಲ್ಲಿಯೇ ಪೋಷಿಸುತ್ತಾರಂತೆ, ಇನ್ನೆಷ್ಟೋ ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುತ್ತಾರಂತೆ. ಬೀದಿಯಲ್ಲಿ ಅಲೆದಾ ಡುತ್ತಿರುವ ದಿಕ್ಕಿಲ್ಲದ ಮಕ್ಕಳಿಗೆ ಆಡಲಿಕ್ಕೆಂದು ಅವರು ಮೊನ್ನೆ ತಾನೇ ಪಟ್ಟಣದಲ್ಲಿ ಒಂದು ದೊಡ್ಡ ಸ್ಥಳವನ್ನು ಪಡೆದುಕೊಂಡಿದ್ದಾರಂತೆ. ಮಾತ್ರವಲ್ಲ, ಮೊನ್ನೆ ನಮ್ಮ ಹೈಸ್ಕೂಲಿನ ಹುಡುಗರು **ಭೀಷ್ಮಪ್ರತಿಜ್ಞೆ** ಎಂಬ ನಾಟಕವನ್ನು ಆಡಿ ತೋರಿಸುವಂತೆ ಶಾಲೆಗೆ ನೂರು ರೂಪಾಯಿ ಗಳನ್ನು ದಾನಮಾಡಿದ ಮಹಾಶಯರು ಕೂಡ ಅವರೇ ಆಗಿರುತ್ತಾರಂತೆ. ಅಂತಹ ಮಹಾನುಭಾವರಿಗೆ ದೇವರಿಗೋಸ್ಕರ ಒಂದು ಸಣ್ಣ ಚಿನ್ನದ ತೊಟ್ಟಿಲನ್ನು ಮಾಡಿಸಿಕೊಡುವ ಪುಣ್ಯಕಾರ್ಯವು, ಅದೇನು ದೊಡ್ಡದೇ?'

ವಾಸುದೇವರಾಯರು ರಾಮಕೃಷ್ಣನ ಈ ಮಾತುಗಳನ್ನು ಕೇಳಿ ತಲೆಯನ್ನು ಸ್ವಲ್ಪ ಬೇಸರದಿಂದ ಅಲ್ಲಾಡಿಸಿದರು. 'ಪ್ರಯೋಜನವಿಲ್ಲ,

ರಾಮಕೃಷ್ಣ! ರಾಮಚಂದ್ರರಾಯರು ಧಾರ್ಮಿಕರೇ ಆಗಿರಬಹುದು. ಆದರೆ ಅವರು ಶುದ್ಧ ನಾಸ್ತಿಕರು. ಅವರಿಂದ ನಮಗೇನೂ ಸಹಾಯ ದೊರಕುವಂತಿಲ್ಲ!'

'ಏನು, ರಾಮಚಂದ್ರರಾಯರು ನಾಸ್ತಿಕರೇ? ನಾಸ್ತಿಕರಾಗಿದ್ದರೆ ಅವರು ಮೊನ್ನೆ ಗೋಕುಲಾಷ್ಟಮಿಗೆ ದೇವಸ್ಥಾನಕ್ಕೆ ಬಂದು, ಇಡೀ ಪೂಜೆಯಾಗುವ ವರೆಗೆ ದೇವಸ್ಥಾನದಲ್ಲಿ ಉಳಕೊಳ್ಳುತ್ತಿದ್ದರೇ?'

ಇದನ್ನು ಕೇಳಿ ವಾಸುದೇವರಾಯರು ಚಕಿತರಾದರು. 'ಏನು, ರಾಮಚಂದ್ರರಾಯರು ಮೊನ್ನೆ ದೇವಸ್ಥಾನಕ್ಕೆ ಬಂದಿದ್ದರೇ? ನಿಜವಾಗಿಯೂ ಬಂದಿದ್ದರೆ?' ಎಂದು ಕೇಳಿ, ಉತ್ತರಕ್ಕೋಸ್ಕರ ಭಕ್ತಮಂಡಳಿಯವರ ಮುಖಗಳನ್ನು ನೋಡಿದರು. ಅವರೆಲ್ಲರೂ ರಾಮಕೃಷ್ಣನು ಹೇಳಿದುದನ್ನೇ ಅನುಮೋದಿಸಿದರು. ಕೂಡಲೇ, ವಾಸುದೇವರಾಯರು ಎದ್ದು ನಿಂತು ಭಕ್ತಮಂಡಳಿಯವರನ್ನು ನೋಡಿ ಹೀಗೆಂದರು:—'ಮಿತ್ರರೇ, ಇದು ನಿಜವಾಗಿಯೂ ಶ್ರೀಕೃಷ್ಣನ ಲೀಲೆಯು. ನಾಸ್ತಿಕರಾದ ರಾಮಚಂದ್ರರಾಯರು ಗೋಕುಲಾಷ್ಟಮಿಗೆ ದೇವಸ್ಥಾನಕ್ಕೆ ಬಂದಿದ್ದರೆಂದು ಕೇಳಲು ನಾನು ನಿಜವಾಗಿಯೂ ಸಂತೋಷಪಡುತ್ತೇನೆ. ನಮ್ಮ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದಂದಿನಿಂದ ಅವರು ನಮ್ಮ ದೇವಸ್ಥಾನದೊಳಗೆ ಕಾಲಿಡದೆ ಇದ್ದುದನ್ನು ನೀವೆಲ್ಲರೂ ಬಲ್ಲಿರಿ. ಆದರೆ ಅವರು ಮೊನ್ನೆ ಗೋಕುಲಾಷ್ಟಮಿಗೆ ಮಾತ್ರ ಏಕೆ ಬಂದಿರಬೇಕು? ಇದರಲ್ಲಿ ನನಗೆ ಶ್ರೀ ಕೃಷ್ಣನ ಲೀಲೆಯೇ ಪ್ರತ್ಯಕ್ಷವಾಗುತ್ತದೆ. ನಾಸ್ತಿಕರಾದ ಅವರನ್ನು ಆಸ್ತಿಕರಾಗಿ ಮಾಡಲಿಕ್ಕೆ ನಾನು ಎಷ್ಟೋ ಬಾರಿ ಪ್ರಯತ್ನಪಟ್ಟಿದ್ದೇನೆ, ಏಕೆಂದರೆ, ನಿಜವಾಗಿಯೂ ರಾಮಚಂದ್ರರಾಯರ ಹೃದಯವು ಬಂಗಾರದ ಗಟ್ಟಿಯಂತಿದೆ. ಅವರಷ್ಟು ಧಾರ್ಮಿಕರೂ, ಕರುಣಾಶಾಲಿಗಳೂ, ಒಳ್ಳೇ ಮನಸ್ಸಿನವರೂ ನಮ್ಮವರಲ್ಲಿ ಯಾರೂ ಇಲ್ಲವೆಂದು ನನಗೆ ಪೂರ್ವದಿಂದಲೇ ಗೊತ್ತಿತ್ತು. ಆದರೆ ಎಲ್ಲಾ ಬಣ್ಣ ಮಸಿ ನುಂಗಿದಂತೆ ಅವರ ನಾಸ್ತಿಕ ಮತವು ಮಾತ್ರ ಅವರ ಎಲ್ಲಾ ಸದ್ಗುಣಗಳನ್ನು ನುಂಗಿಬಿಟ್ಟಿತು. ಅವರು ನಾಸ್ತಿಕರಲ್ಲದಿದ್ದರೆ ನಾನು ದೇವಸ್ಥಾನಕ್ಕೋಸ್ಕರ ಈಗಲೂ ಬಯಸುತ್ತಿರುವ ಚಿನ್ನದ ತೊಟ್ಟಿಲು ಎಂದೋ ಆಗಿ

ಹೋಗುತ್ತಿತ್ತು. ಆದರೆ ಇನ್ನು ಚಿನ್ನದ ತೊಟ್ಟಿಲಿನ ವಿಷಯ ನಮಗೆ ಯೋಚನೆ ಬೇಡ. ಶ್ರೀಕೃಷ್ಣನೇ ಇದಕ್ಕಾಗಿ ದಾರಿಯನ್ನು ತೋರಿಸಿರುತ್ತಾನೆ–ನಾಸ್ತಿಕರಾದ ರಾಮಚಂದ್ರರಾಯರನ್ನು ಪುನಃ ಆಸ್ತಿಕರಾಗಿ ಮಾಡಿದ್ದಾನೆ! ನಾನು ಅನೇಕ ವರ್ಷಗಳಿಂದಲೂ ದೇವರಿಗಾಗಿ ಬಯಸಿದ ಚಿನ್ನದ ತೊಟ್ಟಿಲು ಈಗಲಾದರೂ ಸಾಧ್ಯವಾಗಬೇಕೆಂತಲೇ ಪರಮಾತ್ಮನು ಈ ಲೀಲೆಯನ್ನು ನಡೆಯಿಸಿರುತ್ತಾನೆ! ಇಂತಹ ಸಮಯದಲ್ಲಿ ರಾಮಚಂದ್ರರಾಯರು ಶ್ರೀಕೃಷ್ಣದೇವರಿಗೋಸ್ಕರ ಒಂದು ಚಿನ್ನದ ತೊಟ್ಟಿಲನ್ನು ನಿಶ್ಚಯವಾಗಿಯೂ ಮಾಡಿಸಿಕೊಡುವರೆಂದು ನನಗೆ ಭರವಸೆಯಿದೆ. ನಿಜವಾಗಿಯೂ ಇದು ಶ್ರೀಕೃಷ್ಣನ ಲೀಲೆ! ಬನ್ನಿ, ನಾವೆಲ್ಲರೂ ಈಗಲೇ ಹೋಗಿ ಚಿನ್ನದ ತೊಟ್ಟಿಲಿಗಾಗಿ ರಾಮಚಂದ್ರರಾಯರನ್ನು ಕೇಳಿಕೊಳ್ಳೋಣ!'

ಭಕ್ತಮಂಡಳಿಯವರೆಲ್ಲರೂ ಎದ್ದು ನಿಂತರು. ರಾಮಚಂದ್ರರಾಯನಿಗೆ ವಾಸುದೇವರಾಯರೇ ಶಿಫಾರಸು ಪತ್ರವನ್ನು ಕೊಟ್ಟ ಮೇಲೆ ಆ ಭಕ್ತಮಂಡಳಿಯವರು ಸುಮ್ಮನಿರುವರೇ? ಕೂಡಲೇ ಅವರಲ್ಲಿ ಪ್ರತಿಯೊಬ್ಬನ ಮಾತಿನಲ್ಲಿಯೂ ರಾಮಚಂದ್ರರಾಯನ ಹೊಗಳಿಕೆಯು ಪ್ರಾರಂಭವಾಯಿತು. ಒಬ್ಬನು ಅವನ ಸ್ವಾರ್ಥತ್ಯಾಗವನ್ನು ಕೊಂಡಾಡಿದನು, ಇನ್ನೊಬ್ಬನು ಅವನ ದಯಾದಾಕ್ಷಿಣ್ಯವನ್ನು ಕೊಂಡಾಡಿದನು, ಮೂರನೆಯವನು ಅವನನ್ನು ಬಡವರ ಸ್ನೇಹಿತನೆಂದು ಬಣ್ಣಿಸಿದನು, ನಾಲ್ಕನೆಯವನು ಮೂರನೆಯವನ ಮಾತನ್ನು ಅನುಮೋದಿಸಿದನು: 'ನಿಜವು, ಮೊನ್ನೆ ದೇವಸ್ಥಾನದಲ್ಲಿ ಆ ಬಡಪ್ರಾಣಿಯಾದ ವಿಶ್ವೇಶ್ವರನನ್ನು ನೋಡಿ, ಕನಿಕರಪಟ್ಟು ಎಲ್ಲರ ಮುಂದೆ ಅವನ ಹತ್ತಿರ ಒಂದು ತಾಸಿನವರೆಗೆ ಮಾತಾಡಲಿಕ್ಕೆ ಬಡವರ ಸ್ನೇಹಿತರಾದ ರಾಮಚಂದ್ರರಾಯರಿಗೆ ಅಲ್ಲದೆ ಮತ್ತಾವ ಸದ್ಗೃಹಸ್ಥನಿಗೆ ಧೈರ್ಯಬರುತ್ತಿತ್ತು?'

ಈ ಮಾತು ವಾಸುದೇವರಾಯರ ಕಿವಿಯ ಮೇಲೆ ಫಕ್ಕನೆ ಬಿತ್ತು. ಕೂಡಲೇ ಅವರು ರೇಗಿಕೊಂಡರು. 'ಏನು, ಆ ಮುಟ್ಠಾಳನಾದ ವಿಶ್ವೇಶ್ವರನೂ ದೇವಸ್ಥಾನಕ್ಕೆ ಬಂದಿದ್ದನೇ? ವೇಶ್ಯಾಸಕ್ತನೂ, ಕುಡಿಕನೂ,

ಆದ ಅವನಿಗೂ ಈಗ ದೇವರು ಬೇಕೇ? ನಾನು ಅಷ್ಟು ಪ್ರಯತ್ನ ಮಾಡಿ ಅವನನ್ನು ಜಾತಿಯಿಂದ ಬಹಿಷ್ಕರಿಸಿದ್ದೆನಲ್ಲ! ಅಂಥವನೂ ನಮ್ಮ ದೇವ ಸ್ಥಾನದೊಳಗೆ ಹೆಜ್ಜೆಯನ್ನಿಟ್ಟನೇ? ಅವನು ಇನ್ನೊಮ್ಮೆ ನಮ್ಮ ದೇವ ಸ್ಥಾನದೊಳಗೆ ಕಾಲಿಡದ ಹಾಗೆ ಜಾಗರೂಕರಾಗಿರಿ! ದೇವಸ್ಥಾನಕ್ಕೆ ಭಕ್ತಿಪೂರ್ವಕವಾಗಿ ಬರುವ ನಮ್ಮ ಹೆಂಗಸರ ಮಾನಮರ್ಯಾದೆಗೆ ಭಂಗ ಮಾದೀತು! ಅಹಹಾ, ಆ ಹೇಡಿಯು ದುಡುಕುತನವೇ!'

ರಾಮಕೃಷ್ಣನು—'ಪಾಪ, ಅವನ ಗಂಭೀರವಾದ ಸ್ವರವು ಅನೇಕ ವರ್ಷಗಳ ಹಿಂದೆಯೇ ಹಾಳಾಗಿ, ನಾಟಕ ರಂಗಸ್ಥಳಗಳಿಂದ ಅವನು ನಿರಾ ಕರಿಸಲ್ಪಟ್ಟು, ಅನೇಕ ವರ್ಷಗಳಿಂದೀಚೆಗೆ ಜೀವನಕ್ಕೆ ಉಪಾಯವಿಲ್ಲದೆ, ಈಗ ಅವನು ಬಹಳ ಕನಿಕರವಾದ ಸ್ಥಿತಿಯಲ್ಲಿದ್ದಾನಂತೆ.'

ವಾಸುದೇವರಾಯರು:—'ಆ ನರಾಧಮನಿಗೆ ಹಾಗೆಯೇ ಆಗ ಬೇಕು. ದೇವರು ಕೊಟ್ಟ ಶಿಕ್ಷೆ. ಜಾತಿಯಿಂದ ಬಹಿಷ್ಕರಿಸಲ್ಪಟ್ಟವ ನಾದರೂ ನಮ್ಮ ಪವಿತ್ರವಾದ ದೇವಸ್ಥಾನದೊಳಗೆ ಕಾಲಿಡಲಿಕ್ಕೆ ಅವನಿಗೆ ಬಂದ ಧೈರ್ಯವೇ! ಸೂಳೆ ಮನೆ ಸಿಗಲಿಲ್ಲವೇನೋ! ನಮ್ಮ ಹೆಂಗಸರ ಮುಖಗಳನ್ನು ಕಣ್ಣಿಕ್ಕಿ ನೋಡಲಿಕ್ಕೇನೋ!'

ಕಾಲಮಹಿಮೆಯಿಂದ ಚಿನ್ನದ ತೊಟ್ಟಿಲಿಗೂ, ಚಿನ್ನದ ತೊಟ್ಟಿಲಿಂದ ರಾಮಚಂದ್ರರಾಯನ ನಾಸ್ತಿಕ–ಆಸ್ತಿಕತನಕ್ಕೂ ನಡೆದ ವಾಸುದೇವ ರಾಯರ ಆರ್ಭಟವು ಈಗ ಆ ಬಡ ವಿಶ್ವೇಶ್ವರರಾಯನ ತಲೆಯ ಮೇಲೆ ಯಥೇಷ್ಟವಾಗಿ ಬಂದಿಳಿಯಿತು. ವಾಸುದೇವರಾಯರು ವಿಶ್ವೇಶ್ವರ ರಾಯನನ್ನು ಹೀಗೆಯೇ ಅರ್ಧ ತಾಸಿನವರೆಗೆ ಜರಿದು, ಜಗಿದು, ಅರ್ಧಜೀವ ಮಾಡಿ, ಅನೇಕ ಸಾರಿ ಘೋರನರಕಾಗ್ನಿಗೆ ಆಹುತಿ ಕೊಟ್ಟು, ಕೊನೆಗೆ ಬೇಸರಪಟ್ಟು, 'ಆ ಮಟ್ಟಾಳನಾದ ವಿಶ್ವೇಶ್ವರನು ಸಾಯಲಿ! ನಾವು ಚಿನ್ನದ ತೊಟ್ಟಿಲಿಗಾಗಿ ರಾಮಚಂದ್ರರಾಯರಿದ್ದಲ್ಲಿಗೆ ಹೋಗೋಣ' ಎಂದು ವಿಶ್ವೇಶ್ವರರಾಯನನ್ನು ಅಲ್ಲಿಯೇ ಸಮಾಪ್ತಿ ಗೊಳಿಸಿ, ಆ ಭಕ್ತಮಂಡಳಿ ಪರಿವಾರದೊಡನೆ ರಾಮಚಂದ್ರರಾಯರ ಗೃಹಾಭಿಮುಖವಾಗಿ ಹೋದರು.

೩

ಶ್ರೀ ಕೃಷ್ಣದೇವಸ್ಥಾನಕ್ಕೊಂದು ಚಿನ್ನದ ತೊಟ್ಟಿಲು ಎಷ್ಟು ಅವಶ್ಯಕರವಾದುದೆಂದು ವಾಸುದೇವರಾಯರು ಉತ್ಸಾಹದಿಂದ ಹೇಳುವುದನ್ನು ರಾಮಚಂದ್ರರಾಯನು ಅರ್ಧತಾಸಿನವರೆಗೆ ಮನಸ್ಸುಕೊಟ್ಟು ಕೇಳಿದನು. ಭಕ್ತಮಂಡಳಿಗಾಗಿ ಅವನು ತನ್ನ ಅಮೂಲ್ಯವಾದ ಸಮಯವನ್ನು ಕೊಟ್ಟಿದ್ದನು. ಅವರನ್ನು ಆದರಿಸಿ ಉಪಚಾರ ಮಾಡುವಾಗಲೆಲ್ಲ ನಾಸ್ತಿಕನೆಂದು ತನ್ನನ್ನು ತುಚ್ಛೀಕರಿಸುವ ಅವರಿಗೆ ತನ್ನಲ್ಲಿ ಏನು ಕೆಲಸ ವಿರಬಹುದೆಂದು ಆಲೋಚಿಸುತ್ತಿದ್ದನು. ಕಟ್ಟಕಡೆಗೆ ತಾನು ಗೋಕುಲಾಷ್ಟಮಿಗೆ ದೇವಸ್ಥಾನಕ್ಕೆ ಹೋದುದ್ದೇ ಅವರು ಈಗ ಅವನಲ್ಲಿಗೆ ಬಂದಿರಬೇಕೆಂತಲೂ, ತಾನು ಈಗ ಪುನಃ ಆಸ್ತಿಕನಾಗಿದ್ದೇನೆಂದು ಅವರು ತಿಳಿದುಕೊಂಡಿರಬಹುದೆಂತಲೂ ಊಹಿಸತೊಡಗಿದನು. ಈ ಊಹನೆಯು ಅವನ ಮನಸ್ಸಿಗೆ ಹೊಳೆಯುತ್ತಲೇ ತನ್ನ ಮುಖವನ್ನಾವರಿಸಿಕೊಳ್ಳುತ್ತಿದ್ದ ಒಂದು ಮುಗುಳ್ನಗೆಯನ್ನು ಅವನು ಬಲವಾಗಿ ತಡೆದುಕೊಂಡನು. ಅವನ ಊಹನೆಯು ಬಹಳ ಮಟ್ಟಿಗೆ ಸತ್ಯವಾಗಿತ್ತೆಂದು ಅವನಿಗೆ ಕೂಡಲೇ ತಿಳಿದುಬಂತು. ಆಷ್ಟಾದರೂ ಚಿನ್ನದ ತೊಟ್ಟಿಲಿಗೋಸ್ಕರ ಅವನು ಸಿದ್ಧನಾಗಿರಲಿಲ್ಲ. ಅದು ಅವನನ್ನು ಸ್ವಲ್ಪ ವಿಸ್ಮಿತನನ್ನಾಗಿಯೇ ಮಾಡಿತೆಂದು ನಾವು ಗ್ರಹಿಸಬೇಕು.

ವಾಸುದೇವರಾಯರು ಅರ್ಧಘಂಟೆಯ ವರೆಗೆ ಚಿನ್ನದ ತೊಟ್ಟಿಲಿನ ವಿಷಯವಾಗಿ ರಾಮಚಂದ್ರರಾಯನೊಂದಿಗೆ ಏನು ಮಾತಾಡಿದರೆಂದು ಅಕ್ಷರಶಃ ತಿಳಿಸಲು ನಮಗೆ ಸಾಧ್ಯವಿಲ್ಲ. ಏಕೆಂದರೆ ವಾಸುದೇವರಾಯರಿಗಿದ್ದ ವಾಕ್ಚಾತುರ್ಯವು ನಮಗೆ ಇಲ್ಲ. ಆದರೂ ಹಾಲಿಲ್ಲದಾಗ ನೀರಾದರೂ ಹಿಡಿಯುವುದಲ್ಲವೇ? ರಾಮಚಂದ್ರರಾಯನಿದ್ದಲ್ಲಿಗೆ ಬಂದು, ಅವನೊಂದಿಗೆ ವಿಶೇಷ ಕುಶಲಪ್ರಶ್ನೆಗಳನ್ನಾಡಿ, ಅವನು ದಯಮಾಡಿಸಿದ ಕಾಫಿ ಫಲಾಹಾರವನ್ನೂ, ಸ್ವೀಕರಿಸಿ, ಅವನು ಬೇಸರದಿಂದ ಒಂದೆರಡು ಆಕಳಿಕೆಗಳನ್ನು ಬಲವಾಗಿ ತಡೆದುಕೊಳ್ಳುವುದನ್ನು ನೋಡಿ, ಇನ್ನು

ಚಿನ್ನದ ತೊಟ್ಟಿಲಿನ ಪ್ರಸ್ತಾಪವನ್ನು ತೆಗೆಯಲಿಕ್ಕೆ ವಿಳಂಬವಾಡ ಬಾರದೆಂದು ತಿಳಿದುಕೊಂಡು, ರಾಮಚಂದ್ರರಾಯನ ಮುಖವನ್ನೇ ನೋಡುತ್ತಾ ವಾಸುದೇವರಾಯರು ತಮ್ಮ ಭಾಷಣವನ್ನು ಪ್ರಾರಂಭಿಸಿದರು.

'ರಾಮಚಂದ್ರರಾಯರೇ, ನಾವು ಇಲ್ಲಿ ಬಂದು ಬಹಳ ಸಮಯವಾಯಿತು. ಕಾಫಿ ಫಲಾಹಾರವನ್ನೂ ಸ್ವೀಕರಿಸಿದಂತಾಯಿತು. ನಾವು ಇಲ್ಲಿ ಏತಕ್ಕೆ ಬಂದಿದ್ದೇವೆಂದು ನೀವು ಇಷ್ಟರತನಕ ಆಲೋಚಿಸದೆ ಇರಲಾರಿರಿ. ಇನ್ನು ನಿಮ್ಮ ಸಮಯವನ್ನು ವ್ಯರ್ಥವಾಡದೆ ನಾವು ನಿಮ್ಮಲ್ಲಿಗೆ ಈಗ ಬಂದ ಉದ್ದೇಶವನ್ನು ನಿಮಗೆ ತಿಳಿಸುವೆನು.

'ಅನೇಕ ವರ್ಷಗಳಿಂದಲೂ ನಮ್ಮ ದೇವಸ್ಥಾನದೊಳಗೆ ಹೆಜ್ಜೆಯನ್ನಿಡದೆ ಇದ್ದ ನೀವು ಕಳೆದ ಗೋಕುಲಾಷ್ಟಮಿಯ ದಿನ ಕುಟುಂಬ ಸಮೇತರಾಗಿ ದೇವಸ್ಥಾನಕ್ಕೆ ಬಂದು ಶ್ರೀಕೃಷ್ಣದೇವರ ಪ್ರಸಾದವನ್ನು ಸ್ವೀಕರಿಸಿದುದಕ್ಕೆ ನಾನೂ ನಮ್ಮ ದೇವಸ್ಥಾನದ ಈ ಭಜಕರೂ ಪಡುವ ಆನಂದಕ್ಕೆ ಮಿತಿಯೇ ಇಲ್ಲ. ಅನೇಕ ಕಾಲದಿಂದ ಈ ತನಕ ನೀವು ದೇವಸ್ಥಾನಕ್ಕೆ ಬಾರದೆ ಇದ್ದುದರ ಕಾರಣವು ನಿಮಗೇ ತಿಳಿದಿದೆ. ಅದನ್ನು ಊಹಿಸಲಿಕ್ಕೆ ನನಗೆ ಸಾಧ್ಯವಿಲ್ಲ. ಆದರೆ ನಾನು ಪೂರ್ವದಿಂದಲೂ ನಮ್ಮ ದೇವಸ್ಥಾನದ ವೃದ್ಧಿಗೋಸ್ಕರ ಪಡುವ ಸಾಹಸವನ್ನು ನೀವು ಪ್ರತ್ಯಕ್ಷ ನೋಡಿಲ್ಲವಾದರೂ, ಇತರರಿಂದಲಾದರೂ ಕೇಳಿರಬಹುದೆಂದು ಊಹಿಸುತ್ತೇನೆ. ಅನೇಕ ವರ್ಷಗಳ ಹಿಂದಿನಿಂದಲೂ ನಾನು ಶ್ರೀಕೃಷ್ಣನ ಪ್ರೇರಣೆಯಂತೆ ಸಂಸಾರಸಾಗರದಿಂದ ತಪ್ಪಿಸಿಕೊಂಡು, ನನ್ನ ತನುಮನ ಮತ್ತು ಅಲ್ಪವಾದ ದ್ರವ್ಯವನ್ನೆಲ್ಲಾ ನಮ್ಮ ದೇವಸ್ಥಾನಕ್ಕೆ ಅರ್ಪಿಸಿ, ನನ್ನ ಜೀವಮಾನದಲ್ಲಿ ಉಳಿದಿರುವ ಈ ಅಲ್ಪ ಸಮಯವನ್ನು ಶ್ರೀಕೃಷ್ಣನ ಚರಣಾರವಿಂದಗಳ ಆರಾಧನೆಯಲ್ಲಿಯೇ ಕಳೆಯುವಂತೆಯೂ, ದೇವಸ್ಥಾನದ ಕಾರ್ಯಗಳನ್ನೆಲ್ಲ ಕುಂದಿಲ್ಲದಂತೆಯೂ, ಲೋಪವಿಲ್ಲದಂತೆಯೂ ನಡೆಯಿಸುವಂತೆ ಪ್ರಯತ್ನಿಸುತ್ತಿದ್ದೇನೆಂಬ ಸಂಗತಿಯು ಕೂಡ ನಿಮಗೆ ತಿಳಿದಿದ್ದಿರಬಹುದು. ಇದಕ್ಕೆ ನಮ್ಮ ದೇವಸ್ಥಾನದ ಈಗಿನ ಉತ್ಕೃಷ್ಟ

ವಾಪ ಸ್ಥಿತಿಯೇ ದೃಷ್ಟಾಂತವಾಗಿದೆ. ಅದೂ ಅಲ್ಲದೆ ನಾನು ಸ್ವಾರ್ಥ ಬುದ್ಧಿಯಿಂದ ನನ್ನ ಪಾರಮಾರ್ಥವನ್ನು ಮಾತ್ರ ಬಯಸದೆ, ದೇವಸ್ಥಾನದ ಭಜಕಮಂಡಳಿಯವರಲ್ಲಿಯೂ ಆ ದಿವ್ಯವಾದ ಭಕ್ತಿರಸವು ಸ್ಥಿರವಾಗಿ ನೆಲೆಗೊಳ್ಳುವಂತೆ ನಾನು ಈ ಅನೇಕ ವರ್ಷಗಳಿಂದಲೂ ಸಾಧಿಸುತ್ತೇನೆಂಬ ಸಂಗತಿಯನ್ನೂ ನೀವು ತಿಳಿಯದೆ ಇರಲಾರಿರಿ. ನನ್ನ ಈ ಪ್ರಯತ್ನಗಳಿಗೆ ನನ್ನೊಂದಿಗೆ ಇಲ್ಲಿ ಬಂದಿರುವ ಈ ದೇವಭಕ್ತರೇ ದೃಷ್ಟಾಂತವಾಗಿದ್ದಾರೆ.

'ನಮ್ಮ ದೇವಸ್ಥಾನಕ್ಕಾಗಿ ನಾನು ಇಷ್ಟೆಲ್ಲವನ್ನು ಸಾಧಿಸಿಕೊಂಡರೂ, ನನ್ನ ಮನೋರಥಗಳಲ್ಲಿ ಕೇವಲ ಅಲ್ಪವೇ ಕೈಗೂಡಿದ್ದಾವೆಂದು ನಾನು ಹೇಳಲಿಕ್ಕೆ ಹಿಂಜರಿಯುವುದಿಲ್ಲ. ಈ ಪ್ರಪಂಚದಲ್ಲಿ ಯಾರಿಗೆ ತಾನೆ ತನ್ನ ಎಲ್ಲ ಮನೋರಥಗಳನ್ನು ಕೈಗೂಡಿಸಲಿಕ್ಕೆ ಸಾಧ್ಯವಾಗುವುದು? ಹಾಗೆ ಸಾಧ್ಯವಾಗುವುದಾದರೆ ಆತನು ದೇವತಾಪುರುಷನೇ ಆಗಿರುವನು. ಇದನ್ನು ನಾನು ಮರೆಯುವುದಿಲ್ಲ. ಅಂತಹ ಉನ್ನತ ಪದವಿಯನ್ನೇ ನಾನು ಈಗ ಬಯಸುತ್ತೇನೆಂದು ಹೇಳಿದರೆ ಅದು ಹಾಸ್ಯಾಸ್ಪದಕರವಾದ ಮಾತಾಗುವುದೆಂದು ನನಗೆ ಗೊತ್ತುಂಟು. ಆದರೂ ನನ್ನಿಂದ ಇಷ್ಟರವರೆಗೆ ನೆರವೇರಿಸಲಿಕ್ಕಾಗದ ನನ್ನದೊಂದು ಮನೋರಥವು ತೀರಾ ಅಸಾಧ್ಯವಾದುದಲ್ಲ. ನನ್ನಲ್ಲಿ ಅನೇಕ ಕಾಲದಿಂದಲೂ ವಾಸಿಸಿಕೊಂಡಿದ್ದ ಈ ಮನೋರಥವು ಈಗಲಾದರೂ ಕೈಗೂಡಬೇಕೆಂತಲೇ ಪರಮಜ್ಞಾನಿಯಾದ ಶ್ರೀಕೃಷ್ಣನು ದೇವಸ್ಥಾನಕ್ಕೆ ಎಂದೂ ಬಾರದ ನಿಮ್ಮನ್ನು ಮೊನ್ನೆ ಗೋಕುಲಾಷ್ಟಮಿಗೆ ಬರುವಂತೆ ಮಾಡಿಸಿದ್ದಾನೆ. ನನ್ನ ಈ ಮನೋರಥವನ್ನು ನಿಮ್ಮ ಕೈಯಿಂದಲೇ ಕೈಗೂಡಿಸಬೇಕೆಂಬ ಶ್ರೀಕೃಷ್ಣನ ಅಪ್ಪಣೆಯಿಂದಲೇ ನಾವೆಲ್ಲರೂ ಕೂಡಿ ಆ ಇರಾಧೆಯಿಂದ ಈಗ ನಿಮ್ಮಲ್ಲಿಗೆ ಬಂದುದಾಗಿರುತ್ತದೆ.'

ವಾಸುದೇವರಾಯರು ಕೊಂಚ ಸಮಯ ಮಾತಾಡುವುದನ್ನು ನಿಲ್ಲಿಸಿದರು. ಆದರೆ ರಾಮಚಂದ್ರರಾಯನು ಚಾ, ಚೂ ಶಬ್ದವನ್ನು ಕೂಡ ಎತ್ತಲಿಲ್ಲ. ಅವನು ವಾಸುದೇವರಾಯರ ಮಾತುಗಳಿಂದ ತನ್ನಲ್ಲಿ

ಎಬ್ಬಿಸಲ್ಪಟ್ಟ ಆಲೋಚನೆಗಳಲ್ಲಿಯೇ ಮಗ್ನನಾಗಿದ್ದನು. ವಾಸುದೇವ ರಾಯರು ತಮ್ಮ ಭಾಷಣವನ್ನು ಮುಂದರಿಸುವವರಾದರು:

"ನನ್ನ ಈ ಮನೋರಥವು ಏನಾಗಿರಬಹುದೆಂದು ನೀವು ಆಲೋಚಿಸುತ್ತಿರಬಹುದು. ಅದನ್ನು ನೆರವೇರಿಸಿ ಕೊಡುವುದು ನಿಮ್ಮಂತಹ ಔದಾರ್ಯಬುದ್ಧಿಯುಳ್ಳವರಿಗೆ ಅದೇನೂ ದೊಡ್ಡದಲ್ಲ. ನೀವು ಮೊನ್ನೆ ಗೋಕುಲಾಷ್ಟಮಿಗೆ ದೇವಸ್ಥಾನಕ್ಕೆ ಬಂದಿದ್ದೀರಷ್ಟೇ? ಗೋಕುಲಾಷ್ಟಮಿಯನ್ನು ಅದಷ್ಟು ವಿಜೃಂಭಣೆಯಿಂದ ನೆರವೇರಿಸಲಿಕ್ಕೆ ನಾನು ಮಾಡಿದ ಏರ್ಪಾಡುಗಳನ್ನೆಲ್ಲಾ ನೀವು ಪ್ರತ್ಯಕ್ಷದೃಷ್ಟಿಯಿಂದ ನೋಡಿರುವಿರಿ. ದೇವತಾಕಾರ್ಯಗಳನ್ನು ಅದಷ್ಟು ಸಾಂಗತ್ಯದಿಂದಲೂ, ಸೊಬಗಿನಿಂದಲೂ ನಡೆಯಿಸಲಿಕ್ಕೆ ನಾನಾಗಲಿ ಇಲ್ಲಿ ನೆರೆದಿರುವ ನನ್ನ ಮಿತ್ರರಾಗಲಿ ಹಿಂಜರಿಯುವವರಲ್ಲ. ಆದುದರಿಂದ ಈ ವರ್ಷದ ಗೋಕುಲಾಷ್ಟಮಿಗೆ ಊರಿನ ಸದ್ಗೃಹಸ್ಥರೆಲ್ಲರೂ ಬರುವಂತೆ ಗೋಕುಲಾಷ್ಟಮಿಯನ್ನು ಕಳೆದ ಎಲ್ಲಾ ವರ್ಷಗಳಿಗಿಂತಲೂ ವಿಶೇಷ ವಿಜೃಂಭಣೆಯಿಂದ ನಡೆಯಿಸಿದ್ದಾಗಿರುತ್ತದೆ. ಹೆಂಗಸರು ಮತ್ತು ಮಕ್ಕಳು ಕೂಡ ನಮ್ಮನ್ನು ದೇವತಾರಾಧನೆಯಲ್ಲಿ ಕೂಡುವಂತೆ ನಾವು ಮಾಡಿದ ಏರ್ಪಾಡುಗಳನ್ನೆಲ್ಲಾ ನೀವೇ ಪ್ರತ್ಯಕ್ಷ ನೋಡಿದಿರಿ. ದೇವಸ್ಥಾನಕ್ಕೆ ಬಂದವರೆಲ್ಲರ ಮನಸ್ಸನ್ನು ಬಲವಾಗಿ ಆಕರ್ಷಿಸಿ, ಅವರ ಹೃದಯಗಳಲ್ಲಿ ದಿವ್ಯವಾದ ಪ್ರೇಮರಸವು ಹರಿದಾಡುವಂತೆ ಶ್ರೀಕೃಷ್ಣಮೂರ್ತಿಯನ್ನು ಅತಿ ಮನೋಹರವಾಗಿ ದಿನಕ್ಕೆ ಒಂದೊಂದು ವಿಧವಾಗಿ ಅಲಂಕರಿಸಿದ್ದಾಗಿರುತ್ತದೆ. ದೇವಮೂರ್ತಿಯು ಮಾತ್ರವಲ್ಲ, ನಮ್ಮ ಇಡೀ ದೇವಸ್ಥಾನವೇ ಆ ಎಂಟೊಂಭತ್ತು ದಿನಗಳಲ್ಲಿ ವಿಶೇಷ ಶೋಭೆಯಿಂದ ಕಂಗೊಳಿಸುವಂತೆ ನಾವು ಅದನ್ನು ಶೃಂಗರಿಸಿದ ವಿಧಾನಗಳು ವರ್ಣಿಸುವಂಥವುಗಳಲ್ಲ. ಆ ಎಂಟೊಂಭತ್ತು ದಿನಗಳಲ್ಲಿ ನಮ್ಮ ದೇವಸ್ಥಾನವೆಂಬುದು ಶ್ರೀಕೃಷ್ಣನ ಪ್ರತ್ಯಕ್ಷ ನಂದಗೋಕುಲವಾಗಿರುವುದೋ ಎಂಬಂತೆ ತೋರುತ್ತಿತ್ತೆಂದು ನಮ್ಮ ಊರಿನ ಹೆಂಗಸರೆಲ್ಲರೂ ಆಡುತ್ತಿರುವರು. ಅಂತಹ ರಮ್ಯವಾದ ನೋಟವನ್ನು ಅವರು ತಮ್ಮ ಇಡೀ

ಜೀವಮಾನದಲ್ಲಿ ಮರೆಯಲಿಕ್ಕಿಲ್ಲ. ನಾಟಕರಂಗಸ್ಥಳಗಳು ಕೂಡ ಅಷ್ಟು ಶೋಭಾಯಮಾನವಾಗಿಯೂ, ಮನೋಹರವಾಗಿಯೂ ಇರಲಿಕ್ಕಿಲ್ಲ ವೆಂದು ನಾನು ನಂಬುತ್ತೇನೆ. ನಮ್ಮ ಈ ವರ್ಷದ ಗೋಕುಲಾಷ್ಟಮಿಗೆ ಎಂತಹ ನಾಸ್ತಿಕನು ಕೂಡ ಬಂದಿದ್ದರೂ ಅವನು ದೃಢ ಆಸ್ತಿಕನಾಗದೆ ಹಿಂತಿರುಗಿ ಹೋಗುತ್ತಿದ್ದಿಲ್ಲ. ಈ ವರ್ಷದ ಗೋಕುಲಾಷ್ಟಮಿಗಾಗಿ ನಾವು ಮಾಡಿದ ಸಾಧನಗಳೆಲ್ಲವೂ ಸಫಲವಾಗಿವೆ ಎಂಬುದಕ್ಕೆ ದೇವ ಸ್ಥಾನಕ್ಕೆ ಎಂದೂ ಬಾರದ ನಿಮ್ಮಂತಹ ಮಹಾಶಯರು ಈ ಸಾರಿ ಬಂದದ್ದೇ ಉತ್ಕೃಷ್ಟವಾದ ದೃಷ್ಟಾಂತವಾಗಿರುತ್ತದೆ!'

ರಾಮಚಂದ್ರರಾಯನು ಒಂದೆರಡು ಆಕಳಿಕೆಗಳನ್ನು ತಡೆದು ಕೊಂಡನು. ಆದರೆ ಯಾವ ಮಾತನ್ನಾದರೂ ಆಡಲಿಲ್ಲ. ವಾಸುದೇವ ರಾಯರಾದರೋ ತಾವು ಹೇಳಿದ ಸಂಗತಿಗಳೆಲ್ಲವೂ ರಾಮಚಂದ್ರರಾಯನ ಮನಸ್ಸಿನಲ್ಲಿ ಚೆನ್ನಾಗಿ ನಾಟಿಕೊಂಡಿದ್ದರಿಂದಲೇ ಅವನು ಯಾವ ಮಾತನ್ನೂ ಆಡಲಿಲ್ಲವೆಂದು ತಿಳಿದುಕೊಂಡು ತಮ್ಮ ಭಾಷಣವನ್ನು ಇನ್ನೂ ಮುಂದರಿಸುವವರಾದರು :

'ನಾವು ಈ ವರ್ಷದ ಗೋಕುಲಾಷ್ಟಮಿಯನ್ನು ಇಷ್ಟು ವಿಜೃಂಭಣೆ ಯಿಂದ ನಡೆಯಿಸಿದುದಾದರೂ, ನನ್ನ ಮನಸ್ಸನ್ನು ಅನೇಕ ಕಾಲ ದಿಂದಲೂ ಕೊರೆಯುತ್ತಲಿದ್ದ ನನ್ನದೊಂದು ಮನೋರಥವು ಮಾತ್ರ ಈ ಗೋಕುಲಾಷ್ಟಮಿಯ ಸಮಯದಲ್ಲಿ ಕೂಡ ಸಾರ್ಥಕವಾಗದೆ ಹೋಯಿತು. ಇದರಿಂದ ನಮ್ಮ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದ ನನ್ನ ಪುಣ್ಯಕಾರ್ಯವು ಕೂಡ ಸಂಪೂರ್ಣವಾಗದೆ ಹೋಗಿದೆ. ನನ್ನ ಈ ಮನೋರಥವೇನೆಂದು ನೀವು ಕೇಳಬಹುದು. ಒಂದು ಚಿನ್ನದ ತೊಟ್ಟಿಲು! ನಮ್ಮ ಶ್ರೀಕೃಷ್ಣದೇವಸ್ಥಾನಕ್ಕೊಂದು ಚಿನ್ನದ ತೊಟ್ಟಿಲು!....'

ರಾಮಚಂದ್ರರಾಯನು ಅತ್ಯಾಶ್ಚರ್ಯದಿಂದ 'ಚಿನ್ನದ ತೊಟ್ಟಿಲು!' ಎಂದನು.

ವಾಸುದೇವರಾಯರು 'ನಿಜ, ಒಂದು ಚಿನ್ನದ ತೊಟ್ಟಿಲು!

ಗೋಕುಲಾಷ್ಟಮಿಯ ಸಮಯದಲ್ಲಿ ಶ್ರೀಕೃಷ್ಣಮೂರ್ತಿಯನ್ನು ತೂಗಾಡಿಸಲಿಕ್ಕೆ ಒಂದು ಚಿನ್ನದ ತೊಟ್ಟಿಲು! ಅದನ್ನು ಮಾಡಿಸಿಕೊಡುವ ಭಾರವೆಲ್ಲಾ ಈಗ ನಿಮ್ಮದಾಗಿದೆ! ಅದೊಂದು ನನ್ನ ಮನೋರಥವು ಕೈಗೂಡಿದರೆ ನಾನು ನಿಜವಾಗಿಯೂ ಧನ್ಯನಾಗುತ್ತಿದ್ದೆನು! ಶ್ರೀಕೃಷ್ಣನಿಗೆ ಅರ್ಪಿಸಿದ ನನ್ನ ಜನ್ಮವು ನಿಜವಾಗಿಯೂ ಸಾರ್ಥಕವಾಗುತ್ತಿತ್ತು!' ಎಂದರು.

ವಾಸುದೇವರಾಯರು ಚಿನ್ನದ ತೊಟ್ಟಿಲಿನ ಪ್ರಸ್ತಾಪಕ್ಕೆ ಬಂದೊಡನೆಯೇ ಅವರ ವಾಕ್ಚಾತುರ್ಯವು ಇಮ್ಮಡಿಯಾಯಿತು. ಚಿನ್ನದ ತೊಟ್ಟಿಲಿನ ಜ್ಯೋತಿಯೇ ಅವರ ಮುಖದಲ್ಲಿ ಹೊಳೆಯುವಂತೆ ತೋರಿಬಂತು.

'ಒಂದು ಚಿನ್ನದ ತೊಟ್ಟಿಲು! ನಿಮ್ಮಂತಹ ಉದಾರಮನಸ್ಸಿನವರಿಗೆ ಅದನ್ನು ಮಾಡಿಸಿ ಕೊಡುವುದು ಒಂದು ದೊಡ್ಡ ಕೆಲಸವಲ್ಲ! ಆದರೆ ಅದರಿಂದ ಸಿಗುವ ಪುಣ್ಯವು ಎಷ್ಟು ದೊಡ್ಡದು! ಎಷ್ಟೋ ಮೂಢರಾದ ಜನರನ್ನು ಭಕ್ತಿಮಾರ್ಗಕ್ಕೆ ತರುವಂತಹ ಪುಣ್ಯವು ನಿಮ್ಮದಾಗುವುದು! ಇದು ಅಲ್ಪವಾದ ಪುಣ್ಯವಲ್ಲ! ಎಷ್ಟೋ ತಲಾಂತರದವರೆಗೆ ನಿಮ್ಮ ಬೆಂಬಲಕ್ಕೆ ಇರುವ ಪುಣ್ಯವಿದು! ಇದನ್ನು ನೀವು ಆಲೋಚಿಸಿರಿ. ಇದನ್ನು ಅಲ್ಲಗಳೆಯಬೇಡಿರಿ! ಒಂದು ಚಿನ್ನದ ತೊಟ್ಟಿಲನ್ನು ಶ್ರೀಕೃಷ್ಣದೇವಸ್ಥಾನಕ್ಕೆ ಅರ್ಪಿಸಿ ಇಂತಹ ಅಪಾರವಾದ ಪುಣ್ಯವನ್ನು ಗಳಿಸಿರಿ! ಹಾಗೆ ನೀವು ಮಾಡುವಿರೆಂದು ನನಗೆ ನಿಶ್ಚಯವುಂಟು. ಒಂದು ಚಿನ್ನದ ತೊಟ್ಟಿಲು!'

ವಾಸುದೇವರಾಯರ ಭಾಷಣದಿಂದ ಶ್ರೀಕೃಷ್ಣದೇವಸ್ಥಾನದ ಭಕ್ತಮಂಡಳಿಯವರಿಗೆ ಅತ್ಯಂತ ಆನಂದ ಉಂಟಾಯಿತು. ಆ ಇಡೀ ಭಾಷಣವಾಗುವವರೆಗೆ ರಾಮಚಂದ್ರರಾಯನು ಚಕಾರ ಶಬ್ದವನ್ನು ಕೂಡ ಎತ್ತದೆ, ವಾಸುದೇವರಾಯರ ಮಾತುಗಳೆಲ್ಲವನ್ನೂ ಮನಸ್ಸುಕೊಟ್ಟು ಕೇಳಿದ್ದರಿಂದ ತೊಟ್ಟಿಲನ್ನು ಮಾಡಿಸಿಕೊಡುವುದಕ್ಕೆ ಅವನು ನಿಶ್ಚಯವಾಗಿಯೂ ಸಮ್ಮತಿಸುವನೆಂದು ಅವರು ತಿಳಿದುಕೊಂಡರು. ರಾಮಚಂದ್ರರಾಯನಾದರೋ ವಾಸುದೇವರಾಯರು ಅರ್ಧಗಂಟೆಯವರೆಗೆ

ಹೇಳಿದುದನ್ನೆಲ್ಲ ಮನಸ್ಸುಕೊಟ್ಟು ಕೇಳಿದರೂ, ಅವರ ಪ್ರತಿ ಒಂದು ಮಾತಿನಿಂದ ತನ್ನಲ್ಲಿ ಎಬ್ಬಿಸಲ್ಪಟ್ಟ ಆಲೋಚನೆಗಳಲ್ಲಿಯೇ ಮಗ್ನನಾಗಿದ್ದನು. ಶ್ರೀಕೃಷ್ಣದೇವಸ್ಥಾನವು ಗೋಕುಲಾಷ್ಟಮಿ ಸಮಯದಲ್ಲಾಗಲಿ ಅಥವಾ ಇತರ ಸಮಯದಲ್ಲಾಗಲಿ ಆದಷ್ಟು ಹೆಚ್ಚು ಸೊಬಗಿನಿಂದ ಮೆರೆಯುವ ಹಾಗೆ ವಾಸುದೇವರಾಯರು ಸಕಲ ಪ್ರಯತ್ನಗಳನ್ನು ಮಾಡಿದ್ದಾರೆಂಬುದನ್ನು ಒಪ್ಪತಕ್ಕದ್ದೇ. ಆದರೆ ದೇವಸ್ಥಾನ ಮಾತ್ರವಲ್ಲ, ದೇವಸ್ಥಾನದ ಶಿಷ್ಯಮಂಡಳಿಯವರ ಆತ್ಮಗಳೂ ಆದಷ್ಟು ಸೊಬಗಿನಿಂದ ಮೆರೆಯುವ ಹಾಗೆ ವಾಸುದೇವರಾಯರು ಯಾವ ಯಾವ ಪ್ರಯತ್ನಗಳನ್ನು ಮಾಡಿದ್ದಾರೆ? ದೇವಸ್ಥಾನದ ಕಾರ್ಯಗಳೆಲ್ಲವೂ ಅದರ ಹೊರಗಿನ ಸೊಬಗಿನಲ್ಲಿಯೇ ಸಂಪೂರ್ಣವಾಗಿ ಹೋದುವೋ? ಅಥವಾ ನಾಟಕಾದಿಗಳನ್ನು ನೋಡುವಂತೆಯೂ, ರಾಷ್ಟ್ರೀಯ ವಿಷಯಗಳ ಮೇಲೆ ಕೊಡುವ ಭಾಷಣಗಳನ್ನು ಕೇಳುವಂತೆಯೂ, ಸಂಗೀತವನ್ನು ನಮ್ಮ ಹೆಣ್ಣುಮಕ್ಕಳು ಕಲಿಯುವಂತೆಯೂ, ನಮ್ಮ ಹೆಂಗಸರು ನಮ್ಮ ಕನ್ನಡದಲ್ಲಿಯ ಪತ್ತೇದಾರಿ ಕಥೆಗಳನ್ನು ಓದುವಂತೆಯೂ, ಇವೇ ಮೊದಲಾದ ಬರೇ ಕಾಲಹರಣವನ್ನು ಮಾಡುವ ಉಪಾಯಗಳಲ್ಲಿ ಒಂದಾಗುವ ಸ್ಥಿತಿಯು ನಮ್ಮ ದೇವಸ್ಥಾನಗಳಿಗೆ ಕೂಡ ಬಂದಿದೆಯೋ? ದೇವಭಕ್ತಿಗೆಂದು ನಮ್ಮ ದೇವಸ್ಥಾನಗಳಲ್ಲಿ ಸುಮ್ಮನೆ ಕಾಲಹರಣಮಾಡುವವರಿಗೂ ಮೇಲೆ ಹೇಳಿದಂತೆ ಬರೇ ಲೌಕಿಕ ರೀತಿಗಳಲ್ಲಿ ಕಾಲಹರಣಮಾಡುವವರಿಗೂ ಇರುವ ನಿಜವಾದ ಭೇದವೇನು? ತಾನು ದೇವಸ್ಥಾನಗಳಿಗೆ ಸಾಧಾರಣವಾಗಿ ಹೋಗದೆ ಇದ್ದುದರಿಂದಲೇ ತನ್ನನ್ನು ನಾಸ್ತಿಕನೆಂದು ಮೊದಲು ಕರೆದು, ತಾನು ಈಗ ದೇವಸ್ಥಾನಕ್ಕೆ ಹೋದೊಡನೆಯೇ ತಾನು ಪುನಃ ಆಸ್ತಿಕನಾಗಿದ್ದೇನೆಂದು ತಿಳಿದುಕೊಂಡು ಈ ಭಕ್ತಮಂಡಳಿಯವರು ನುಗ್ಗುತ್ತಾರಲ್ಲ! ತಾನು ಎಂದೂ ನಾಸ್ತಿಕನಾಗಿದ್ದಿಲ್ಲವೆಂದೂ, ತನಗೆ ದೇವಸ್ಥಾನವೆಂಬುದು ಬರೇ ಕಾಲಹರಣವನ್ನು ಮಾಡುವ ಒಂದು ರಂಗಭೂಮಿಯಲ್ಲವೆಂದೂ, ಅದು ಈ ಕಾಲದಲ್ಲಿ ಅಂತಹ ರಂಗಭೂಮಿಯಾಗಿರುವುದರಿಂದಲೇ ತಾನು ಸಾಧಾರಣವಾಗಿ ದೇವಸ್ಥಾನಗಳಿಗೆ

ಹೋಗುವುದಿಲ್ಲವೆಂದೂ ಈ ಮುಟ್ಠಾಳರಿಗೆ ಹೇಗೆ ತಿಳಿಸಲಿ? ದೇವಸ್ಥಾನದ ಮತ್ತು ದೇವಸ್ಥಾನದೊಳಗಿದ್ದ ಜಡವಾದ ದೇವರ ಪ್ರತಿಮೆಯ ಹೊರಗಿನ ಸೊಬಗಿನಲ್ಲಿಯೇ ಮಗ್ನರಾಗಿ, ಅವುಗಳ ಹೊರಗಿನ ಸೋಜಿಗತನವೇ ತಮ್ಮ ಹೃದಯದೊಳಗಿನ ಸೌಂದರ್ಯವೆಂದು ತಿಳಿದುಕೊಂಡಿರುವ ಈ ಮೂಢಾತ್ಮರಿಗೆ ತಾನು ಆ ಗೋಕುಲಾಷ್ಟಮಿಯ ದಿನ ದೇವಸ್ಥಾನಕ್ಕೆ ಹೋದುದು ಸಂತ ರಮಾವಲ್ಲಭದಾಸರ ಅತ್ಯದ್ಭುತವಾದ ಕೀರ್ತನೆಗಳನ್ನು ಕೇಳುವುದಕ್ಕಲ್ಲದೆ ದೇವಸ್ಥಾನದ ಹೊರಗಿನ ಸೊಬಗಿಗೆ ಮೋಹಿಸಿಕೊಂಡಲ್ಲವೆಂದು ಹೇಗೆ ತಿಳಿಸಲಿ? ವಾಸುದೇವರಾಯರು ತೊಟ್ಟಿಲಿನ ವಿಷಯ ಮಾತನಾಡುತ್ತಿದ್ದಾಗಲೆಲ್ಲ ರಾಮಚಂದ್ರರಾಯನು ಇದೇ ರೀತಿಯಲ್ಲಿ ಆಲೋಚಿಸುತ್ತಾ ವಾಸುದೇವರಾಯರ ಮತ್ತು ಭಕ್ತಮಂಡಳಿಯವರ ಮಂಕುತನಕ್ಕೆ ವಿಶೇಷವಾಗಿ ಕನಿಕರ ಪಡುತ್ತಿದ್ದನು. ಅನೇಕ ಸಾರಿ ವಾಸುದೇವರಾಯರು ತೊಟ್ಟಿಲಿನ ವಿಷಯ ರಭಸದಿಂದ ಮಾತನಾಡುತ್ತಿದ್ದಾಗ ತನ್ನ ಮನಸ್ಸಿನ ಪರದೆಯನ್ನೊಡೆದು, ತನ್ನ ಆಲೋಚನೆಗಳನ್ನು ಅವರಿಗೆ ವ್ಯಕ್ತಗೊಳ್ಳಿಸೋಣವೆಂದು ನಿಶ್ಚೈಸಿದ್ದನು. ಆದರೆ ಹಾಗೆ ಮಾಡಿದರೆ ವಾಸುದೇವರಾಯರ ಹೇಳಿಕೆಗೆ ಅಡ್ಡಿ ಬರುವುದೆಂದು ತಿಳಿದುಕೊಂಡು ಅವನು ಸುಮ್ಮನಾಗಿದ್ದನು.

ವಾಸುದೇವರಾಯರ ಹೇಳಿಕೆಯು ಮುಗಿದೊಡನೆಯೇ ಅವರೂ ಆ ಭಕ್ತಮಂಡಳಿಯವರೂ ರಾಮಚಂದ್ರರಾಯನು ತೊಟ್ಟಿಲಿನ ವಿಷಯವಾಗಿ ಏನು ಹೇಳುವನು ಎಂದು ಕೇಳಲಿಕ್ಕೆ ಬಹಳ ಲವಲವಿಕೆಯಿಂದ ಸಿದ್ಧರಾದರು. ರಾಮಚಂದ್ರರಾಯನು ಇನ್ನೂ ಕೊಂಚ ಹೊತ್ತು ಆಲೋಚಿಸುವವನಾದನು. ಆ ಮೇಲೆ ವಾಸುದೇವರಾಯರನ್ನು ಸ್ವಲ್ಪ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಾ ಹೀಗೆಂದನು :

'ವಾಸುದೇವರಾಯರೇ, ನಿಮಗೆ ಸಮಯವಿದ್ದರೆ ಒಂದು ಚಿಕ್ಕ ಕಥೆಯನ್ನು ಹೇಳುವೆನು. ಅದು ನಮ್ಮ ಕನ್ನಡ ಭಾಷಾಭಿಮಾನಿಗಳು ನಮ್ಮ ಹೆಂಗಸರಿಗಾಗಿ ಬರೆದಂತಹ ಕಥೆಗಳಲ್ಲೊಂದಲ್ಲ. ಅಥವಾ ನೀವೇ ಆ ಹೆಂಗಸರನ್ನು ಭಕ್ತಿಮಾರ್ಗಕ್ಕೆ ತರುವುದಕ್ಕಾಗಿ ದೇವಸ್ಥಾನದಲ್ಲಿ

ಸಮುಸ್ಯರೂಪಕವಾಗಿ ಹೇಳುವಂತಹ ಕಥೆಗಳಲ್ಲಿಯೂ ಒಂದಲ್ಲ. ನನ್ನ ಕಣ್ಣೆದುರಿಗೇನೇ ನಮ್ಮ ಕಾಲದಲ್ಲಿಯೇ ಸಂಭವಿಸಿದ ಒಂದು ನಿಜವಾದ ಕಥೆಯು.

'ಕೆಲವು ವರ್ಷಗಳ ಹಿಂದೆ, ಅಂದರೆ ಸಾಧಾರಣ ನೀವು ನಮ್ಮ ದೇವ ಸ್ಥಾನವನ್ನು ಜೀರ್ಣೋದ್ಧಾರ ಮಾಡಿದ ಸಮಯದಲ್ಲಿ, ಈ ಊರಿನಲ್ಲಿಯೇ ಒಬ್ಬ ಯುವಕನಿದ್ದನು. ಅವನು ಒಳ್ಳೇ ಕುಟುಂಬದಲ್ಲಿ ಜನಿಸಿದವನಾಗಿದ್ದು ಯೋಗ್ಯ ವಿದ್ಯಾಭ್ಯಾಸವನ್ನು ಪಡೆದಿದ್ದನು. ಐಶ್ವರ್ಯದಿಂದ ಲಭಿಸುವ ಸುಖಗಳನ್ನೆಲ್ಲಾ ಅನುಭವಿಸುವುದಕ್ಕೂ ಅರ್ಹನಾಗಿದ್ದನು. ಆದರೆ ಯುವಕನಲ್ಲವೇ? ಅವನ ದೇಹದಲ್ಲಿ ರಕ್ತಪ್ರವಾಹವು ಎಷ್ಟು ರಭಸದಿಂದ ಹರಿದಾಡುತ್ತಿತ್ತೋ, ಅಷ್ಟೇ ರಭಸದಿಂದ ಅನೇಕಾನೇಕ ಚಿತ್ತಭಾವಗಳೂ ಆಲೋಚನೆಗಳೂ, ತಡೆದುಕೊಳ್ಳಲಾರದಂತಹ ಅಪೇಕ್ಷೆಗಳೂ ಅವನ ಮನಸ್ಸಿನಲ್ಲಿ ಪ್ರಜ್ವಲಿಸುತ್ತಿದ್ದುವು. ಲೋಕವೆಂಬುದು ನಿಮ್ಮಂತಹ ಭಕ್ತರು ತಿಳಿದುಕೊಳ್ಳುವಂತೆ ಪರಲೋಕವನ್ನು ಸಾಧಿಸಲಿಕ್ಕೆ ಅನುಕೂಲವಾದ ಒಂದು ಅನಿತ್ಯವಾದ ಸ್ಥಳವೆಂದು ತಿಳಿದುಕೊಳ್ಳುವ ಬದಲಾಗಿ ತನ್ನ ಇಷ್ಟಾರ್ಥಗಳನ್ನೆಲ್ಲಾ ಕೈಗೂಡಿಸಲಿಕ್ಕೆ ಸಾಧ್ಯವಾದಂತಹ ಒಂದು ವಿಲಾಸಭೂಮಿಯೆಂದು ಆ ಯುವಕನು ತಿಳಿದುಕೊಂಡನು. ಮಾತ್ರವಲ್ಲದೆ ತನ್ನ ಅಪೇಕ್ಷೆಗಳನ್ನು ತೃಪ್ತಿಪಡಿಸುವುದೇ ಜೀವನದ ಉದ್ದೇಶವೆಂದೂ ತನ್ನ ಯೌವನದ ಮದದಿಂದ ತಿಳಿದುಕೊಳ್ಳಲಾರಂಭಿಸಿದನು. ಅಷ್ಟಾದರೂ ಅವನು ಯಾವ ಕೇಡಿಗೂ ವಿಶೇಷವಾಗಿ ಬಂದಿಳಿಯಲಿಲ್ಲ. ಏಕೆಂದರೆ ಅವನು ಯೌವನದಿಂದ ತುಂಬಿ ತುಳುಕುತ್ತಿದ್ದವನಾದರೂ ಅವನು ಪಡೆದ ಅಲ್ಪಸ್ವಲ್ಪ ಶಿಕ್ಷಣದ ಬಲದಿಂದ ಅಲ್ಲಿ ಸ್ವಲ್ಪ ವಿಚಾರಶೀಲನಾಗಿದ್ದನು.

'ಆದರೆ ಕೊಬ್ಬಿದ ಗಿಡವು ಮಳೆಗಾಲದ ಪ್ರಥಮ ವೃಷ್ಟಿಯನ್ನು ಅತ್ಯಂತ ನಿರೀಕ್ಷಣೆಯಿಂದ ಸ್ವೀಕರಿಸಿ, ಆ ಮೇಲೆ ಕ್ಷಣಕಾಲಕ್ಕೂ ಶಾಂತವಾಗದ ವೃಷ್ಟಿಗೆ ಕೂಡ ನಿಶ್ಚಿಂತವಾಗಿ ತನ್ನ ತಲೆಯನ್ನು ಎಬ್ಬಿಸಿ ಶಮದಮೆಯಿಂದ ನಿಲ್ಲುವಂತೆ, ಆ ಯುವಕನು ತನ್ನ ದೇಹವು ತನ್ನ ಯೌವನದ

ಆರ್ಭಟಕ್ಕೆ ಸೋಂಕಿದೊಡನೆಯೇ ತನ್ನ ಮನೋರಂಜಕವಾದ ಎಲ್ಲಾ ಅಪೇಕ್ಷೆಗಳಿಂದ ಒಮ್ಮೆಯೇ ಬಿಡುಗಡೆ ಪಟ್ಟಂತಾದವನಾಗಿ, ಜೀವನದಲ್ಲಿ ಯಾವ ಉದ್ದೇಶವನ್ನೂ ಕಾಣದೆ, ನಿರ್ಜೀವವಾದ ಒಂದು ಮರದ ಗೊಂಬೆಯಂತಾದನು. ಆಗ್ಗೆ ಲೋಕದಲ್ಲಿ ಸಂಭವಿಸುವ ಎಲ್ಲಾ ಸಂಗತಿಗಳೂ ಅವನಿಗೆ ಸ್ವಪ್ನಾವಸ್ಥೆಯಲ್ಲಿ ಸಂಭವಿಸುವ ಹಾಗೆ ಕಂಡುಬಂದು ಅವನ ಹೃದಯವೂ ಅಂಧಕಾರಮಯವಾದಂತೆ ತೋರಿಬಂತು. ಈ ಸ್ಥಿತಿಯಲ್ಲಿರುವಾಗ ಅವನು ನಾನಾತರದ ಪಾರಮಾರ್ಥಿಕ ಸಂಶಯಗಳಿಂದ ಪೀಡಿಸಲ್ಪಟ್ಟು ವರ್ಣಿಸಲಾಗದಂತಹ ಮಾನಸಿಕ ಸಂಕಷ್ಟಗಳನ್ನು ಅನುಭವಿಸಿದನು.

'ಇಂತಹ ಸಂಶಯಗಳನ್ನೆಲ್ಲಾ ಹೋಗಲಾಡಿಸುವುದಕ್ಕೆ ಅವನು ತನ್ನಿಂದಾಗುವಷ್ಟು ಪ್ರಯತ್ನಗಳನ್ನು ಮಾಡಿದನು. ಪಾರಮಾರ್ಥಿಕ ಮತ್ತು ಸಾಂಸಾರಿಕ ವಿಷಯಗಳ ಮೇಲೆ ಬರೆಯಲ್ಪಟ್ಟ ಪುಸ್ತಕಗಳನ್ನೆಲ್ಲಾ ತನಗೆ ಸಿಕ್ಕಿದಂತೆ ಓದಿದನು. ಅಂತಹ ವಿಷಯಗಳ ಮೇಲೆ ಭಾಷಣ ಕೊಡುವವರನ್ನೆಲ್ಲಾ ಅತ್ಯಾತುರದಿಂದ ಕೇಳಿದನು. ತನಗೆ ಸಿಕ್ಕಿದ ಸಿಕ್ಕಿದ ಸನ್ಯಾಸಿಗಳೆಲ್ಲರ ಹಿಂದೆ ಓಡಿದನು. ಆದರೂ ಅವನ ಹೃದಯದಲ್ಲಿ ಪರಿಣಮಿಸಿದ ಘೋರ ಅಂಧಕಾರವು ತುಸುವಾದರೂ ಕಡಮೆಯಾಗದೆ ಹೋಯಿತು. ನೀವು ಈಗ 'ಒಂದು ಚಿನ್ನದ ತೊಟ್ಟಿಲು! ಶ್ರೀಕೃಷ್ಣ ದೇವಸ್ಥಾನಕ್ಕೊಂದು ಚಿನ್ನದ ತೊಟ್ಟಿಲು!' ಎಂದು ಕೇಳುವಂತೆ ಆ ತರುಣನು 'ಒಂದು ಬೆಳಕು! ನನ್ನ ಹೃದಯವನ್ನಾವರಿಸಿಕೊಂಡಿದ್ದ ಅಂಧಕಾರವನ್ನು ಹೋಗಲಾಡಿಸಲಿಕ್ಕೆ ಒಂದು ಬೆಳಕು!' ಎಂದು ಸದಾಕಾಲವೂ ಕೇಳುವವನಾದನು.

'ಕಟ್ಟಕಡೆಗೆ ತನಗೆ ಬೇಕಾದ 'ಬೆಳಕು' ನಮ್ಮ ದೇವಸ್ಥಾನಗಳಲ್ಲಿ ಸಿಗಬೇಕಲ್ಲದೆ ಮತ್ತೆಲ್ಲಿಯೂ ಸಿಗಲಾರದೆಂದು ಅವನು ತಿಳಿದುಕೊಂಡು, ನಮ್ಮ ದೇವಸ್ಥಾನಗಳ ಮೊರೆ ಹೊಗಲಿಕ್ಕೆ ಪ್ರಾರಂಭಿಸಿದನು. ಇವುಗಳಲ್ಲಿಯೂ ತನಗೆ ಬೇಕಾದ ಮಂತ್ರವು ದೊರಕದಿದ್ದರೆ ತಾನು ನಿಜವಾಗಿಯೂ ಕೆಟ್ಟೆನು, ತಾನು ಜೀವಿತನಾಗಿದ್ದರೂ ಸತ್ತವನಂತೆಯೇ ಎಂದು ಆ

ಯುವಕನು ನಿಶ್ಚೈಸಿದನು. ಅವನು ನಮ್ಮ ದೇವಸ್ಥಾನಗಳ ವಿಷಯ ಈ ರೀತಿಯಾಗಿ ಊಹಿಸಿದುದು ಆಶ್ಚರ್ಯವಲ್ಲ. ಏಕೆಂದರೆ ದೇವಸ್ಥಾನಗಳೆಂದರೇನು? ಸಮಾಜವು ಶಾರೀರಕ ರೋಗಿಗಳಿಗೋಸ್ಕರವಾಗಿ ಏರ್ಪಡಿಸಿದ ನಮ್ಮ ಆಸ್ಪತ್ರೆಗಳಂತೆಯೂ, ಮಾನಸಿಕ ರೋಗಿಗಳಿಗೋಸ್ಕರವಾಗಿ ಸ್ಥಾಪಿಸಿದ ಹುಚ್ಚರಾಸ್ಪತ್ರೆಗಳಂತೆಯೂ, ನಮ್ಮ ದೇವಸ್ಥಾನಗಳು ಕೂಡ ಪಾರಮಾರ್ಥಿಕ ಸಂಶಯಗಳಿಂದ ಪೀಡಿಸಲ್ಪಟ್ಟ ರೋಗಿಗಳಿಗೆಂದು ಸಮಾಜವು ಹೇರಳ ದ್ರವ್ಯವನ್ನು ವೆಚ್ಚಮಾಡಿ ಏರ್ಪಡಿಸಿದ ಒಂದು ಬಗೆಯ ಆಸ್ಪತ್ರೆಗಳಲ್ಲವೇ?

'ನಮ್ಮ ದೇವಸ್ಥಾನಗಳಾದರೂ ಆ ಯುವಕನ ಹೃದಯವನ್ನಾವರಿಸಿಕೊಂಡಿದ್ದ ಘೋರ ಅಂಧಕಾರವನ್ನು ಸ್ವಲ್ಪವಾದರೂ ಹೋಗಲಾಡಿಸಿದುವೋ? ಅಲ್ಪ ಬೆಳಕನ್ನಾದರೂ ಅವನ ಹೃದಯದಲ್ಲಿ ಬೀರಿದುವೋ? ಕೇಳಿರಿ.

'ನಮ್ಮ ದೇವಸ್ಥಾನಗಳು ಆ ಯುವಕನಂಥವರ ಆತ್ಮಗಳಿಗೆ ಶಾಂತಿಯನ್ನು ಕೊಡಲಿಕ್ಕೆ ಪ್ರಯತ್ನಿಸುವ ಬದಲಾಗಿ ಅವುಗಳೆಲ್ಲವೂ ಸಾಂಪತ್ತಿಕ ಸುಖಗಳಲ್ಲಿಯೇ ಮಗ್ನವಾಗಿ ತಮ್ಮ ತಮ್ಮ ಹೊರಗಿನ ಆಡಂಬರಗಳನ್ನು ಹೆಚ್ಚಿಸುವುದರಲ್ಲಿಯೇ ಉದ್ಯುಕ್ತವಾಗಿರುವುದನ್ನು ಆ ಯುವಕನು ಎಲ್ಲೆಲ್ಲಿಯೂ ಕಂಡನು. 'ಒಂದು ಬೆಳಕು! ನನ್ನ ಹೃದಯದ ಅಂಧಕಾರವನ್ನು ಹೋಗಲಾಡಿಸುವುದಕ್ಕೆ ಒಂದು ಬೆಳಕು!' ಎಂದು ಅವನು ಕೇಳುವಾಗಲೆಲ್ಲಾ, 'ನಮ್ಮ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಲಿಕ್ಕೆ ಸ್ವಲ್ಪ ಹಣ!' 'ನಮ್ಮ ದೇವಸ್ಥಾನದಲ್ಲಿ ಗೋಕುಲಾಷ್ಟಮಿ ಅಥವಾ ರಾಮನವಮಿಯನ್ನು ವಿಜೃಂಭಣೆಯಿಂದ ಆಚರಿಸಲಿಕ್ಕೆ ಸ್ವಲ್ಪ ಹಣ!' 'ನಗರ ಊಟಕ್ಕಾಗಿ ಹಣ!' 'ಬ್ರಾಹ್ಮಣ ಸಂತರ್ಪಣೆಗಾಗಿ ಹಣ!' 'ಕಾರ್ತಿಕಮಾಸದ ಪೂಜೆಗಾಗಿ ಹಣ!' 'ಆಷಾಢಮಾಸದ ಪೂಜೆಗಾಗಿ ಹಣ!' ಎಂಬ ಧ್ವನಿಗಳೇ ಅವನಿಗೆ ಪ್ರತ್ಯುತ್ತರವಾಗಿ ದೊರೆತವು. ಅಷ್ಟು ಮಾತ್ರವಲ್ಲ, ಲೆಕ್ಕವಿಲ್ಲದ ಬಡಬಗ್ಗರು ಊಟಕ್ಕಿಲ್ಲದೇ ಸಾಯುವಾಗ ಒಂದು ದೇವಸ್ಥಾನದಲ್ಲಿ ಪ್ರತಿ ವರ್ಷದ ೩೬೫ ದಿನಗಳಲ್ಲಿಯೂ

ಊರಿನ ಸದ್ಗೃಹಸ್ಥರಿಗೆ ಮತ್ತು ವೈಗಳ್ಳರಿಗೆಲ್ಲ ಸಹಸ್ರಭೋಜನ! ಲೆಕ್ಕವಿಲ್ಲದ ಹುಡುಗರು ಶಿಕ್ಷಣವನ್ನು ಪಡೆಯಲಿಕ್ಕೆ ದ್ರವ್ಯಾನುಕೂಲವಿಲ್ಲದೆ ಬೀದಿ ಬೀದಿಗಳಲ್ಲಿ ಅಲೆದು ಕಾಲಹರಣವನ್ನು ಮಾಡುತ್ತಿರುವಾಗ ಅನೇಕ ದೇವಸ್ಥಾನಗಳಲ್ಲಿ ಲೆಕ್ಕವಿಲ್ಲದ ದೇವದಾಸಿಯರಿಗೆ ಮತ್ತು ಅವರ ಕಾಮಾತುರರಿಗೆ ಧರ್ಮಾರ್ಥವಾದ ಪೋಷಣ! ಇನ್ನೂ ಅನೇಕ ದೇವಸ್ಥಾನಗಳು ಮತಸಂಬಂಧವಾದ ವಿಚಾರಗಳಲ್ಲಿ ಆಸಕ್ತಿಯನ್ನು ತೋರಿಸುವ ಬದಲಾಗಿ ತೀರಾ ಸಾಂಸಾರಿಕ ವಿಷಯಗಳನ್ನೇ ತಮ್ಮ ಮುಖ್ಯ ಕರ್ತವ್ಯಗಳನ್ನಾಗಿ ಮಾಡಿಕೊಂಡು, ಜಾತಿಯಿಂದ ಬಹಿಷ್ಕಾರ, ಪ್ರಾಯಶ್ಚಿತ್ತ ಇವೇ ಮೊದಲಾದ ಹಾಸ್ಯಾಸ್ಪದಕರವಾದ ಕಾರ್ಯಗಳಲ್ಲೇ ಮಗ್ನವಾಗಿ, ಇಂತಹ ಕಾರ್ಯಗಳನ್ನು ಸಾಧಿಸುವುದಕ್ಕೋಸ್ಕರ ನ್ಯಾಯಕೋರ್ಟು ಗಳಿಗೆ ಹೋಗಲಿಕ್ಕೆ ಕೂಡ ಸಿದ್ಧವಾಗಿದ್ದುವು! ಇನ್ನೂ ಇತರ ದೇವಸ್ಥಾನಗಳು ಅವುಗಳ ಆಡಳತೆದಾರರ ಭೋಗಕ್ಕಾಗಿಯೇ ಇರುವಂತೆಯೂ ಆ ಬಡ ಯುವಕನಿಗೆ ತೋರಿಬಂತು.

'ನಮ್ಮ ದೇವಸ್ಥಾನಗಳೆಲ್ಲವೂ ಈ ಸ್ಥಿತಿಯಲ್ಲಿರುವಾಗ್ಗೆ ಅವುಗಳಿಂದ ಅವನಿಗೆ ಆತ್ಮಶಾಂತಿಯು ಹೇಗೆ ಲಭಿಸೀತು? ಅವನು ಕೂಡಲೇ ತೀರಾ ಅಸಹ್ಯತೆಯಿಂದ ಹಿಂತಿರುಗಿ, ತಾನು ನಿಜವಾಗಿಯೂ ಕೆಟ್ಟೆನು. ಇನ್ನು ತನಗೆ ತನ್ನ ಜೀವಮಾನದಲ್ಲಿ ಯಾವ ತರದ ಶಾಂತಿಯೂ ಇರಲಾರದು, ಜೀವದಲ್ಲಿದ್ದರೂ ತಾನು ಸತ್ತವನಂತೆಯೇ ಎಂದು ತಿಳಿದುಕೊಳ್ಳಲಾರಂಭಿಸಿ ಅತಿರೇಕವಾಗಿ ಕಳವಳಪಟ್ಟನು. ಆದರೂ ತಾನು ಬಿಡೆನು, ಸತ್ತರೂ ನಿರ್ಜೀವತನದಿಂದ ಸಾಯಲಾರೆನು, ಅಘೋರ ಕರ್ಮಗಳನ್ನಾದರೂ ಮಾಡಿ ಸಾಯುವೆನು, ಸಾಯುವ ಮೊದಲು ತನ್ನ ಶಾರೀರಿಕ ಅಪೇಕ್ಷೆಗಳನ್ನಾದರೂ ತೃಪ್ತಿಪಡಿಸುವೆನು ಎಂದು ನಿಶ್ಚೈಸಿ, ಪುನಃ ತನ್ನ ಯೌವನಾವಸ್ಥೆಯ ವ್ಯವಹಾರಗಳಲ್ಲಿ ಗುಡುಗುಮಿಂಚಿನಂತೆ ಬಂದು ಸೇರುವವನಾದನು. ಕೂಡಲೇ ತಾನು ನಿಶ್ಚೈಸಿದಂತೆ ಅಘೋರ ಕರ್ಮಗಳನ್ನು ಮಾಡುವವನಾದನು. ತನ್ನ ಇಷ್ಟಮಿತ್ರರೊಡನೆ ಭಂಡು ಮಾತುಗಳನ್ನಾಡುವುದರಲ್ಲಿ ಉದ್ಯುಕ್ತನಾದನು. ಹೆಂಗಸರ ಮುಖಗಳನ್ನು

ಎವೆಯಿಕ್ಕದೆ ನೋಡಲಾರಂಭಿಸಿದನು. ಕೇಳುವವರ ಕಿವಿಗಳು ಶೀಳಿ ಹೋಗುವಂತೆ ಎಲ್ಲಾ ಸಂಗತಿಗಳ ಮೇಲೆಯೂ ಅಭಿಪ್ರಾಯಗಳನ್ನು ಕೊಡುವವನಾದನು. ಲಜ್ಜೆ, ಗೌರವ, ದಯಾ, ದಾಕ್ಷಿಣ್ಯ, ಮಧುರತ್ವ ಇವುಗಳಿಗೆಲ್ಲಾ ತರ್ಪಣಕೊಟ್ಟು, ಭೂಮಿಯ ಮೇಲೆ ಒಂದು ಭಯಂಕರ ವಾದ ನರಪಿಶಾಚಿಯಂತೆ ನಡೆಯಲಾರಂಭಿಸಿದನು.

'ಇಂತಹ ಹೀನ ಸ್ಥಿತಿಗೆ ಬಂದಿಳಿದಿದ್ದರೂ ಅವನ ಆತ್ಮವು ಅವನನ್ನು ಒಮ್ಮೊಮ್ಮೆ ಬಹಳ ತಳಮಳಿಸುತ್ತಿತ್ತು. ತಾನು ತೀರಾ ಕಂಗೆಟ್ಟು ಸಾಯಬೇಕೆಂದು ಅವನು ಮಾಡಿದ ಪ್ರತಿಜ್ಞೆಯನ್ನು ನಿಷ್ಫಲವಾಗಿ ಮಾಡಲಿಕ್ಕೆ ಅವನಲ್ಲಿ ಇನ್ನೂ ಮಿನುಗುತ್ತಿದ್ದ ವಿಚಾರಶೀಲತೆಯು ಅನೇಕ ಸಾರಿ ಪ್ರಯತ್ನಿಸುತ್ತಿತ್ತು. ಒಂದು ದಿನ ಅವನು ಸಂಜೆಯಲ್ಲಿಯೇ ಒಂದು ವೇಶ್ಯಾಗೃಹವನ್ನು ಗೊತ್ತುಮಾಡಿಕೊಂಡು ಮನೆಗೆ ಹೋಗಿದ್ದನು. ರಾತ್ರಿ ಒಂಭತ್ತುಗಂಟೆಯಾದೊಡನೆಯೇ ಆ ವೇಶ್ಯಾಗೃಹವನ್ನು ಹೊಗಲಿಕ್ಕೆಂದು ತನ್ನ ಮನೆಯಿಂದ ಹೊರಟನು. ಹಾಗೆ ಮಾಡುವಷ್ಟರಲ್ಲಿಯೇ ಅವನ ಆತ್ಮಜ್ಯೋತಿಯು ಪುನಃ ಅವನನ್ನು ಮೋಸಗೊಳಿಸಲಿಕ್ಕೆ ಪ್ರಾರಂಭಿಸಿತು. ಲೆಕ್ಕವಿಲ್ಲದ ವಿಚಾರಗಳು ಅವನ ಮನಸ್ಸಿಗೆ ಒಂದು ಅವನ ಹೃದಯವನ್ನೆಲ್ಲಾ ಅಲ್ಲೋಲಕಲ್ಲೋಲವಾಗಿ ಮಾಡಿಬಿಟ್ಟವು. ಅವನನ್ನು ಒಂದು ಭಯಂಕರವಾದ ಸ್ವಪ್ನಾವಸ್ಥೆಗೆ ತಂದುಬಿಟ್ಟವು. ಆದರೂ ಅವನು ತಾನು ಹಿಡಿದ ದಾರಿಯನ್ನು ಬಿಟ್ಟು ಹಿಂಜರಿಯಲಿಲ್ಲ. ಆದರೆ ದೈವವಶಾತ್ ಅವನು ಹಾದು ಹೋಗುತ್ತಿರುವ ರಸ್ತೆಯಲ್ಲಿ ಒಂದು ನಾಟಕಾಲಯವಿತ್ತು. ಊರಿನ ಜನರೆಲ್ಲರೂ ನಾಟಕವನ್ನು ನೋಡುವ ಲವಲವಿಕೆಯಿಂದ ಗುಂಪುಗುಂಪಾಗಿ ಹೋಗುತ್ತಿದ್ದರು. ಆ ಯುವಕನ ಸ್ವಪ್ನಾವಸ್ಥೆಯ ಸ್ಥಿತಿಯಲ್ಲಿ ಅವನ ಕಾರ್ಯಗಳು ಅವನ ಸ್ವಾಧೀನದಲ್ಲಿರಲಿಲ್ಲ. ಅಲ್ಲಿ ನಾಟಕಕ್ಕೆ ಹೋಗುತ್ತಿರುವ ಜನರಂತೆ ತಾನೂ ಒಂದು ನಾಟಕದ ಟಿಕೆಟನ್ನು ಪಡೆದು ಸ್ವಪ್ನಾವಸ್ಥೆಯಲ್ಲಿದ್ದಂತೆ ನಾಟಕಶಾಲೆಯನ್ನು ಪ್ರವೇಶಿಸಿದನು. ಕೂಡಲೇ ತನ್ನ ವೇಶ್ಯಾಸ್ತ್ರೀಯನ್ನು ಮರೆತು, ಅಲ್ಲಿ ಆಗುತ್ತಿದ್ದ '**ಭೀಷ್ಮಪ್ರತಿಜ್ಞೆ**'ಯೆಂಬ ನಾಟಕವನ್ನು ನೋಡುವುದರಲ್ಲಿಯೇ ಉದ್ಯುಕ್ತನಾದನು.

'ವಾಸುದೇವರಾಯರೇ, ಇನ್ನು ನಾನು ಹೇಳುವುದನ್ನು ನೀವು ನಂಬಲಾರಿರಿ. ದೇವರ ನಿಲುವಿಕೆಯಿಂದ ಪವಿತ್ರವಾದ ಸ್ಥಳಗಳೆಂದೂ, ಲೆಕ್ಕವಿಲ್ಲದ ಯಾತ್ರಿಕರು ದೂರ ದೂರ ಪ್ರದೇಶಗಳಿಂದ ಬಂದು ಹೇರಳ ಪುಣ್ಯವನ್ನು ಗಳಿಸುವಂತಹ ಸ್ಥಳಗಳೆಂದೂ ಪ್ರಖ್ಯಾತಿಗೊಂಡ ಅನೇಕ ದೇವಸ್ಥಾನಗಳಲ್ಲಿ ಕೂಡ ಆ ಬಡ ಯುವಕನಿಗೆ ಸಿಗದೇ ಇದ್ದ ವೇದ ವಾಕ್ಯವು ಅಂದು ಅವನಿಗೆ ಮರ್ಯಾದಸ್ಥರಿಂದಲೂ, ದೇವಭಕ್ತರಿಂದಲೂ ವಿಶೇಷವಾಗಿ ತುಚ್ಛೀಕರಿಸಲ್ಪಡುವ ಒಂದು ಹರಕು ನಾಟಕಶಾಲೆಯಲ್ಲಿ ಅಭ್ರಮಣದಿಂದ ಸಿಕ್ಕಿತು! ಅದೂ ಕೂಡ ಯಾರಿಂದ? ಸ್ನಾನ, ಜಪ, ತಪ, ಸೇವೆ, ಹೋಮ, ಆರಾಧನೆ ಇತ್ಯಾದಿ ಶಾಸ್ತ್ರೋಕ್ತವಾದ ನಿತ್ಯ ನಿಯಮಗಳನ್ನು ಕ್ರಮವಾಗಿ ಆಚರಿಸಿದ, ಕೊರಳಲ್ಲಿ ರುದ್ರಾಕ್ಷಿಮಾಲೆ ಯನ್ನು ಧರಿಸಿದ, ಹಣೆಗೆ ವಿಭೂತಿಯನ್ನು ಹಚ್ಚಿಸಿದ, ಸಂಸಾರವೆಲ್ಲವೂ ಮಾಯೆಯೆಂದು ತಿಳಿದು ಲೋಕವ್ಯವಹಾರಗಳನ್ನು ತ್ಯಜಿಸಿದ ಪರಮ ಪವಿತ್ರನೆಂದೆಣಿಸಿಕೊಳ್ಳುತ್ತಿದ್ದ ದೇವಭಕ್ತನಿಂದಲೇ? ಅಲ್ಲ! ವೇಶ್ಯಾಸಕ್ತ ನಾಗಿಯೂ, ಕುಡಿಕನಾಗಿಯೂ ನಿಮ್ಮೆಲ್ಲರ ತುಚ್ಛೀಕಾರಕ್ಕೆ ಪಾತ್ರ ನಾಗಿಯೂ ಇರುತ್ತಿದ್ದ ಒಬ್ಬ ನಾಟಕ ಪಾತ್ರಧಾರಿಯಿಂದ! ಆ ವೇದ ವಾಕ್ಯವು ಆ ಯುವಕನಿಗೆ ದೊರೆತ ಕೂಡಲೇ ಅವನನ್ನು ಅನೇಕ ಕಾಲ ದಿಂದ ಪೀಡಿಸುತ್ತಿದ್ದ ಅವನ ಭ್ರಮೆಗಳೆಲ್ಲವೂ ಒಂದೇ ಸವನೆ ಮಾಯ ವಾದುವು. ತತ್‌ಕ್ಷಣವೇ ಅವನ ಹೃದಯದಲ್ಲಿ ಕವಿದಿದ್ದ ಅಂಧಕಾರ ಮಯವಾದ ಮೋಡಗಳು ದಿಕ್ಕಾಪಾಲಾಗಿ ಚದರಿಹೋದುವು. ಅವನ ಆತ್ಮಜ್ಯೋತಿಯೂ, ವಿಚಾರಶೀಲತೆಯೂ ಪುನಃ ಅವನಲ್ಲಿ ಕಳಂಕವಿಲ್ಲದೆ ಪ್ರಜ್ವಲಿಸಿದುವು. ಯುವಕನು ಧೂಳಿನಿಂದಲೂ ಕೆಸರಿನಿಂದಲೂ ಎಬ್ಬಿ ಸಲ್ಪಟ್ಟಂತಾದನು. ಜೀವನದಲ್ಲಿ ಅತಿ ಶ್ರೇಷ್ಠವಾದ ಉದ್ದೇಶವೊಂದನ್ನು ಅವನು ಕಂಡು ತಿಳಿದನು. ನಾಟಕವು ಮುಗಿಯದಿದ್ದರೂ ಅವನು ಕೂಡಲೇ ಅಲ್ಲಿಂದೆದ್ದು, ತಾನು ನಿಶ್ಚಯಿಸಿದ ವೇಶ್ಯಾಗೃಹಕ್ಕೆ ಹೋಗುವ ಬದಲಾಗಿ, ತನ್ನ ಗೃಹಾಭಿಮುಖವಾಗಿಯೇ ನೂತನ ಯುವಕನಂತೆ ಬಹಳ ಆಹ್ಲಾದಕರವಾದ ಸ್ಥಿತಿಯಲ್ಲಿ ಹೋದನು. ಅಂದಿನಿಂದ ಅವನು ಆ

ನಾಟಕ ಮಂದಿರದಲ್ಲಿ ದೊರೆತ ವೇದವಾಕ್ಯಕ್ಕನುಸಾರವಾಗಿ ಲೋಕದಲ್ಲಿ ವರ್ತಿಸಲಿಕ್ಕೆ ತನ್ನಿಂದಾಗುವಷ್ಟು ಪ್ರಯತ್ನಗಳನ್ನು ಮಾಡುವವನಾದನು.....ವಾಸುದೇವರಾಯರೇ, ನನ್ನ ಕಥೆಯು ಮುಗಿಯಿತು. ಆ ಯುವಕನು ನಾನೇ ಆಗಿದ್ದೆನು!'

ಇದನ್ನು ಕೇಳಿ ವಾಸುದೇವರಾಯರೂ, ಅವರೊಂದಿಗೆ ಅಲ್ಲಿ ನೆರೆದಿದ್ದ ಆ ಭಕ್ತಮಂಡಳಿಯವರೂ ಸ್ತಂಭಿತರಾಗಿ ಹೋದರು.

'ಈಗಲಾದರೂ ವಾಸುದೇವರಾಯರೇ, ನಾನು ಸಾಧಾರಣವಾಗಿ ಏಕೆ ದೇವಸ್ಥಾನಗಳಿಗೆ ಹೋಗುವುದಿಲ್ಲವೆಂದು ನೀವು ಗ್ರಹಿಸಿಕೊಳ್ಳಬಹುದು. ಇದರಿಂದಲೇ ನೀವು ನಾನೊಬ್ಬ ನಾಸ್ತಿಕನೆಂದು ತಿಳಿದುಕೊಂಡಿದ್ದೀರಿ. ನಾನು ನಾಸ್ತಿಕನಲ್ಲ. ಆದರೆ ನಿಮ್ಮ ದೇವರಿಗೂ ನನ್ನ ದೇವರಿಗೂ ಅಪರಿಮಿತವಾದ ವ್ಯತ್ಯಾಸವುಂಟು. ನನ್ನ ದೇವರಿಗೆ ನಿತ್ಯ ಸ್ತೋತ್ರವೂ, ಆರಾಧನೆಯೂ ಅವಶ್ಯವಿಲ್ಲ. ನನ್ನ ದೇವರನ್ನು ಹುಡುಕುವ ಅವಶ್ಯಕತೆಯೂ ನನಗಿಲ್ಲ. ತಾಯಿಯು ಹತ್ತಿರವೇ ಇರುವಾಗ್ಗೆ ಯಾವ ಮಗುವು ಅವಳನ್ನು ಹುಡುಕುವುದರಲ್ಲಿ ಉದ್ಯುಕ್ತವಾಗುತ್ತದೆ? ಯಾವ ತಾಯಿಯು ತನ್ನ ಮುದ್ದು ಮಗುವಿನಿಂದ ಹೊಗಳಿಸಿಕೊಳ್ಳುವುದಕ್ಕೆ ಇಷ್ಟಪಡುತ್ತಾಳೆ? 'ಅಮ್ಮಾ, ನೀನು ಎಂತಹ ಚಲುವೆ! ಎಂತಹ ಕರುಣಾಸಾಗರಳು! ನಿನಗೆ ಸಮಾನರಾದವರು ಈ ಲೋಕದಲ್ಲಿ ಯಾರೂ ಇಲ್ಲ. ನಿನ್ನ ಮುಖಕಮಲವು ನಿರಂತರವೂ ನನ್ನ ಹೃದಯದಲ್ಲಿ ಶೋಭಿಸಲಿ! ನಿನ್ನ ಅಡಿದಾವರೆಗಳ ಮೇಲೆ ನಿರಂತರವೂ ನನ್ನ ಶಿರಸ್ಸನ್ನಿಡುವ ಹಾಗೆ ಆಗಲಿ!' ಎಂದು ಮೊದಲು ಹೇಳಿ, ಮತ್ತೆ ಕೊಂಚ ಸಮಯದ ಮೇಲೆ 'ಅಮ್ಮಾ, ನನ್ನ ಇಷ್ಟಾರ್ಥಗಳನ್ನೆಲ್ಲ ನೆರವೇರಿಸು! ನನಗೆ ಮಿಠಾಯಿಯ ಮೇಲೆ ತುಂಬಾ ಪ್ರೀತಿ. ನನ್ನ ಮೇಲೆ ಕರುಣೆಯಿಟ್ಟು ಪ್ರತಿನಿತ್ಯವೂ ನನಗೆ ಒಂದಿಷ್ಟು ಮಿಠಾಯಿಯನ್ನು ಕೊಡು!'—ಎಂದು ಒಂದು ಮಗುವು ತನ್ನ ತಾಯಿಯನ್ನು ಸದಾಕಾಲವೂ ಪ್ರಾರ್ಥಿಸುವುದಾದರೆ ಆ ತಾಯಿಯ ಸ್ಥಿತಿಯು ನಿಜವಾಗಿಯೂ ಕನಿಕರವಾದುದೆಂದು ನಾನು ಪುನಃ ಹೇಳಬೇಕಾದುದಿಲ್ಲ. ಮುದ್ದು ಮಗುವಿನ ತೊದಲು ನುಡಿಗಳೂ,

ಅದರ ಸಹಜವಾದ ಆಟಗಳೂ, ಚಟುವಟಿಕೆಗಳೂ ಇವುಗಳಲ್ಲವೇ ಅದರ ತಾಯಿಗೆ ಅತ್ಯಂತ ಸಂತುಷ್ಟಿಯನ್ನು ಕೊಡುವಂಥವುಗಳು? ಹಾಗೆಯೇ ದೇವರು ನಮ್ಮ ಹತ್ತಿರವಿದ್ದರೂ ನಾವು ಬೇಕೆಂತಲೇ ಅವನನ್ನು ನೋಡದೆ, ಅವನನ್ನು ಹುಡುಕುವ ನೆವದಿಂದ ಲೆಕ್ಕವಿಲ್ಲದ ಅಟ್ಟಹಾಸಗಳನ್ನು ಕಟ್ಟಿಕೊಂಡು ನಮ್ಮ ಅತ್ಯದ್ಭುತಕರವಾದ ಮಾನವ ಜನ್ಮವನ್ನು ವ್ಯರ್ಥ ಮಾಡುವ ಬದಲಾಗಿ, ಅವನ ಇಂಗಿತವನ್ನೇ ತಿಳಿದುಕೊಂಡು, ಅವನ ಕಾರ್ಯಗಳನ್ನೇ ಸಾಧಿಸಿ, ಅಂತಹ ಕಾರ್ಯಗಳಲ್ಲಿ ಅವನ ಸಹಭಾಗಿಗಳಾಗಿ ನಮ್ಮ ಜನ್ಮವನ್ನು ಸಾರ್ಥಕಕ್ಕೆ ಹಾಕುವುದು ಎಷ್ಟೋ ಒಳ್ಳೇದಲ್ಲವೇ?. . . . ವಾಸುದೇವರಾಯರೇ, 'ಸ್ವಾರ್ಥತ್ಯಾಗ ಮತ್ತು ಪರರ ಸುಖದಾಪೇಕ್ಷೆ' ಇದೇ ನನಗೆ ಆ ಭೀಷ್ಮಪಾತ್ರಧಾರಿಯು ಒತ್ತರದಿಂದ ತಿಳಿಸಿದ ವೇದವಾಕ್ಯವು!'

ರಾಮಚಂದ್ರರಾಯನು ಈ ಮಾತುಗಳನ್ನು ಮುಗಿಸುವಷ್ಟರಲ್ಲಿ ಅವರೆಲ್ಲರೂ ಕುಳಿತಿದ್ದ ಕೊಠಡಿಯ ಬಾಗಿಲಿನಲ್ಲಿ ಯಾರೋ ಒಬ್ಬನು ಬಂದು ನಿಂತಿದ್ದಂತೆ ತೋರಿತು. ಅವನು ಉಟ್ಟುಕೊಂಡ ವಸ್ತ್ರವೆಲ್ಲವೂ ಹರಕು ಮುರುಕಾಗಿದ್ದಿತು. ಅವನು ನೋಡಲಿಕ್ಕೆ ಎತ್ತರವಾಗಿಯೂ ತೆಳ್ಳನಾಗಿಯೂ ಇದ್ದನು. ಆದರೆ ಅವನ ಒಮ್ಮೆ ಗಂಭೀರವಾಗಿದ್ದ ಮುಖವು ಕುಡಿಕತನದಿಂದಲೂ ವಿಷಯಲಾಂಪಟ್ಯದಿಂದಲೂ ಬಹಳವಾಗಿ ಬಾಡಿಹೋದಂತೆ ಕಾಣುತ್ತಿತ್ತು. ಅವನೇ ಅಂದು ದೇವೀಪ್ರಸಾದ ನಾಟಕ ಮಂಡಳಿಯ ಭೀಷ್ಮಪ್ರತಿಜ್ಞೆ ಎಂಬ ನಾಟಕದಲ್ಲಿ ಭೀಷ್ಮನ ಭೂಮಿಕೆಯನ್ನು ಧರಿಸಿದ್ದ ವಿಶ್ವೇಶ್ವರರಾಯನಾಗಿದ್ದನು.

ಅವನನ್ನು ನೋಡಿದಾಕ್ಷಣವೇ ರಾಮಚಂದ್ರರಾಯನು ಕೂತಲ್ಲಿಂದೆದ್ದು ಅವನನ್ನು ಅತ್ಯಾದರದಿಂದ ತಾನು ಕೂತುಕೊಂಡಿದ್ದ ಕುರ್ಚಿಯ ಮೇಲೆ ಕುಳ್ಳಿರಿಸಿದನು. ಮತ್ತು ವಾಸುದೇವರಾಯರನ್ನೂ ಆ ಭಕ್ತ ಮಂಡಳಿಯವರನ್ನೂ ನೋಡಿ, 'ವಾಸುದೇವರಾಯರೇ, ನನಗೆ ಆ ರಾತ್ರಿ ಧೂಳಿನಿಂದಲೂ, ಕೆಸರಿನಿಂದಲೂ ಎಬ್ಬಿಸಿ, ನನಗೆ ಪುನಃ ಜೀವದಾನವನ್ನು ಮಾಡಿದ ಮಹಾನುಭಾವರು ಇವರೇ ಆಗಿರುವರು' ಎಂದನು.

ವಾಸುದೇವರಾಯರೂ, ಆ ಭಕ್ತಮಂಡಳಿಯವರೂ ಬೆಚ್ಚಿ ಬಿದ್ದು ಒಬ್ಬರೊಬ್ಬರ ಮುಖವನ್ನು ನೋಡಲಾರಂಭಿಸಿದರು. ರಾಮಚಂದ್ರ ರಾಯನು ಒಂದು ಕ್ಷಣ ಅವರನ್ನೆಲ್ಲ ಮರೆತು ವಿಶ್ವೇಶ್ವರರಾಯನ ಕೂಡ ಕುಶಲಪ್ರಶ್ನೆಗಳನ್ನಾಡುವುದರಲ್ಲಿ ಉದ್ಯುಕ್ತನಾದನು. ಆ ಮೇಲೆ, ವಾಸುದೇವರಾಯರನ್ನು ಕುರಿತು, 'ನನ್ನನ್ನು ಈ ಹೊತ್ತು ನೀವು ಕ್ಷಮಿ ಸಬೇಕು. ಈ ಮಹಾನುಭಾವರೊಡನೆ ನನಗೆ ವಿಶೇಷ ಕೆಲಸವುಂಟು. ನೀವು ಚಿನ್ನದ ತೊಟ್ಟಿಲಿನ ವಿಷಯ ಹೇಳಿದುದನ್ನೆಲ್ಲಾ ಮನಸ್ಸಿನಲ್ಲಿಟ್ಟು ಕೊಂಡಿದ್ದೇನೆ' ಎಂದು ಹೇಳಿ ಪುನಃ ವಿಶ್ವೇಶ್ವರರಾಯನೊಡನೆ ಮಾತ ನಾಡುವವನಾದನು.

ವಾಸುದೇವರಾಯರೂ ಆ ಭಕ್ತಮಂಡಳಿಯವರೂ ರಾಮಚಂದ್ರ ರಾಯನ ಮನೆಯಿಂದ ಕುತ್ತಿಗೆಗೆ ಕೈಹಾಕಿ ಹೊರಗೆ ಅಟ್ಟಲ್ಪಟ್ಟಂತಾ ದರು. ವಾಸುದೇವರಾಯರ ಮುಖವು ಕ್ರೋಧದಿಂದ ಕೆಂಪೇರಿತು. 'ಈ ನೀಚನಿಗೆ ಆ ವಿಶ್ವೇಶ್ವರನು ದೇವರೇ? ನನಗೆ ಇದು ಮೊದಲೇ ತಿಳಿಯಬೇಕಿತ್ತು. ಆ ತರುಣ ರಾಮಕೃಷ್ಣನ ಮಾತನ್ನು ಕೇಳಿ ನಾನು ಹುಚ್ಚನಂತೆ ಇಲ್ಲಿ ಬಂದೆನಲ್ಲ!——ಎಲಾ, ರಾಮಕೃಷ್ಣ!....'

ಆದರೆ ರಾಮಕೃಷ್ಣನು ಅವರೊಡನೆ ಇರಲಿಲ್ಲ. ಅವನು ಆಗಲೇ ಆ ಭಕ್ತಮಂಡಳಿಯ ಮೆಂಬರಿಕೆಗೆ ತರ್ಪಣೆಯನ್ನು ಕೊಟ್ಟು, ರಾಮಚಂದ್ರ ರಾಯನ ಮತ್ತು ವಿಶ್ವೇಶ್ವರರಾಯನ ಹೆಚ್ಚಿನ ಪರಿಚಯವನ್ನು ಮಾಡಿ ಕೊಳ್ಳುವುದರಲ್ಲಿ ಉದ್ಯುಕ್ತನಾಗಿದ್ದನು.

೪

ಒಂದು ವರುಷವು ಕಳೆಯುತ್ತಾ ಬಂತು. ಗೋಕುಲಾಷ್ಟಮಿಯು ಪುನಃ ಸಮೀಪಿಸಿತು. ಆದರೆ ಚಿನ್ನದ ತೊಟ್ಟಿಲಿಗಾಗಿ ವಾಸುದೇವ ರಾಯರೂ ಆ ಭಕ್ತಮಂಡಳಿಯವರೂ ಮಾಡಿದ ಪ್ರಯತ್ನಗಳೆಲ್ಲಾ ನಿಷ್ಫಲವಾಗಿ ಅವರೆಲ್ಲರೂ ಬಹಳ ಚಿಂತಾಕ್ರಾಂತರಾಗಿದ್ದರು.

ಒಂದು ದಿನ ಮಧ್ಯಾಹ್ನ, ಗೋಕುಲಾಷ್ಟಮಿಯೋತ್ಸವಗಳು ಪ್ರಾರಂಭಿಸುವ ಮುಂಚಿನ ದಿನ, ವಾಸುದೇವರಾಯರು ಹೀಗೆಯೇ

ಚಿಂತಾಕ್ರಾಂತರಾಗಿ ದೇವಸ್ಥಾನದ ಜಗಲಿಯಲ್ಲಿ ಕುಳಿತಿದ್ದಾಗ, ಈಗ ರಾಮಚಂದ್ರರಾಯನ ಬಲಗೈಯಂತಿರುವ ರಾಮಕೃಷ್ಣನು, ಒಂದು ಕೂಲಿಯಾಳಿನ ತಲೆಯ ಮೇಲೆ ಒಂದು ಚಲೋದಾದ ಪೆಟ್ಟಿಗೆಯನ್ನಿರಿಸಿ ಕೊಂಡು ವಾಸುದೇವರಾಯರ ಸನ್ನಿಧಾನಕ್ಕೆ ಬಂದನು. ವಾಸುದೇವ ರಾಯರು ಅವನ ಮೇಲೆ ಒಂದು ಕಠೋರವಾದ ದೃಷ್ಟಿಯನ್ನು ಬೀರಿದರು. ಆದರೆ ರಾಮಕೃಷ್ಣನು ಇದನ್ನು ಗಣಿಸದೆ ಪೆಟ್ಟಿಗೆಯನ್ನು ವಾಸುದೇವ ರಾಯರ ಮುಂದಿರಿಸುವಂತೆ ಮಾಡಿ, ಯಾವ ಮಾತನ್ನೂ ಆಡದೆ, ಆಳಿ ನೊಡನೆ ವಾಪಸು ಅಲ್ಲಿಂದ ಹೊರಟು ಹೋದನು

ವಾಸುದೇವರಾಯರು ಕನಸಿನಲ್ಲಿದ್ದಂತೆ ಆ ಪೆಟ್ಟಿಗೆಯ ಬಾಗಿಲನ್ನು ತೆರೆದು ನೋಡಿದರು. ಅತ್ಯಂತ ಮನೋಹರವಾಗಿ ಕಂಗೊಳಿಸುತ್ತಿದ್ದ ಚಿನ್ನದ ತೊಟ್ಟಿಲೊಂದು ಅವರ ಕಣ್ಣಿಗೆ ಬಿತ್ತು.

